

# ಎಸ್. ಎಲ್. ಭೈರಪ್ಪನವರ ಕಾದಂಬರಿಗಳ ಶಿಲ್ಪ'

## - ಒಂದು ಅಧ್ಯಯನ

ಪಿ.ಎಚ್.ಡಿ. ಪದವಿಗಾಗಿ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿ...




ಸಂಶೋಧಕರು :

ಶ್ರೀಮತಿ ಚಂದ್ರಾವತಿ ಶೆಟ್ಟಿ

ಹಿ. ಶ್ರೇ. ಕನ್ನಡ ಉಪನ್ಯಾಸಕರು

ಶ್ರೀ ಶಾರದಾ ಕಾಲೇಜು, ಬಸ್ರೂರು

ಉಡುಪಿ ಜಿಲ್ಲೆ

ಮಾರ್ಗದರ್ಶಕರು :

ಡಾ॥ ಹೊಸ್ಕೆರೆ ಎಸ್. ಶಿವಸ್ವಾಮಿ

ಪ್ರಾಧ್ಯಾಪಕರು, ಮುಖ್ಯಸ್ಥರು, ಕನ್ನಡ ವಿಭಾಗ

ಎಂ. ಜಿ. ಎಂ. ಕಾಲೇಜು, ಉಡುಪಿ

ಮಾರ್ಗದರ್ಶಕರು, ಸ್ನಾತಕೋತ್ತರ ವಿಭಾಗ

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಕುಂಜಿಬೆಟ್ಟು, ಉಡುಪಿ



ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೧೦

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ

ಎಂ.ಜಿ.ಎಂ. ಕಾಲೇಜು, ಅಂಚೆ ಕುಂಜಿಬೆಟ್ಟು, ಉಡುಪಿ - ೫೭೬ ೧೦೨




# 'ಎಸ್. ಎಲ್. ಭೈರಪ್ಪನವರ ಕಾದಂಬರಿಗಳ ಶಿಲ್ಪ' ಒಂದು ಅಧ್ಯಯನ.

ಪಿ.ಎಚ್.ಡಿ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ
ಮಹಾಪ್ರಬಂಧ.

ಸಂಶೋಧಕರು.
**ಶ್ರೀಮತಿ ಚಂದ್ರಾವತಿ ಶೆಟ್ಟಿ,**
ಹಿ. ಶ್ರೇ. ಕನ್ನಡ ಉಪನ್ಯಾಸಕರು,
ಶ್ರೀ ಶಾರದಾ ಕಾಲೇಜು, ಬಸ್ರೂರು.
ಉಡುಪಿ ಜಿಲ್ಲೆ.

ಮಾರ್ಗದರ್ಶಕರು.
**ಡಾ॥ ಹೊಸ್ಕೆರೆ ಎಸ್. ಶಿವಸ್ವಾಮಿ,**
ಪ್ರಾಧ್ಯಾಪಕರು, ಮುಖ್ಯಸ್ಥರು ಕನ್ನಡ ವಿಭಾಗ,
ಎಂ.ಜಿ.ಎಂ. ಕಾಲೇಜು, ಉಡುಪಿ.
ಮಾರ್ಗದರ್ಶಕರು, ಸ್ನಾತಕೋತ್ತರ ವಿಭಾಗ
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ
ಕುಂಜಿಬೆಟ್ಟು, ಉಡುಪಿ.

ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೦೦೦.

**ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ,**
**ಎಂ.ಜಿ.ಎಂ. ಕಾಲೇಜು, ಅಂಚೆ ಕುಂಜಿಬೆಟ್ಟು, ಉಡುಪಿ–೫೭೬೧೦೨.**

# ಪ್ರಮಾಣ ಪತ್ರ

ನಾನು ಸಂಶೋಧನೆ ಮಾಡಿ ರಚಿಸಿದ 'ಎಸ್. ಎಲ್. ಭೈರಪ್ಪನವರ ಕಾದಂಬರಿಗಳ ಶಿಲ್ಪ' ಒಂದು ಅಧ್ಯಯನ ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿ.ಎಚ್.ಡಿ ಪದವಿಗಾಗಿ, ಹಂಪಿಯ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಅರ್ಪಿಸಲೆಂದು, ಉಡುಪಿ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರದ ಆಶ್ರಯದಲ್ಲಿ ಡಾ॥ ಹೊಸ್ಕೆರೆ ಎಸ್. ಶಿವಸ್ವಾಮಿಯವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇತರ ಯಾವುದೇ ಭಾಗವನ್ನು, ಈ ಮೊದಲು ಯಾವುದೇ ವಿಶ್ವವಿದ್ಯಾನಿಲಯದ ಪದವಿಗಾಗಿ ಅಥವಾ ಡಿಪ್ಲೊಮಾ ಪರೀಕ್ಷೆಗಾಗಿ ಯಾವುದೇ ಭಾಷೆಯಲ್ಲಾಗಲಿ ಪ್ರಕಟಣೆಗಾಗಿ ಸಲ್ಲಿಸಿಲ್ಲವೆಂದು ನಾನು ಪ್ರಮಾಣೀಕರಿಸುತ್ತೇನೆ.

(ಶ್ರೀಮತಿ ಚಂದ್ರಾವತಿ ಶೆಟ್ಟಿ)
ಸಂಶೋಧಕರು.

ದಿನಾಂಕ:
ಸ್ಥಳ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ
ಕುಂಜಿಬೆಟ್ಟು, ಉಡುಪಿ.

ಮಾರ್ಗದರ್ಶಕರು

ಡಾ॥ ಹೊಸ್ಕೆರೆ ಎಸ್. ಶಿವಸ್ವಾಮಿ,
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು, ಕನ್ನಡ ವಿಭಾಗ.
ಎಂ.ಜಿ.ಎಂ. ಕಾಲೇಜು, ಉಡುಪಿ.
ಮಾರ್ಗದರ್ಶಕರು, ಸ್ನಾತಕೋತ್ತರ ಸಂಶೋಧನಾ ವಿಭಾಗ,
ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ,
ಕುಂಜಿಬೆಟ್ಟು, ಉಡುಪಿ–೫೭೬೧೦೨.

---

## ಯೋಗ್ಯತಾ ಪತ್ರ

ಶ್ರೀಮತಿ ಚಂದ್ರಾವತಿ ಶೆಟ್ಟಿ ಅವರು 'ಎಸ್. ಎಲ್. ಭೈರಪ್ಪನವರ ಕಾದಂಬರಿಗಳ ಶಿಲ್ಪ'– ಒಂದು ಅಧ್ಯಯನ ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿ.ಎಚ್.ಡಿ ಪದವಿಗಾಗಿ, ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲೆಂದು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಮಹಾಪ್ರಬಂಧವು ಸಂಶೋಧಕರ ಆಸಕ್ತಿ ಹಾಗೂ ಆಳವಾದ ಓದಿನಿಂದ ಕೂಡಿದ, ವಿಮರ್ಶಾತ್ಮಕ ತೌಲನಿಕ ಅಧ್ಯಯನದಿಂದ ರೂಪುಗೊಂಡದ್ದಾಗಿದೆ. ಅಭಿಪ್ರಾಯ ಸಂಗ್ರಹಣೆ, ಸಂದರ್ಶನ ಇದುವರೆಗೆ ಬಂದಿರುವ ವಿಮರ್ಶಾಕೃತಿಗಳು ಮತ್ತು ಲೇಖನಗಳ ಅಧ್ಯಯನದ ಹಿನ್ನೆಲೆಯಲ್ಲಿ ತನ್ನದೇ ಸ್ವಂತನೆಲೆಯಲ್ಲಿ ಭೈರಪ್ಪನವರ ಕಾದಂಬರಿಗಳ 'ಕಥನ ಶಿಲ್ಪ'ದ ನೆಲೆಯನ್ನು ಗುರುತಿಸಿದ್ದಾರೆ.

ಈ ಮಹಾಪ್ರಬಂಧದ ವಿಷಯವನ್ನಾಗಲೀ ಅಥವಾ ಇದರ ಯಾವುದೇ ಭಾಗವನ್ನಾಗಲೀ ಈ ಮೊದಲು ಯಾವುದೇ ವಿಶ್ವವಿದ್ಯಾನಿಲಯದ ಪದವಿಗಾಗಿ ಅಥವಾ ಡಿಪ್ಲೊಮೊ ಪರೀಕ್ಷೆಗಾಗಿ ಸಲ್ಲಿಸಿಲ್ಲವೆಂದು ನಾನು ದೃಢೀಕರಿಸುತ್ತೇನೆ.

ಡಾ॥ ಹೊಸ್ಕೆರೆ ಎಸ್. ಶಿವಸ್ವಾಮಿ,
(ಮಾರ್ಗದರ್ಶಕರು)

ದಿನಾಂಕ:
ಸ್ಥಳ: ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ
ಉಡುಪಿ.

# ಕೃತಜ್ಞತೆ

ಕನ್ನಡ ವಿಶ್ವವಿದ್ಯಾನಿಲಯದಲ್ಲಿ ಸಂಶೋಧನೆ ನಡೆಸಲು ಅವಕಾಶ ಕಲ್ಪಿಸಿದ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ ಉಡುಪಿ, ಇಲ್ಲಿಯ ನಿರ್ದೇಶಕರಾದ ಡಾ। ಎಚ್.ಕೃಷ್ಣಭಟ್ ಹಾಗೂ ಕೇಂದ್ರದ ಎಲ್ಲಾ ಸಿಬ್ಬಂದಿ ವರ್ಗದವರಿಗೆ ವಂದನೆಗಳು.

ಕನ್ನಡ ವಿಶ್ವವಿದ್ಯಾಲಯ ಹಂಪಿಯ ನಿಕಾಯದ ಮುಖ್ಯಸ್ಥರು ಹಾಗೂ ಅಧಿಕಾರಿ ವರ್ಗಕ್ಕೆ ಮತ್ತು ಸಂಶೋಧನಾ ಅಧ್ಯಯನವನ್ನು ನಡೆಸಲು ನನ್ನನ್ನು ಹುರಿದುಂಬಿಸಿದ ಗುರುಗಳಾದ ಡಾ॥ ಕನರಾಡಿ ವಾದಿರಾಜ ಭಟ್ ಹಾಗೂ ಡಾ॥ ಶ್ರೀಧರ ಉಪ್ಪೂರ ಅವರಿಗೂ ಕೃತಜ್ಞತೆಗಳು.

ನಾನು ಆಯ್ಕೆ ಮಾಡಿಕೊಂಡ ವಿಷಯದಲ್ಲಿ ಸರ್ವರೀತಿಯ ಮಾರ್ಗದರ್ಶನ ಮಾಡಿದ, ಮಹಾತ್ಮಗಾಂಧೀಜಿ ಕಾಲೇಜು ಉಡುಪಿ, ಇಲ್ಲಿನ ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ॥ ಹೊಸ್ಕೆರೆ ಎಸ್. ಶಿವಸ್ವಾಮಿ ಅವರನ್ನು ಮಾರ್ಗದರ್ಶಕರನ್ನಾಗಿ ಪಡೆದಿರುವುದು ನನ್ನ ಸೌಭಾಗ್ಯವೆಂದು ತಿಳಿಯುತ್ತೇನೆ. ಅವರ ಅನುಭವ, ಸ್ನೇಹ, ಆತ್ಮೀಯತೆ, ಸಮಾಧಾನ, ಸಹನೆ, ಸೂಕ್ತ ತಿದ್ದುಪಡಿ, ಸಮರ್ಥ ಸಲಹೆಗಳು, ಕಳಕಳಿಯ ಹೃದಯಪೂರ್ವಕ ಅಭಿಪ್ರಾಯಗಳು ಮತ್ತು ಸದಾ ಅವರ ಶುಭಹಾರೈಕೆಗಳು ಈ ಸಂಶೋಧನಾತ್ಮಕ ಮಹಾಪ್ರಬಂಧವು ನಿಶ್ಚಿತ ಸಮಯದಲ್ಲಿ ಪೂರ್ಣಗೊಳ್ಳಲು ಕಾರಣವಾಗಿದೆ. ಇಂತಹ ಗೌರವಾನ್ವಿತ ಸಮರ್ಥ ಮಾರ್ಗದರ್ಶಕ ಪ್ರೊಫೆಸರರ ಉಪಕಾರಗಳನ್ನು ಸ್ಮರಿಸುತ್ತಾ ಹೃದಯಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದೇನೆ. ಸಂಶೋಧನಾ ಕಾರ್ಯಕ್ಕಾಗಿ ಪ್ರೊಫೆಸರರ ಮನೆಗೆ ಹೋಗಿರುವ ಸಂದರ್ಭದಲ್ಲಿ ಅವರ ಧರ್ಮಪತ್ನಿ ಹಾಗೂ ಮಕ್ಕಳು ತೋರಿದ ಆದರಾತಿಥ್ಯ, ಪ್ರೀತಿ, ವಿಶ್ವಾಸಗಳನ್ನು ಸದಾ ಸ್ಮರಿಸುತ್ತೇನೆ.

ನಮ್ಮ ಕಾಲೇಜಿನ ವಿಶ್ವಸ್ಥ ಮಂಡಳಿಯ ಅಧ್ಯಕ್ಷರಾದ ಶ್ರೀ.ಎಚ್.ವಿ.ಕಾಮತ್, ಸಂಚಾಲಕರಾದ ಶ್ರೀ.ಬಿ.ಅಪ್ಪಣ್ಣ ಹೆಗ್ಡೆ, ಮಾಜಿ ಸಂಚಾಲಕರಾದ ದಿ। ಎಸ್.ಶಿವರಾಮ ಶೆಟ್ಟಿ ಹಾಗೂ ಎಲ್ಲಾ ಗಣ್ಯ ಸದಸ್ಯರು ಈ ಸಂಶೋಧನಾ ಅಧ್ಯಯನಕ್ಕೆ ಅನುಮತಿ ನೀಡಿ ಪ್ರೋತ್ಸಾಹಿಸಿದವರು. ಹಾಗೆಯೇ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಎಂ.ಚಂದ್ರಪ್ರಭಾ ಆರ್.ಹೆಗ್ಡೆ, ಕಛೇರಿ ಅಧೀಕ್ಷಕರಾದ ಶ್ರೀಮತಿ ಮಾಲಿನಿ ಮದ್ಯಸ್ಥ, ಶ್ರೀ ಶಾರದಾ ಪದವಿಪೂರ್ವ ಕಾಲೇಜಿನ ನಿವೃತ್ತ ಪ್ರಾಂಶುಪಾಲರಾದ ಪ್ರೊ. ಎನ್.ಪಿ.ರುದ್ರಸ್ವಾಮಿ, ಮಾಜಿ ಪ್ರಾಂಶುಪಾಲರಾದ ಪ್ರೊ. ಕೆ.ಚಂದ್ರಶೇಖರ ಶೆಟ್ಟಿ, ಕಾಲೇಜಿನ ಗ್ರಂಥಪಾಲರಾದ ಶ್ರೀಯುತ ಕುಮಾರ ಸ್ವಾಮಿ, ಕಾಲೇಜಿನ ಎಲ್ಲಾ ಸಹೋದ್ಯೋಗಿ ವೃಂದದವರ ಹಾಗೂ ಕಛೇರಿ ಸಿಬ್ಬಂದಿಯವರ ಪ್ರೋತ್ಸಾಹ ಸಹಕಾರವನ್ನು ಸದಾ ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತಿದ್ದೇನೆ.

ಪ್ರಸ್ತುತ ನಾನು ನಿಯೋಜನೆಗೊಂಡಿರುವ ಶ್ರೀಮತಿ ರುಕ್ಮಿಣಿ ಶೆಡ್ತಿ ಸ್ಮಾರಕ ಸರಕಾರಿ ಪ್ರಥಮ ದರ್ಜೆ ಕಾಲೇಜು ಇಲ್ಲಿನ ಪ್ರಾಚಾರ್ಯರಾದ ಪ್ರೊ. ರಾಜಶೇಖರ್ ಹೆಬ್ಬಾರ್, ಕನ್ನಡ ವಿಭಾಗದ ಮುಖ್ಯಸ್ಥರಾದ ಪ್ರೊ. ರಮೇಶ್ ಆಚಾರಿ, ಕಾಲೇಜಿನ ಎಲ್ಲಾ ಉಪನ್ಯಾಸಕವೃಂದದವರ ಹಾಗೂ ಕಛೇರಿ ಸಿಬ್ಬಂದಿಯವರ ಸಹಕಾರವನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತಿದ್ದೇನೆ.

ಈ ಮಹಾ ಪ್ರಬಂಧ ರಚನೆಯ ಸಿದ್ಧತೆಗೆ ಅಗತ್ಯವಾದ ಮಾಹಿತಿಗಳನ್ನು, ಪುಸ್ತಕಗಳನ್ನು ಒದಗಿಸಿಕೊಟ್ಟಿರುವ ಕರ್ನಾಟಕದ ಬೇರೆ ಬೇರೆ ವಿಶ್ವವಿದ್ಯಾನಿಲಯದ, ಗ್ರಂಥಾಲಯ ಅಧಿಕಾರಿಗಳನ್ನು ಸ್ಮರಿಸುತ್ತಿದ್ದೇನೆ. ಸಂಶೋಧನಾ ಅಧ್ಯಯನಕ್ಕೆ ಅಗತ್ಯವಿರುವ ಕೆಲವೊಂದು ಪುಸ್ತಕಗಳನ್ನು ಒದಗಿಸಿರುವ ನನ್ನ ನಾದಿನಿ ಆಶಾ ಶಿವರಾಮ ಇವರಿಗೂ, ನನ್ನ ಸಹೋದ್ಯೋಗಿಗಳಾದ ಶ್ರೀಮತಿ ಸುಮತಿ ಶೆಣೈ, ಶ್ರೀಯುತ ರಕ್ಷಿತ್ ಕುಮಾರ್ ಶೆಟ್ಟಿ,

ಶ್ರೀಮತಿ ಅಕ್ಷತಾ ಜೆ. ಶೆಟ್ಟಿ ಹಾಗೂ ನನ್ನ ಗೆಳತಿ ಡಾ। ಉಷಾದೇವಿ ಇವರೆಲ್ಲರನ್ನೂ ಕೃತಜ್ಞತಾ ಪೂರ್ವಕವಾಗಿ ಸ್ಮರಿಸುತ್ತೇನೆ.

ಸಂಶೋಧನಾ ಅಧ್ಯಯನ ನಡೆಸಲು ನನಗೆ ಪ್ರೋತ್ಸಾಹಿಸಿದ, ಮುಖ್ಯವಾಗಿ ಸಹಕರಿಸಿದ ಪತಿ ಶ್ರೀ ಅಶೋಕ ಶೆಟ್ಟಿ, ನನ್ನ ಮುದ್ದು ಕಂದಮ್ಮಗಳಾದ ಆಕಾಶ್, ಆದರ್ಶ್ ಮತ್ತು ನನ್ನ ಸಹೋದರ-ಸಹೋದರಿಯನ್ನು ನೆನೆಯದೇ ಇರಲಾರೆ, ತಂದೆ-ತಾಯಿಯರ ಸ್ಥಾನದಲ್ಲಿದ್ದು ಆರ್ಶೀವಾದ ಮಾಡಿರುವ ಅತ್ತೆ-ಮಾವನವರಿಗೂ ಋಣಿಯಾಗಿರುತ್ತೇನೆ.

ನನ್ನ ಸಂಶೋಧನೆಗೆ ಬೆನ್ನು ತಟ್ಟಿ ಪ್ರೋತ್ಸಾಹಿಸಿದ ಎಲ್ಲಾ ಗುರು ಹಿರಿಯರಿಗೂ ನಾನು ಚಿರಋಣಿ. ಈ ಮಹಾ ಪ್ರಬಂಧವನ್ನು ಅಂದವಾಗಿ ಡಿ.ಟಿ.ಪಿ. ಮಾಡಿಕೊಟ್ಟ ಶ್ರೀಮತಿ ಬಿನು ಜಯಚಂದ್ರನ್, ಕು. ಕವಿತಾ ರಾವ್ ಹಾಗೂ ಕು. ಸವಿತಾ ಶೆಟ್ಟಿ ಇವರಿಗೆ ಅನಂತಾನಂತ ಧನ್ಯವಾದಗಳು. ಓಂಕಾರ ಪ್ರಿಂಟಿಂಗ್ ಪ್ರೆಸ್, ಕುಂದಾಪುರ ಇವರು ಮುದ್ರಣದಲ್ಲಿ ಸಹಕರಿಸಿದ್ದಾರೆ. ಇವರೆಲ್ಲರನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತಾ ವಂದಿಸುತ್ತೇನೆ.

(ಚಂದ್ರಾವತಿ ಶೆಟ್ಟಿ)

ಸಂಶೋಧಕರು.

ದಿನಾಂಕ:

ಸ್ಥಳ: ರಾಷ್ಟ್ರಕವಿ ಗೋವಿಂದ ಪೈ
ಸಂಶೋಧನಾ ಕೇಂದ್ರ, ಉಡುಪಿ.

# ಪ್ರಸ್ತಾವನೆ

ಕನ್ನಡ ಕಾದಂಬರಿ ಕ್ಷೇತ್ರದಲ್ಲಿ, ವಸ್ತು ವೈವಿಧ್ಯತೆ, ವಿಭಿನ್ನ ಬಗೆಯ ಚಿತ್ರಣ, ಜೀವನ ದರ್ಶನ ಮತ್ತು ಕಲಾ ನೈಪುಣ್ಯತೆಗಳಿಂದಾಗಿ ಎಸ್.ಎಲ್.ಭೈರಪ್ಪನವರು ತನ್ನದೇ ಆದ ವಿಶಿಷ್ಟತೆಯನ್ನು ಸಾಧಿಸಿರುವ ಕಾದಂಬರಿಕಾರರಾಗಿದ್ದಾರೆ. ಕಾದಂಬರಿ ಕ್ಷೇತ್ರದಲ್ಲಿ ಮೊದಲ ಬಾರಿಗೆ ತತ್ವಶಾಸ್ತ್ರಕ್ಕೂ ಮತ್ತು ಕಾದಂಬರಿಯ ರಚನೆಗೂ ಪರಸ್ಪರ ಪೂರಕ ಸಂಬಂಧವನ್ನು ಕಲ್ಪಿಸಿದ ಇವರು, ತಮ್ಮ ಒಂದೊಂದು ಕಾದಂಬರಿಗಳಲ್ಲೂ ಒಂದೊಂದು ತತ್ವ ಪ್ರತಿಪಾದನೆಯನ್ನು ಸಮರ್ಥವಾಗಿ ಮಾಡಿರುವುದನ್ನು ಗುರುತಿಸಬಹುದಾಗಿದೆ.

ವೈವಿಧ್ಯಮಯ ವಸ್ತುಗಳ ಆಕರ್ಷಕವಾದ ನಿರೂಪಣೆಯಿಂದ ಕೂಡಿರುವ ಇವರ ಕಾದಂಬರಿಗಳಲ್ಲಿ, ಓದುಗರ ಅಂತಃಕರಣವನ್ನು ತಟ್ಟುವ ಪಾತ್ರ ಸೃಷ್ಟಿಯಾಗಿದೆ.

ಹುಟ್ಟು ಚಿಂತಕರಾಗಿರುವ ಭೈರಪ್ಪನವರ ಕಾದಂಬರಿಗಳು ಪಾಶ್ಚಾತ್ಯ ಮತ್ತು ಪೌರ್ವಾತ್ಯ ಚಿಂತನೆಗಳನ್ನು ಒಳಗೊಂಡಿದೆ. ಭೈರಪ್ಪನವರ ಕಾದಂಬರಿಗಳು ಸ್ಥಿತ್ಯಂತರಗೊಳ್ಳುತ್ತಿರುವ ಸಾಮಾಜಿಕ ಸಂದರ್ಭದಲ್ಲಿ ಪಲ್ಲಟಗೊಂಡ ಹಳೆಯ ಬದುಕಿಗೆ, ಬದಲಾಗತೊಡಗಿದ ಸಂಸ್ಕೃತಿಗೆ ತೋರಿರುವ ಸೃಜನಾತ್ಮಕ ಪ್ರಕ್ರಿಯೆಗಳಂತೆ ತೋರುತ್ತವೆ. ಕಾದಂಬರಿ ಕಟ್ಟುವ ಹಿಂದಿನ ಸಕಲ ಸಿದ್ಧತೆಯಲ್ಲಿ ಭೈರಪ್ಪನವರ ಕಲಾತ್ಮಕ ಹಾಗೂ ಸೃಜನಾತ್ಮಕ ಪ್ರಕ್ರಿಯೆಗಳು ಎದ್ದುಕಾಣುತ್ತವೆ. ಸಾಹಿತ್ಯ ಸೃಷ್ಟಿಯ ಪ್ರಚೋದನಾ ಸಾಮಗ್ರಿ ಯಾವುದೇ ಇರಲಿ, ಎಲ್ಲಿಂದಲೇ ಬಂದಿರಲಿ, ಅದು ಸೃಜನಾತ್ಮಕ ನಿಯಮಗಳಿಗನುಸಾರವಾಗಿ ಕಲ್ಪನೆಯಲ್ಲಿ ಬೆಳೆದು, ಅನಂತರ ಕಲ್ಪನೆಯೇ ಸೃಷ್ಟಿಕ್ರಿಯೆಯನ್ನು ಕೈಗೆತ್ತಿಕೊಂಡು 'ರಸ–ಧ್ವನಿ–ಔಚಿತ್ಯ–ಬಂಧ–ರಚನೆ'– ಈ ಮೊದಲಾದ

ಸಾಹಿತ್ಯ ತತ್ವಗಳಿಗೆ ಅನುಸಾರವಾಗಿ ರಚನೆಗೊಂಡಿರುವುದು ಭೈರಪ್ಪನವರ ಕಾದಂಬರಿಗಳಲ್ಲಿ ಗಮನಿಸಬೇಕಾದ ಮಹತ್ತ್ವಪೂರ್ಣ ಅಂಶವಾಗಿದೆ.

ಇದುವರೆಗೆ ಭೈರಪ್ಪನವರ ಕಾದಂಬರಿಗಳ ಕುರಿತಂತೆ ಅನೇಕ ಸಂಶೋಧನ ಪ್ರಬಂಧಗಳು ಬಂದಿವೆ. ಅನೇಕ ವಿಮರ್ಶಕರಿಂದ, ಲೇಖಕರಿಂದ ಹಲವಾರು ಲೇಖನಗಳು ಬಂದಿವೆ. ಈ ಎಲ್ಲಾ ವಿಧದ ಬರಹಗಳಲ್ಲಿ ಭೈರಪ್ಪನವರ ಕಾದಂಬರಿಗಳ ಸ್ವರೂಪ, ವಸ್ತುವಿನ್ಯಾಸ, ಸ್ತ್ರೀಪಾತ್ರಚಿತ್ರಣ, 'ಪರ್ವ' ಕಾದಂಬರಿ ಒಂದಕ್ಕೆ ಸಂಬಂಧಿಸಿರುವಂಥ ಸಂಶೋಧನೆಗಳು ನಡೆದಿವೆ. ಅವರ ಸಾಹಿತ್ಯರಚನೆಗೆ ಸಂಬಂಧಿಸಿದಂತೆ ಕ್ರಿಯಾತ್ಮಕ ಹಾಗೂ ಸೃಜನಾತ್ಮಕವಾದ ಅವರ ಬರವಣಿಗೆಯ 'ಕಥನಶಿಲ್ಪ'ದ ಕಟ್ಟುವಿಕೆಯ ಬಗ್ಗೆ ಸಂಶೋಧನೆ ನಡೆದಿಲ್ಲ. ಈ ಉದ್ದೇಶದಿಂದಾಗಿ ಪ್ರಸ್ತುತ ಸಂಶೋಧನಾ ಅಧ್ಯಯನದಲ್ಲಿ ಭೈರಪ್ಪನವರ ಕಲಾಪ್ರಜ್ಞೆ ಅವರ ಕಾದಂಬರಿಗಳ ಒಟ್ಟು 'ಕಥನಶಿಲ್ಪ'ದ ರಚನೆಯಲ್ಲಿ ಎಷ್ಟರ ಮಟ್ಟಿಗೆ ಜಾಗೃತಗೊಂಡಿದೆ ಎನ್ನುವ ಶೋಧನೆಯನ್ನು ಮಾಡಲಾಗಿದೆ.

ಕನ್ನಡದ ಸಂದರ್ಭದಲ್ಲಿ ತೀರ ಇತ್ತೀಚೆಗೆ ಚಾಲ್ತಿಯಲ್ಲಿ ಬಂದ ರಚನಾವಾದಿ ದೃಷ್ಟಿಕೋನವು ಆಧುನಿಕ ಕನ್ನಡ ಸಾಹಿತ್ಯದ ಮೇಲೆ ಬೀರುತ್ತಿರುವ ಪರಿಣಾಮ ಗಂಭೀರವಾದುದು. ಇದುವರೆಗೆ ರಚನೆಗೊಂಡಿರುವ ಸಾಹಿತ್ಯವನ್ನು ರಚನಾವಾದಿ ದೃಷ್ಟಿಕೋನದಿಂದ ಅಧ್ಯಯನ ಮಾಡುವ ಪ್ರಕ್ರಿಯೆ ಈಗಾಗಲೇ ಪ್ರಾರಂಭಗೊಂಡಿದೆ. ಇಂಥ ಒತ್ತಾಸೆಯ ಫಲವಾಗಿ ಭೈರಪ್ಪನವರ ಕಾದಂಬರಿಗಳನ್ನು ರಚನಾವಾದಿಯ ನೆಲೆಯಲ್ಲಿ ಅಧ್ಯಯನ ಮಾಡುವುದು ಅಗತ್ಯವಾಗಿ ತೋರಿದೆ. ಈ ಹಿನ್ನೆಲೆಯಲ್ಲಿ 'ಎಸ್.ಎಲ್.ಭೈರಪ್ಪನವರ ಕಾದಂಬರಿಗಳ ಶಿಲ್ಪ' ಒಂದು ಅಧ್ಯಯನ ಎಂಬ ಶೀರ್ಷಿಕೆಯಡಿ ಈ ಪ್ರಬಂಧದಲ್ಲಿ ಸಂಶೋಧನೆ ನಡೆಸಲಾಗಿದೆ.

ಇದೊಂದು ಹೊಸ ಬಗೆಯ ಓದುವಿಕೆಯ, ಹೊಸ ಬಗೆಯ ಅರ್ಥೈಸುವಿಕೆಯ ವಿಧಾನವೆಂದು ಪರಿಗಣಿಸಿ, ಭೈರಪ್ಪನವರ ಕಾದಂಬರಿಗಳ ಓದಿಗೆ ಈ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಆ ಮೂಲಕ ಭೈರಪ್ಪನವರ ಕೃತಿ ಕಟ್ಟುವ 'ಕಥನಶಿಲ್ಪ' ಕಾರ್ಯ ಇತರ ಕಾದಂಬರಿಗಳಿಗಿಂತ ಹೇಗೆ, ಎಲ್ಲಿ ಭಿನ್ನವಾಗಿವೆ? ಎನ್ನುವುದನ್ನು ಶೋಧನೆ ಮಾಡಲಾಗಿದೆ. ಎಸ್.ಎಲ್.ಭೈರಪ್ಪನವರ ಕಾದಂಬರಿಯ 'ಶಿಲ್ಪ'ದ ಕುರಿತಂತೆ ಗ್ರಹಿಸುವಾಗ ಭೈರಪ್ಪನವರ ಚಿಂತನೆಗೂ, ಅವರು ಕಾದಂಬರಿ ಕಟ್ಟುವ ರೀತಿಗೂ ಸಮನ್ವಯತೆಯನ್ನು ಗುರುತಿಸುವ ಕಾರ್ಯವನ್ನು ಸಂಶೋಧನಾ ಅಧ್ಯಯನದಲ್ಲಿ ಮಾಡಲಾಗಿದೆ.

ಪ್ರಸ್ತುತ 'ಎಸ್.ಎಲ್.ಭೈರಪ್ಪನವರ ಕಾದಂಬರಿಗಳ ಶಿಲ್ಪ' ಒಂದು ಅಧ್ಯಯನ ಎಂಬ ಶೀರ್ಷಿಕೆಯ ಸಂಶೋಧನಾ ಪ್ರಬಂಧದ ಅಧ್ಯಾಯಗಳನ್ನು ಈ ಕೆಳಗಿನಂತೆ ಯೋಜಿಸಿ ಅಧ್ಯಯನಕ್ಕೆ ಅಳವಡಿಸಲಾಗಿದೆ.

## ಅಧ್ಯಾಯ ೧: ಅಧ್ಯಯನದ ಉದೇಶ, ವ್ಯಾಪ್ತಿ ಮತ್ತು ಸ್ವರೂಪ.

ಈ ಅಧ್ಯಾಯದಲ್ಲಿ ಒಟ್ಟು ನಿಬಂಧಕ್ಕೆ ಸಂಬಂಧಪಟ್ಟ ಪೀಠಿಕೆಯನ್ನು ನೀಡಲಾಗಿದೆ. ಪ್ರಸ್ತುತ ಶೀರ್ಷಿಕೆಯಲ್ಲಿ ಸಂಶೋಧನೆ ಮಾಡಿರುವ ಉದ್ದೇಶವನ್ನು ಸ್ಪಷ್ಟಪಡಿಸಲಾಗಿದೆ. ಒಟ್ಟು ನಿಬಂಧದ ವ್ಯಾಪ್ತಿ ಹಾಗೂ ಒಟ್ಟು ಸ್ವರೂಪವನ್ನು ಸ್ಥೂಲವಾಗಿ ಒದಗಿಸಲಾಗಿದೆ.

## ಅಧ್ಯಾಯ ೧.೧: ಸಾಧನ ವಿಧಾನ.

ಅಧ್ಯಾಯ ೧ಕ್ಕೆ ಸಂಬಂಧಿಸಿರುವ ಈ ಭಾಗದಲ್ಲಿ ಸಂಶೋಧನ ಅಧ್ಯಯನದಲ್ಲಿ ಅಳವಡಿಸಿಕೊಂಡಿರುವ ಸಾಧನ ಮತ್ತು ವಿಧಾನಗಳನ್ನು ಈ ಮುಂದಿನ ಕ್ರಮಗಳಲ್ಲಿ ತಿಳಿಸಲಾಗಿದೆ.

- ಎಸ್.ಎಲ್.ಭೈರಪ್ಪನವರ ಎಲ್ಲಾ ಕಾದಂಬರಿಗಳನ್ನು ಇಲ್ಲಿ ಅಧ್ಯಯನದ ಅನುಕೂಲತೆಗೆ ತಕ್ಕಂತೆ ಬಳಸಿಕೊಳ್ಳಲಾಗಿದೆ. ಪ್ರಧಾನ ಕಾದಂಬರಿಯ 'ಶಿಲ್ಪ'ವನ್ನು ವಿಶೇಷವಾಗಿ ಅಧ್ಯಯನದಲ್ಲಿ ವಿವೇಚಿಸಲಾಗಿದೆ.
- ಅಧ್ಯಯನದ ವ್ಯಾಪ್ತಿಗೆ ಅನುಗುಣವಾಗಿ ವಿವರಣಾತ್ಮಕ, ವಿಶ್ಲೇಷಣಾತ್ಮಕ, ತೌಲನಿಕ ಹಾಗೂ ತಲಸ್ಪರ್ಶಿ ವಿಧಾನಗಳನ್ನು ಅನುಸರಿಸಲಾಗಿದೆ.
- ಪಾತ್ರ ಸೃಷ್ಟಿಯ 'ಕಥನಶಿಲ್ಪ'ವನ್ನು ಗುರುತಿಸುವಾಗ ಮನೋವಿಶ್ಲೇಷಣಾತ್ಮಕ ವಿವೇಚನೆಯ ವಿಧಾನವನ್ನು ಅನುಸರಿಸಲಾಗಿದೆ.
- ಭೈರಪ್ಪನವರ ಕಾದಂಬರಿಗೆ ಸಂಬಂಧಿಸಿ ಇದುವರೆಗೆ ನಡೆಸಿರುವ ಎಲ್ಲಾ ವಿಮರ್ಶಾಕೃತಿ ಹಾಗೂ ಸಂಶೋಧನಾ ಅಧ್ಯಯನ ಪ್ರಬಂಧಗಳನ್ನು ಪರಿಗಣಿಸಿ ಪರಿಶೀಲಿಸಲಾಗಿದೆ. ಕಾದಂಬರಿಕಾರ ಎಸ್.ಎಲ್.ಭೈರಪ್ಪನವರೊಂದಿಗೆ ಮೌಖಿಕ ಸಂದರ್ಶನವನ್ನು ನಡೆಸಿ, ಅವರೊಂದಿಗೆ ಸಂವಾದ ಮಾಡಿದ ವಿಷಯವನ್ನು

ಹಿನ್ನೆಲೆಯಾಗಿಟ್ಟುಕೊಂಡು ನಿಬಂಧಕ್ಕೆ ಸ್ವರೂಪವನ್ನು ನೀಡಲಾಗಿದೆ.

## ಅಧ್ಯಾಯ ೨: 'ಶಿಲ್ಪ' ಅರ್ಥ–ವ್ಯಾಪ್ತಿ.

ಪ್ರಸ್ತುತ ನಿಬಂಧದ ಶೀರ್ಷಿಕೆಯಲ್ಲಿ ಬಳಕೆ ಮಾಡಿರುವ 'ಶಿಲ್ಪ' ಎನ್ನುವ ಶಬ್ದದ ಬಗೆಗಿನ ಅರ್ಥವ್ಯಾಪ್ತಿಯ ವಿವರಣೆಯನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ. ಕಾದಂಬರಿ ಕೃತಿಯಲ್ಲಿ 'ಕಥನಕ್ರಿಯೆ', 'ಕಥನಶಿಲ್ಪ'- ಈ ಮುಂತಾದ ಹೆಸರುಗಳಿಂದ ಕರೆಯಲ್ಪಡುವ 'ಶಿಲ್ಪ'ವು 'ರೂಪ, ಆಕೃತಿ, ನೆಯ್ಗೆ. ರಚನೆ, ಬಂಧ'- ಈ ಮುಂತಾದ ಸಾಹಿತ್ಯಿಕ ತತ್ವಕ್ಕೆ ಅನುಗುಣವಾದ ಶಬ್ದವಾಗಿ ಇಲ್ಲಿ ರೂಪು ತಳೆದಿದೆ.

ಕೃತಿಯು ತನ್ನ ಮೂಲ ಸಾಮಗ್ರಿಗಳನ್ನು ಉದ್ದೇಶಕ್ಕೆ ತಕ್ಕಂತೆ ಪರಿವರ್ತಿಸಿಕೊಳ್ಳುವುದೇ 'ಶಿಲ್ಪ'. ಈ ಶಬ್ದವನ್ನು ಸಾಹಿತ್ಯದ ಭಾಷಿಕ ರಚನೆಗೆ ಸಂಬಂಧಿಸಿ ಹೇಳಿರುವುದಾಗಿದೆ. ಇದರಲ್ಲಿ 'ಶಿಥಿಲ' ಹಾಗೂ 'ಸಾವಯವ' ಎನ್ನುವ ಎರಡು ವಿಧಗಳನ್ನು ಗುರುತಿಸಬಹುದಾಗಿದೆ. ಈ ಶಬ್ದವು ಅನ್ಯಕಲಾ ಪ್ರಕಾರಗಳ ಮೀಮಾಂಸೆಯಿಂದ ಬಂದಿರುವುದಾಗಿದೆ. ವಾಸ್ತುಶಿಲ್ಪ ಹಾಗೂ ಚಿತ್ರಕಲೆಗಳ ಸಂದರ್ಭದ ಪರಿಕಲ್ಪನೆಯೊಂದನ್ನು ಸಾಹಿತ್ಯಮೀಮಾಂಸೆಯಲ್ಲಿ ಅಳವಡಿಸುವ ಪ್ರಯತ್ನವೇ 'ಶಿಲ್ಪ'ದ ಅಧ್ಯಯನವಾಗಿದೆ.

## ಕನ್ನಡ ಕಾದಂಬರಿ 'ಶಿಲ್ಪ'– ಪ್ರಾರಂಭದಿಂದ ಎಸ್.ಎಲ್.ಭೈರಪ್ಪನವರೆಗೆ:

ಅಧ್ಯಾಯ ೩ಕ್ಕೆ ಸಂಬಂಧಿಸಿರುವ ಈ ಭಾಗದಲ್ಲಿ ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಕನ್ನಡ ಕಾದಂಬರಿಗಳ ಸ್ವರೂಪ ರೂಪುಗೊಂಡ ಬಗೆಯನ್ನು

ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಮುಖ್ಯವಾಗಿ ಮನರಂಜನೆಯನ್ನು ಗುರಿಯಾಗಿರಿಸಿಕೊಂಡ ಗದ್ಯ ಕಲ್ಪನೆಯನ್ನು ಪಡೆದುಕೊಂಡಿರುವ ವಿಚಾರವನ್ನು ವಿವರಿಸಲಾಗಿದೆ. ಭಾರತೀಯ ಸಾಹಿತ್ಯದ ಒಂದು ಮುಖ್ಯ ಲಕ್ಷಣ 'ಶಿಥಿಲಬಂಧ'. ಕನ್ನಡದ ಮೊದಲಿನ ಸಾಮಾಜಿಕ ಕಾದಂಬರಿಗಳಲ್ಲೆಲ್ಲಾ ಈ ತರಹದ 'ಶಿಥಿಲಬಂಧ'ದ ಸ್ವರೂಪವನ್ನು ತಾಳಿರುವುದು ಇಲ್ಲಿ ವಿಶೇಷವಾಗಿ ಗಮನಿಸಬೇಕಾದ ಅಂಶವಾಗಿದೆ.

ಕನ್ನಡದ ಮೊದಲ ಕಾದಂಬರಿಕಾರರ ಕಾದಂಬರಿಯ ಕಥನ ಕಟ್ಟುವಿಕೆಯ ನೆಲೆಯೊಂದಿಗೆ ಎಸ್.ಎಲ್.ಭೈರಪ್ಪನವರ ಕಾದಂಬರಿಗಳ 'ಕಥನಶಿಲ್ಪ'ದ ಒಂದು ನೋಟವನ್ನು ಈ ಅಧ್ಯಾಯದಲ್ಲಿ ಒದಗಿಸುವ ಪ್ರಯತ್ನ ಕೈಗೊಳ್ಳಲಾಗಿದೆ.

## ಅಧ್ಯಾಯ ೩:ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಭೈರಪ್ಪನವರ ಕೊಡುಗೆ.

ಸಾಮಾಜಿಕತೆಯ ಪ್ರಶ್ನೆ ಹಾಗೂ ಜನಪ್ರಿಯತೆಯ ಹಿನ್ನೆಲೆಯಲ್ಲಿ ಆಧುನಿಕ ಕಾದಂಬರಿಕಾರರಲ್ಲಿ ಎಸ್.ಎಲ್.ಭೈರಪ್ಪನವರನ್ನು, ಅ.ನ.ಕೃಷ್ಣರಾಯ ಹಾಗೂ ಶಿವರಾಮ ಕಾರಂತರಿಗೆ ತೌಲನಿಕವಾಗಿ ಹೋಲಿಸಿ ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

ತಮ್ಮ ವಿಭಿನ್ನ ಕಾದಂಬರಿಗಳ ಮೂಲಕ ಕನ್ನಡ ಕಾದಂಬರಿಗಳನ್ನು ಶ್ರೀಮಂತಗೊಳಿಸಿದ ಬಗ್ಗೆ ಹಾಗೆಯೇ ಭೈರಪ್ಪನವರದೇ ಆದ ಒಂದು ಓದುಗ ವರ್ಗ ನಿರ್ಮಾಣಗೊಂಡ ಬಗೆಗೆ ವಿವೇಚಿಸಲಾಗಿದೆ.

ಬುದ್ಧಿ ಪ್ರಖರತೆ, ಅನುಭವ ವೈಶಾಲ್ಯ, ಜೀವನ ಶ್ರದ್ಧೆ, ಕಲಾತ್ಮಕ ನಿರೂಪಣೆ, ಸಂಯಮಪೂರ್ಣ ರಚನೆ ಈ ವಿಶಿಷ್ಟ ಗುಣಗಳಿಂದಾಗಿ ಭೈರಪ್ಪನವರ

ಕಾದಂಬರಿಗಳು ಅವರಿಗೆ ಜನಪ್ರಿಯತೆಯನ್ನು ತಂದುಕೊಟ್ಟ ನೆಲೆಯನ್ನು ವಿಶಿಷ್ಟವಾಗಿ ನಿರೂಪಿಸಲಾಗಿದೆ.

ವಿಭಿನ್ನ ತಾತ್ವಿಕ ಚಿಂತನೆ ಹಾಗೂ ಸಂಘರ್ಷ, ಎಲ್ಲಿಯೋ ಒಂದು ಕಡೆ ಪಟ್ಟು ಬಿಡದ ತಮ್ಮ ಸಿದ್ಧಾಂತಕ್ಕೆ ವಾಲುವ 'ಕಥನಶಿಲ್ಪ'ದ ಕ್ರಿಯೆ ಇವುಗಳಿಂದಾಗಿ ಕಾದಂಬರಿಕಾರ ಭೈರಪ್ಪನವರ ವಿರೋಧಿ ಅಲೆಯನ್ನು ಗುರುತಿಸಲಾಗಿದೆ.

## ಅಧ್ಯಾಯ ೪: ಭೈರಪ್ಪನವರ ಕಾದಂಬರಿಗಳ 'ಕಥನಶಿಲ್ಪ'.

ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಈ ಅಧ್ಯಾಯವನ್ನು ಮೂರು ಭಾಗಗಳಲ್ಲಿ ವಿಭಾಗಿಸಲಾಗಿದೆ.

ಭೈರಪ್ಪನವರ ಕಾದಂಬರಿಗಳನ್ನು ಮೊದಲ ಘಟ್ಟ, ಎರಡನೇ ಘಟ್ಟ, ಮೂರನೇ ಘಟ್ಟದ ಕಾದಂಬರಿಗಳೆಂದು ವಿಭಾಗಿಸಿಕೊಂಡು ಪ್ರತಿಯೊಂದು ಘಟ್ಟದಲ್ಲಿ ಬರುವ ಕಾದಂಬರಿಗಳಿಗೆ ಅವುಗಳದೇ ಆದ ಪ್ರಸ್ತಾವನೆಯನ್ನು ನೀಡಿ, ತದನಂತರ ಪ್ರತಿಯೊಂದು ಕಾದಂಬರಿಯ 'ಕಥನಶಿಲ್ಪ'ವನ್ನು ವಿವೇಚಿಸಲಾಗಿದೆ. ಪ್ರಧಾನವಾದ ಕಾದಂಬರಿಗಳ 'ಕಥನಶಿಲ್ಪ' ಹಾಗೂ 'ಕಥನಕ್ರಿಯೆ'ಯ ವಿವೇಚನೆಯನ್ನು ಪ್ರಾಮುಖ್ಯವಾಗಿ ವಿವೇಚಿಸಲಾಗಿದೆ. ಆ ಮೂಲಕ ಒಟ್ಟು ಕಾದಂಬರಿಯ 'ಕಥನಶಿಲ್ಪ'ದ ವಿಶೇಷತೆಯನ್ನು ಗುರುತಿಸಲಾಗಿದೆ.

ಮೊದಲ ಘಟ್ಟದ ಕಾದಂಬರಿಗಳಲ್ಲಿ ಘಟನಾ ಪ್ರಧಾನತೆಯನ್ನು, ಎರಡನೇ ಘಟ್ಟದ ಕಾದಂಬರಿಗಳಲ್ಲಿ ಪಾತ್ರದ ಪ್ರಧಾನತೆಯನ್ನು, ಮೂರನೇ ಘಟ್ಟದ ಕಾದಂಬರಿಗಳಲ್ಲಿ ವೈಚಾರಿಕತೆ ಹಾಗೂ ಸಂಘರ್ಷದ ತಿರುಹುಗಳನ್ನು ಕಥನ ವಿವೇಚನೆಯ ಸಂದರ್ಭದಲ್ಲಿ ಗುರುತಿಸಲಾಗಿದೆ.

## ಅಧ್ಯಾಯ ೫: ಪಾತ್ರ ನಿರ್ಮಾಣದ 'ಕಥನಶಿಲ್ಪ'.

ಪ್ರಸ್ತುತ ಅಧ್ಯಾಯವು ಪಾತ್ರ ಸೃಷ್ಟಿಯ 'ಕಥನಶಿಲ್ಪ'ದ ದೃಷ್ಟಿಯಲ್ಲಿ ಪ್ರಮುಖವಾದುದು. ಇಲ್ಲಿ ಎಸ್.ಎಲ್.ಭೈರಪ್ಪನವರು ತಮ್ಮ ಕಾದಂಬರಿಗಳಲ್ಲಿ ತರುವ ಪಾತ್ರಗಳ ಸೃಷ್ಟಿ ಕೌಶ್ಯಲತೆಯ ಬಗ್ಗೆ ವಿವೇಚನೆ ನಡೆದಿದೆ. ಈ ಅಧ್ಯಾಯದಲ್ಲಿ ಎರಡು ಭಾಗಗಳಲ್ಲಿ ಪಾತ್ರ ಸೃಷ್ಟಿಯ ವಿವೇಚನೆಯನ್ನು ಮಾಡಲಾಗಿದೆ. ಪಾತ್ರಗಳ 'ಕಥನಶಿಲ್ಪ'ಕ್ಕೆ ಸಂಬಂಧಿಸಿದ ಪ್ರಸ್ತಾವನೆಯ ವಿಚಾರವನ್ನು ಪ್ರಾರಂಭದಲ್ಲಿ ತರಲಾಗಿದೆ.

ಎಸ್.ಎಲ್.ಭೈರಪ್ಪನವರ ಕಾದಂಬರಿಗಳ ಓದಿನ ನಂತರ ಓದುಗರ ಮನಸ್ಸಿನಲ್ಲಿ, ಮುಖ್ಯವಾಗಿ ಸಂಶೋಧಕರ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದಿರುವಂತಹ ಕೆಲವೊಂದು ಸ್ತ್ರೀ ಪಾತ್ರಗಳು ಒಟ್ಟು ಕಾದಂಬರಿಯ ನಿರ್ಮಾಣದ 'ಕಥನಶಿಲ್ಪ'ಕ್ಕೆ ನೀಡಿರುವ ಕೊಡುಗೆಯನ್ನು ವಿವೇಚಿಸಲಾಗಿದೆ.

ಎಸ್.ಎಲ್.ಭೈರಪ್ಪನವರ ಕಾದಂಬರಿಗಳಲ್ಲಿ ಸೃಷ್ಟಿಗೊಂಡಿರುವ ಪ್ರಧಾನ ಪುರಷ ಪಾತ್ರಗಳ ವಿವೇಚನೆಯನ್ನು ಇಲ್ಲಿ ಮಾಡಲಾಗಿದೆ. ಭೈರಪ್ಪನವರ ಕಾದಂಬರಿಗಳ ಒಟ್ಟು 'ಕಥನಶಿಲ್ಪ'ಕ್ಕೆ ಸ್ತ್ರೀ ಪುರುಷ ಪಾತ್ರಗಳು ನೀಡಿರುವ ದೇಣಿಗೆಯನ್ನು ವಿಶೇಷವಾಗಿ ಇಲ್ಲಿ ತರಲಾಗಿದೆ.

## ಅಧ್ಯಾಯ ೬: ಭೈರಪ್ಪನವರ ಸಾಧನೆ–ಸಿದ್ಧಿ ಜನಪ್ರಿಯತೆ.

ಪ್ರಸ್ತುತ ಅಧ್ಯಾಯದಲ್ಲಿ ಕನ್ನಡ ಕಾದಂಬರಿ ಲೋಕದಲ್ಲಿ ಭೈರಪ್ಪನವರು ಮಾಡಿರುವ ಸಾಧನೆ, ಹೊಂದಿರುವ ಸಿದ್ಧಿ ಹಾಗೂ ಪಡೆದಿರುವ ಜನಪ್ರಿಯತೆ ಇವುಗಳ ಬಗ್ಗೆ ಜನಸಾಮಾನ್ಯರು, ವಿಮರ್ಶಾ ವರ್ಗ ಹಾಗೂ ಪಂಡಿತ ವರ್ಗದವರು ಹೇಳಿರುವ

ಹೇಳಿಕೆಗಳನ್ನು ಇಟ್ಟುಕೊಂಡು ಕಾದಂಬರಿಕಾರರ ವ್ಯಕ್ತಿತ್ವದ ವಿಶೇಷತೆಯನ್ನು, ಸಂಕೀರ್ಣತೆಯನ್ನು ವಿವೇಚನೆಗೆ ಗುರಿಪಡಿಲಾಗಿದೆ.

## ಅಧ್ಯಾಯ ೭: ಸಮಾಪನ-ಅಧ್ಯಯನದ ಫಲಶೃತಿ.

ಪ್ರಸ್ತುತ ಅಧ್ಯಾಯವು ಒಟ್ಟು ಸಂಶೋಧನೆಯ ಉಪಸಂಹಾರದ ಭಾಗವಾಗಿರುತ್ತದೆ. ಇಲ್ಲಿ ಅಧ್ಯಯನದ ಫಲಶೃತಿಯನ್ನು ಸಂಗ್ರಹಿಸಿ ಕೊಡಲಾಗಿದೆ.

## ಅಧ್ಯಾಯ ೮: ಗ್ರಂಥಋಣ.

ಮೊದಲ ಭಾಗದಲ್ಲಿ ಆಕರ ಸಾಮಾಗ್ರಿಗಳನ್ನು ಒದಗಿಸಲಾಗಿದೆ. ಅಧ್ಯಯನಕ್ಕೆ ಒಳಪಡಿಸಿರುವ ಭೈರಪ್ಪನವರ ಕಾದಂಬರಿಗಳ ಪಟ್ಟಿ ಅವರ ಆತ್ಮ ವೃತ್ತಾಂತ ಸಾಹಿತಿಕ ಕೃತಿಗಳು ಹಾಗೂ ಭೈರಪ್ಪನವರ ಕಾದಂಬರಿಗಳ ಕುರಿತಂತೆ ಬಂದಿರುವ ಅನೇಕ ವಿಮರ್ಶಾಕೃತಿ ಹಾಗೂ ಲೇಖನಗಳ ಪಟ್ಟಿ ಸಂಶೋಧನಾ ಪ್ರಬಂಧಗಳ ಪಟ್ಟಿಯನ್ನು ಒದಗಿಸಲಾಗಿದೆ.

ಎರಡನೆ ಭಾಗದಲ್ಲಿ ಪೂರಕ ಪರಾಮರ್ಶನ ಗ್ರಂಥಗಳ ಪಟ್ಟಿಯನ್ನು ನೀಡಲಾಗಿದೆ. ಈ ಭಾಗದಲ್ಲಿ ಅಧ್ಯಯನಕ್ಕಾಗಿ ಓದಿರುವ ಪೂರಕ ಕಾದಂಬರಿ, ಲೇಖನ, ವಿಮರ್ಶಾ ಬರಹ, ಸಂದರ್ಶನ, ನಿಯತಕಾಲಿಕೆ ಇವುಗಳ ಪಟ್ಟಿಯನ್ನು ನೀಡಲಾಗಿದೆ.

****************

# ವಿಷಯಾನುಕ್ರಮಣಿಕೆ

# ಅಧ್ಯಾಯ ೧

## ಅಧ್ಯಯನದ ಉದ್ದೇಶ ಸ್ವರೂಪ ವ್ಯಾಪ್ತಿ

ಕನ್ನಡದಲ್ಲಿ ಇಂದು ಕಾದಂಬರಿ ಅತ್ಯಂತ ಸಮೃದ್ಧ ಹಾಗೂ ಜನಪ್ರಿಯವಾಗಿ ಬೆಳೆಯುತ್ತಿರುವ ಸಾಹಿತ್ಯ ಪ್ರಕಾರ. ಸ್ವಾತಂತ್ರ್ಯ ಪೂರ್ವದಲ್ಲಿ ಬಂದ ಕನ್ನಡ ಕಾದಂಬರಿಗಳು ಬರವಣಿಗೆಯ ಹಂತದಲ್ಲಿ, ಸಾಮಾನ್ಯ ಓದುಗರನ್ನು ತಲುಪಲು ಭಾಷೆಯನ್ನು ಸರಳಗೊಳಿಸುವಲ್ಲಿ ಪ್ರಗತಿಯನ್ನು ಸಾಧಿಸಿರುವುದು ಕಂಡು ಬಂದರೆ, ಸ್ವಾತಂತ್ರ್ಯಾನಂತರದ ದಶಕಗಳಲ್ಲಿ ಕಾದಂಬರಿಗಳು ವಸ್ತು–ತಂತ್ರ–ಭಾಷೆ–ನಿರೂಪಣೆ ಮೊದಲಾದವುಗಳಲ್ಲಿ ಅನನ್ಯತೆಯನ್ನು ತೋರಿರುವುದು ಕಂಡುಬರುತ್ತದೆ.

ಆಧುನಿಕ ಕನ್ನಡ ಕಾದಂಬರಿ ಪ್ರಕಾರದಲ್ಲಿ ೧೯೪೦–೫೦ರ ನಂತರದಲ್ಲಿ ಕಾಣಿಸಿಕೊಂಡ ಕಾದಂಬರಿಗಳ ವಸ್ತು–ತಂತ್ರ–ಭಾಷೆ–ನಿರೂಪಣೆಯ ಪ್ರಯೋಗಗಳಲ್ಲಿ ಅನೇಕ ಮಂದಿ ಕನ್ನಡ ಕಾದಂಬರಿಕಾರರು ಸಾಧನೆಗೈದಿರುತ್ತಾರೆ. ಇವರಲ್ಲಿ ಅ.ನ.ಕೃಷ್ಣರಾಯರು, ಶಿವರಾಮ ಕಾರಂತರು ಮತ್ತು ಎಸ್.ಎಲ್.ಭೈರಪ್ಪನವರು ಪ್ರಮುಖರಾಗಿರುತ್ತಾರೆ. ಈ ಮೂರು ಮಂದಿ ಕಾದಂಬರಿಕಾರರ ಕಾದಂಬರಿಗಳಲ್ಲಿ ಸಾಮಾಜಿಕ ಮತ್ತು ವೈಚಾರಿಕ ಪ್ರಜ್ಞೆಯ ದೃಷ್ಟಿಕೋನ ಸಮಾನವಾಗಿ ಮೂಡಿಬಂದಿರುವುದು ಅಧ್ಯಯನದ ದೃಷ್ಟಿಯಿಂದ ಗಮನಿಸಬೇಕಾದ ಸಂಗತಿಯಾಗಿದೆ.

ಕಾದಂಬರಿಗಳ ವಸ್ತು, ತಂತ್ರ, ಭಾಷೆ, ನಿರೂಪಣೆ ಪ್ರಯೋಗಗಳಲ್ಲಿ ಎಸ್.ಎಲ್.ಭೈರಪ್ಪನವರು ಕೊಟ್ಟಕೊಡುಗೆಯನ್ನು ಅಧ್ಯಯನ ಮಾಡುವಲ್ಲಿ, ಅವರಿಗೆ ಪೂರ್ವದಲ್ಲಿ ಈ ದೃಷ್ಟಿಯಿಂದಲೇ ಕನ್ನಡ ಕಾದಂಬರಿಗೆ ವಿಶಿಷ್ಟ ಕೊಡುಗೆಯನ್ನು ಕೊಟ್ಟ ಅ.ನ.ಕೃ. ಮತ್ತು ಶಿವರಾಮ ಕಾರಂತರನ್ನು ಗಮನಿಸಬೇಕಾಗುತ್ತದೆ. ತಾವು ಬರೆದ

ಕಾದಂಬರಿಗಳಲ್ಲಿ ತೋರಿರುವ ಸಾಮಾಜಿಕ ಮತ್ತು ವೈಚಾರಿಕ ಪ್ರಜ್ಞೆಯ ಸಮಾನತೆಯ ದೃಷ್ಟಿಯಿಂದ, ಈ ಮೂವರ ಕಾದಂಬರಿಗಳಲ್ಲಿರುವ ಸಮಾನ ಅಂಶಗಳನ್ನು ಗಮನಿಸಿ, ಭೈರಪ್ಪನವರಿಗಿಂತ ಮೊದಲು ಕಾದಂಬರಿ ಕ್ಷೇತ್ರಕ್ಕೆ ವಿಶಿಷ್ಟ ಕೊಡುಗೆಯನ್ನು ನೀಡಿರುವ ಅ.ನ.ಕೃ., ಶಿವರಾಮ ಕಾರಂತರ ಕೊಡುಗೆಯ ಹಿನ್ನೆಲೆಯಲ್ಲಿ ಭೈರಪ್ಪನವರ ಕಾದಂಬರಿಗಳನ್ನು ಅಧ್ಯಯನ ಮಾಡಲಾಗಿದೆ.

ಅ.ನ.ಕೃಷ್ಣರಾಯರು ಮಧ್ಯಮ ವರ್ಗದ ಜನರ ನೋವು-ನಲಿವುಗಳನ್ನು ಒಳಗೊಂಡಂತಹ ಸಾಮಾಜಿಕ ಮತ್ತು ವೈಚಾರಿಕ ಪ್ರಜ್ಞೆಯನ್ನು ಮೂಡಿಸುವಂತಹ ಕಾದಂಬರಿಗಳನ್ನು ರಚಿಸಿದರೆ, ಕಾರಂತರು ದಕ್ಷಿಣ ಕನ್ನಡ ಜಿಲ್ಲೆಯ ಸಾಮಾಜಿಕ ಅರಿವನ್ನು ಮೂಡಿಸುವಂತಹ ಕಾದಂಬರಿಗಳನ್ನು ರಚಿಸಿರುತ್ತಾರೆ. ಭೈರಪ್ಪನವರು ಪ್ರಾದೇಶಿಕವಾದ ವಲಯಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಅಲ್ಲಿನ ಜನರ ಸಾಮಾಜಿಕ ಹಾಗೂ ವೈಚಾರಿಕ ಪ್ರಜ್ಞೆಗಳನ್ನು ತಮ್ಮ ಕಾದಂಬರಿಗಳ ಮೂಲಕ ಒಡಮೂಡಿಸಲು ಪ್ರಯತ್ನಿಸಿದ್ದಾರೆ. ಈ ಮೂರು ಮಂದಿ ಆಧುನಿಕ ಕಾದಂಬರಿಕಾರರಲ್ಲಿ ವೈಚಾರಿಕ ಮತ್ತು ಸಾಮಾಜಿಕ ಪ್ರಜ್ಞೆಯ ಸಮಾನತೆಯನ್ನು ಗುರುತಿಸಬಹುದಾದರೂ ಕೂಡ, ಅ.ನ.ಕೃಷ್ಣರಾಯರು ಮತ್ತು ಭೈರಪ್ಪನವರು ಕಾರಂತರಿಗಿಂತ ಭಿನ್ನವಾಗಿ ಕಾದಂಬರಿ ಲೋಕದಲ್ಲಿ ಕಾಣಿಸಿಕೊಳ್ಳುತ್ತಾರೆ. ಏಕೆಂದರೆ ಕಾರಂತರ ಕಾದಂಬರಿಗಳಲ್ಲಿ ಪ್ರಾದೇಶಿಕ ಅರಿವು ಕೇವಲ ದಕ್ಷಿಣ ಕನ್ನಡ ಜಿಲ್ಲೆಯ ಸುತ್ತಲಿನ ಸಮಾಜಕ್ಕೆ ಸಂಬಂಧಪಟ್ಟದಾಗಿದೆ. ಅಂದರೆ ಕಾರಂತರ ಕಾದಂಬರಿಗಳಲ್ಲಿ ದಕ್ಷಿಣಕನ್ನಡ ಜಿಲ್ಲೆಯ ಪ್ರಾದೇಶಿಕತೆಯ ವರ್ಣನೆ ಜಾಸ್ತಿ ಬರುತ್ತದೆ. ಆದರೆ ಅ.ನ.ಕೃಷ್ಣರಾಯರದು ಕರ್ನಾಟಕ ಏಕೀಕರಣದ ಭಾಷೆ, ಮಧ್ಯಮ ವರ್ಗದ ಜನರನ್ನು ಕುರಿತಾದ ವಿಚಾರಗಳನ್ನು ಒಳಗೊಂಡಿರುತ್ತದೆ. ಕಾರಂತರ 'ಚೋಮನದುಡಿ', 'ಮರಳಿಮಣ್ಣಿಗೆ' ಸಾಮಾಜಿಕತೆಯನ್ನು ಮೀರಿನಿಂತಿದ್ದರೂ ಕೂಡ ಅದು ಅಂತರಾಷ್ಟ್ರೀಯ ಮಟ್ಟವನ್ನು ತಲುಪಲಿಲ್ಲ. ಆದ್ದರಿಂದ ಅ.ನ.ಕೃ. ಹಾಗೂ ಭೈರಪ್ಪನವರ ಸಾಲಿನಿಂದ

ಕಾರಂತರನ್ನು ಬೇರ್ಪಡಿಸಲಾಯಿತು. ಕಾರಂತರು ಒಬ್ಬ ಶ್ರೇಷ್ಠ ಕಾದಂಬರಿಕಾರರೇ ಹೊರತು ಅ.ನ.ಕೃ. ಮತ್ತು ಭೈರಪ್ಪನವರಂತೆ ಜನಪ್ರಿಯ ಕಾದಂಬರಿಕಾರಾಗಿಲ್ಲ.

ಭೈರಪ್ಪನವರನ್ನು ಅ.ನ.ಕೃ. ಅವರೊಂದಿಗೆ ಸಮೀಕರಿಸುವಾಗ, ಅ.ನ.ಕೃ. ಅವರಿಗೆ ಪ್ರಕಾಶಕರ ಒತ್ತಾಯ ಜೀವನೋಪಾಯ ಇವೆಲ್ಲದರ ಪರಿಣಾಮದಿಂದಾಗಿ, ಕಾದಂಬರಿ ರಚನೆಯ ಸಮಯದಲ್ಲಿ ಸಂಯಮವನ್ನು ವಹಿಸಲು ಸಾಧ್ಯವಾಗದೇ ಗಟ್ಟಿತನ ಅವರ ಕಾದಂಬರಿಗಳಿಗೆ ಬರಲಿಲ್ಲ. ಆದರೆ ಭೈರಪ್ಪನವರಿಗೆ ಕಾದಂಬರಿ ರಚನೆಯೇ ಅವರ ಜೀವನೋಪಾಯವಾಗಿರಲಿಲ್ಲ. ಭೈರಪ್ಪನವರ ಬದುಕಿಗೆ ಪ್ರಾಧ್ಯಾಪನ ವೃತ್ತಿ ಇತ್ತು. ಕಾದಂಬರಿ ಇವರಿಗೆ ಜನಪ್ರಿಯತೆಯನ್ನು ತಂದುಕೊಟ್ಟೀತೇ ಹೊರತು ಜನಪ್ರಿಯತೆಗಾಗಿ ಇವರು ಕಾದಂಬರಿ ಬರೆಯಲಿಲ್ಲ. ಯಾವುದೇ ಪ್ರಕಾಶಕರ ಒತ್ತಾಯ ಇವರಿಗೆ ಇರಲಿಲ್ಲ. ಇವರಿಗೆ ಅಧ್ಯಾಪನ ವೃತ್ತಿಯೆನ್ನುವುದು ವೈಚಾರಿಕತೆಗೆ ದೇಣಿಗೆಯಾಯಿತು. ಇವರು ವಿದ್ಯಾರ್ಥಿಗಳೊಂದಿಗೆ ನಡೆಸಿದ ಚರ್ಚೆ ಅಧ್ಯಯನದ ಫಲದಿಂದಾಗಿ ಇವರ ಕಾದಂಬರಿಗಳಲ್ಲಿ ವೈಚಾರಿಕತೆ ಮೂಡಿಬರಲು ಸಾಧ್ಯವಾಯಿತು. ತತ್ವಶಾಸ್ತ್ರದ ವಿದ್ಯಾರ್ಥಿಯಾಗಿದ್ದ ಕಾರಣ ಇವರು ಪಾಶ್ಚಾತ್ಯ-ಪೌರಾತ್ಯ ಚಿಂತನೆ ಮಾಡಬೇಕಾಯಿತು. ಸ್ನಾತಕೋತ್ತರ ಕೇಂದ್ರದಲ್ಲಿ ವೈಚಾರಿಕ ನೆಲೆಯಲ್ಲಿ ಅಧ್ಯಯನ ಮಾಡಿ ವಿದ್ಯಾರ್ಥಿಗಳಿಗೆ ಪಾಠ ಮಾಡಬೇಕಾಗಿ ಬಂತು. ಅಲ್ಲದೆ, ಭೈರಪ್ಪನವರು ಸಹಜವಾಗಿ ಸಾಹಿತ್ಯದ ಒಲವನ್ನು ಹೊಂದಿದವರಾಗಿದ್ದು ತನ್ನ ಓದನ್ನು ವಿಸ್ತರಿಸಿಕೊಳ್ಳುತ್ತಾ ಹೋದರು. ಆ ಚಿಂತನ-ಮಂಥನ ಆಸಕ್ತಿ ಇರುವ ಓದುಗ ವರ್ಗ ಇವರಿಗೆ ಸೃಷ್ಟಿಯಾಯಿತು. ಭೈರಪ್ಪನವರ ಜನಪ್ರಿಯತೆ ಯಾವುದೋ ಒಂದು ಕಾದಂಬರಿಯಿಂದ ಲಭ್ಯವಾದುದಲ್ಲ. ಹಂತ-ಹಂತವಾಗಿ ಕಾಲದಿಂದ ಕಾಲಕ್ಕೆ ಸೃಷ್ಟಿಯಾದುದು. 'ಧರ್ಮಶ್ರೀ', 'ವಂಶವೃಕ್ಷ'ದ ಮೂಲಕ ಭಾರತೀಯ ಧರ್ಮ-ವಂಶಧರ್ಮದ ಬಗ್ಗೆ ಆಸಕ್ತಿ ಇರುವಂತಹ ಓದುಗವರ್ಗ ಇವರಿಗೆ ಲಭಿಸಿದರೆ, 'ದಾಟು'ವಿನ ಮೂಲಕ ಸಾಮಾಜಿಕ ಚಿಂತನೆಯುಳ್ಳ ಓದುಗರು ದೊರಕಿದರು. 'ತಬ್ಬಲಿ

ನೀನಾದೆ ಮಗನೇ', 'ಗೃಹಭಂಗ'ದ ಮೂಲಕ ಪ್ರಾದೇಶಿಕ ಒಲವು ಉಳ್ಳ ಓದುಗ ವೃಂದದ ಸೃಷ್ಟಿಯಾಯಿತು.

"ಹಿಂದಿನ ಶತಮಾನದ ಬಹುಕಾಲಾವಧಿಯಲ್ಲಿ ಅ.ನ.ಕೃಷ್ಣರಾಯರು ಜನಪ್ರಿಯ ಕಾದಂಬರಿಕಾರರಾಗಿದ್ದರು. ಅ.ನ.ಕೃಷ್ಣರಾಯರ ಬಳಿಕ ಹೀಗೆ ಓದುಗ ವರ್ಗವನ್ನು ಪಡೆದ ಭಾಗ್ಯ ಎಸ್.ಎಲ್.ಭೈರಪ್ಪನವರದ್ದೇ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ವಸ್ತು ವೈವಿಧ್ಯ ಇರಬಹುದು ಪಾತ್ರರಚನೆ ಇರಬಹುದು. ಕಾದಂಬರಿಯ ಎಲ್ಲ ಆಯಾಮಗಳಲ್ಲೂ ಇಬ್ಬರ ಸಾಧನೆಯೂ ಏಕಮುಖವಾದದ್ದೇ. ಆದರೆ ಅಂತರ ಇಷ್ಟೇ; ಕೃಷ್ಣರಾಯರು ಸಮಸ್ಯೆಗಳನೆತ್ತಿಕೊಂಡು ಕಾದಂಬರಿಯ ಒಡಲಲ್ಲಿ ಅವುಗಳನ್ನು ಭಾವನಾತ್ಮಕವಾಗಿ ಬಿಡಿಸುತ್ತಿದ್ದರು. ಭೈರಪ್ಪನವರು ಕಾದಂಬರಿಯ ಒಡಲಲ್ಲೇ ವೈಚಾರಿಕವಾಗಿ ಸಮಸ್ಯೆಗಳನ್ನು ಬಿಡಿಸುತ್ತಿದ್ದರು. ಕೃಷ್ಣರಾಯರ ವಿಚಾರಗಳು ಮುನ್ನುಡಿಯಲ್ಲಿರುತ್ತವೆ; ಭೈರಪ್ಪನವರ ವಿಚಾರಗಳು ಬಿಡಿಸಲಾಗದಂತೆ ಕಥನದ ಒಳಗಡೆಯೇ ಇರುತ್ತದೆ"[೧] ಎಂಬುದಾಗಿ ದೇಶಕುಲಕರ್ಣಿಯವರು ಒಂದೆಡೆ ಅಭಿಪ್ರಾಯ ಪಟ್ಟಿರುವುದನ್ನು ಗಮನಿಸಬಹುದು.

ಆಧುನಿಕ ಕನ್ನಡ ಕಾದಂಬರಿಕಾರರಲ್ಲಿ ತಮ್ಮದೇ ಆದ ವಿಶಿಷ್ಟತೆಯನ್ನು ಹೊಂದಿರುವ ಎಸ್.ಎಲ್.ಭೈರಪ್ಪನವರು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹೆಸರಾಂತ ಹಾಗೂ ಜನಪ್ರಿಯ ಕಾದಂಬರಿಕಾರರಾಗಿ ಹೊರಹೊಮ್ಮಿದ್ದಾರೆ. ಬದುಕಿನ ಅನುಭವಗಳ ಸಂಕೀರ್ಣತೆಯನ್ನು ಸೂಕ್ಷ್ಮವಾಗಿ ಗ್ರಹಿಸಿ ಅದನ್ನು ಸೃಜನಾತ್ಮಕವಾಗಿ ಅಭಿವ್ಯಕ್ತಿಸಲು ಕಾದಂಬರಿ ಪ್ರಕಾರವನ್ನು ಆಯ್ಕೆ ಮಾಡಿಕೊಂಡಿರುವ ಇವರು, ಕಾದಂಬರಿ ಬದುಕಿಗೆ ತೀರ ಹತ್ತಿರವಾದುದು ಹಾಗೂ ಬದುಕಿನ ಅನೇಕ ಸ್ತರಗಳನ್ನು ಚಿತ್ರಿಸಲು ವಿಪುಲವಾದ ಅವಕಾಶವನ್ನು ನೀಡುತ್ತದೆ ಎನ್ನುತ್ತಾರೆ. ಕಾದಂಬರಿ ಮೂಲಕ ಓದುಗರೊಂದಿಗೆ ಹೃದಯ

---

[೧] ಎಸ್.ಎಲ್.ಭೈರಪ್ಪ ಪುಟ ೧೧. ಸಂ.ಡಾ॥ಪ್ರದಾನ್ ಗುರುದತ್ತ ಪ್ರಕಾಶನ ನವಕರ್ನಾಟಕ ೨೦೦೬.

ಸಂವಾದ ನಡೆಸಲು ಹೊರಟ ಇವರ ಕೃತಿಗಳು ಜೀವನದ ಬೃಹತ್ ದರ್ಶನವನ್ನು ಮಾಡಿಸುತ್ತದೆ.

ಭೈರಪ್ಪನವರ ಕಾದಂಬರಿಗಳು ಧರ್ಮದ ಸಮಸ್ಯೆ, ಜಾತಿಯ ಸಮಸ್ಯೆ, ಬಡತನದ ಬವಣೆ, ಹುಟ್ಟು-ಸಾವಿನ ಪ್ರಶ್ನೆ, ಬದುಕಿನ ಜಟಿಲತೆ, ಮಾನವೀಯ ಸಂಬಂಧಗಳ ಸಂಕೀರ್ಣತೆ, ಸಂಪ್ರದಾಯ, ಇತಿಹಾಸ, ಆಧುನಿಕತೆಗಳ ಸಂಘರ್ಷ ಇವೇ ಮುಂತಾದ ವೈವಿಧ್ಯಮಯ ವಸ್ತುಗಳ ಆಕರ್ಷಕವಾದ ನಿರೂಪಣೆಯಿಂದ ಕೂಡಿದೆ. ಓದುಗರ ಅಂತಃಕರಣವನ್ನು ತಟ್ಟುವ ಭೈರಪ್ಪನವರ ಪಾತ್ರ-ಸೃಷ್ಟಿ ಮೆಚ್ಚುವಂಥದ್ದು. ಇವರು ಸೃಜಿಸಿದ ಪಾತ್ರ ವೈವಿಧ್ಯತೆ ಮತ್ತು ಅವುಗಳು ಪ್ರತಿನಿಧಿಸುವ ವ್ಯಕ್ತಿ ವಿಶಿಷ್ಟತೆಗಳಿಗಾಗಿ ಇವರ ಕಾದಂಬರಿಗಳು ಹೆಚ್ಚು ಮೌಲೀಕತೆಯನ್ನು ಪಡೆಯುತ್ತದೆ.

ಎಸ್.ಎಲ್.ಭೈರಪ್ಪನವರು ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಚಳುವಳಿಯ ಕಾಲಘಟ್ಟದಲ್ಲಿ ಬರೆಯುತ್ತಾ ಬಂದರೂ, ಯಾವುದೇ ಒಂದು ಪಂಥಕ್ಕೆ ಸೇರದೇ ತಮ್ಮದೇ ಆದ ವಿಶಿಷ್ಟ ದೃಷ್ಟಿಕೋನದಿಂದ ಬದುಕನ್ನು ನೋಡುತ್ತಾ ತಮ್ಮ ಕಾದಂಬರಿಗಳನ್ನು ರಚಿಸುತ್ತಾ ಬಂದವರು. ಅಲ್ಲದೆ ಇವರ ಕಾದಂಬರಿಗಳಲ್ಲಿ ಸ್ವಂತ ಪರಿಶ್ರಮದಿಂದ ಸಂಗ್ರಹಿಸಿದ ಅನೇಕ ವಿಷಯಗಳ ಆಳವಾದ ಚಿಂತನೆ ಹುದುಗಿಕೊಂಡಿರುತ್ತದೆ. ಇವರ ಹೆಚ್ಚಿನ ಕಾದಂಬರಿಗಳು ಭಾರತೀಯ ಇತರ ಭಾಷೆಗಳಿಗೆ ಅನುವಾದಗೊಂಡಿದೆ. ಇದರಿಂದಾಗಿ ಇವರು ಭಾರತೀಯ ಭಾಷಾ ಸಾಹಿತ್ಯದಲ್ಲಿಯೇ ಪ್ರಮುಖ ಬರಹಗಾರರಾಗಿ ಕಾಣುತ್ತಾರೆ. ಇವರ ಪ್ರಕಟಿತ ೨೦ ಕಾದಂಬರಿಗಳನ್ನು ಅವಲೋಕಿಸಿದಾಗ ಇವರು ಕನ್ನಡ ಕಾದಂಬರಿ ಲೋಕಕ್ಕೆ ವಿಶಿಷ್ಟ ಕೊಡುಗೆಯನ್ನು ನೀಡುವುದರ ಮೂಲಕ ಕಾದಂಬರಿ ಪ್ರಕಾರವನ್ನು ಶ್ರೇಷ್ಠಮಟ್ಟಕ್ಕೆ ತಂದ ಕೆಲವೇ ಲೇಖಕರಲ್ಲಿ ಒಬ್ಬರಾಗಿ ಕಂಡು ಬರುತ್ತಾರೆ.

ಎಸ್.ಎಲ್.ಭೈರಪ್ಪನವರು 'ಕನ್ನಡದ ಶ್ರೇಷ್ಠ ಕಾದಂಬರಿಕಾರ, ಜನಪ್ರಿಯ ಕಾದಂಬರಿಕಾರ' ಎಂದು ಹೇಳುವಂತೆಯೇ 'ಭೈರಪ್ಪನವರು ಒಳ್ಳೆಯ ಲೇಖಕ ಅಲ್ಲ, ಕೆಟ್ಟ ಲೇಖಕ ಎಂದು ಹೇಳುವವರು ಇದ್ದಾರೆ. ಆದರೆ ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಭೈರಪ್ಪನವರು ಸಲ್ಲಿಸಿರುವ ಸೇವೆ ಅಪಾರವಾದದ್ದು, 'ವಂಶವೃಕ್ಷ', 'ಗೃಹಭಂಗ', 'ದಾಟು', 'ಪರ್ವ', 'ಸಾಕ್ಷಿ'ಯಂಥ ಅವರ ಕಾದಂಬರಿಗಳು ಕನ್ನಡ ಸಾಹಿತ್ಯವನ್ನು ಸಮೃದ್ಧಿಗೊಳಿಸುವುದರ ಜೊತೆಗೆ ಕನ್ನಡ ಸಾಹಿತ್ಯದಲ್ಲಿ ಅವರ ಹೆಸರು ಗಟ್ಟಿಯಾಗಿ ನೆಲೆ ನಿಲ್ಲುವಂತೆ ಮಾಡಿವೆ.

ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಸಾರ್ವಭೌಮರಾಗಿ ಮೆರೆಯುವ ಎಸ್.ಎಲ್.ಭೈರಪ್ಪನವರು ಒಂದರ ನಂತರ ಇನ್ನೊಂದು ವಿಶಿಷ್ಟವಾದ ಕಾದಂಬರಿಗಳನ್ನು ಹೊರ ತರುತ್ತಿದ್ದಾಗಲೂ ಕೂಡ ವಾಚಕರಲ್ಲಿ ಒಂದು ವರ್ಗ ಪ್ರಶಂಸಕರು ಇನ್ನೊಂದು ವರ್ಗ ಟೀಕಿಸುವವರು ಕಾಣಿಸಿಕೊಂಡರು. ಇದಕ್ಕೆ ಅವರ ಕಾದಂಬರಿಗಳ ರಚನೆ, ಹಿನ್ನೆಲೆ, ಸ್ವರೂಪ ಕಾರಣವಿರಬಹುದು ಎನ್ನುವ ನೆಲೆಯಲ್ಲಿ ಭೈರಪ್ಪನವರ ಆತ್ಮಕಥನ 'ಭಿತ್ತಿ' ಹಾಗೂ 'ನಾನೇಕೆ ಬರೆಯುತ್ತೇನೆ'–ಈ ಎರಡು ಕೃತಿಗಳನ್ನು ಅಧ್ಯಯನಕ್ಕೆ ಓದಿಕೊಳ್ಳಲಾಯಿತು. ಈ ಕೃತಿಗಳ ಓದುವಿಕೆಯಿಂದಾಗಿ, ಭೈರಪ್ಪನವರ ಕಾದಂಬರಿಗಳಿಗೆ ಒಂದು ಶಕ್ತಿ ಇದೆ ಎನ್ನುವ ವಿಚಾರ ಕಂಡು ಬಂತು. ಅವರ ಜನಪ್ರಿಯತೆಗೆ ಅವರು ಕಾದಂಬರಿಗಳನ್ನು ರಚಿಸುವ ರೀತಿಯೇ ಕಾರಣವಿರಬಹುದೆಂದು, ಕಾದಂಬರಿಗಳ ರಚನೆಗೆ ಸಂಬಂಧಿಸಿ 'ಶಿಲ್ಪ'ವನ್ನು ಆಶ್ರಯಿಸಿ ಸಂಶೋಧನಾ ಅಧ್ಯಯನವನ್ನು ಕೈಗೊಳ್ಳಲಾಯಿತು.

ಎಸ್.ಎಲ್.ಭೈರಪ್ಪನವರ ಕಾದಂಬರಿಗಳನ್ನು ಕುರಿತು ಈಗಾಗಲೇ ಅನೇಕರು ವಿಭಿನ್ನ ದೃಷ್ಟಿಕೋನದಿಂದ ಸಂಶೋಧನೆ ಮಾಡಿದ್ದಾರೆ. 'ಭೈರಪ್ಪನವರ ಕಾದಂಬರಿಗಳ ಸ್ವರೂಪ'–ಲೀಲಾವತಿ ತೋರಣಗಟ್ಟಿ. 'ಭೈರಪ್ಪನವರ ಕಾದಂಬರಿಗಳಲ್ಲಿ ಸ್ತ್ರೀ

ಪಾತ್ರಗಳು'–ಎಂದು ಆರ್.ಎನ್.ದಿಂಡೂರ ಅವರು, 'ಪರ್ವ' ಒಂದು ಸಮೀಕ್ಷೆಯ ಕುರಿತಂತೆ'–ಕೆ.ಮಾಲತಿಯವರು, 'ಭೈರಪ್ಪನವರ ಕಾದಂಬರಿಗಳು ಒಂದು ಅಧ್ಯಯನ'ವೆಂದು ಡಾ॥ಸಿ.ವಿ.ವತ್ಸಲಾದೇವಿಯವರು. 'ದೌಪ್ರದಿ ಸಮೀಕ್ಷೆ ಪರ್ವ ಕಾದಂಬರಿಯ ದ್ರೌಪದಿಯನ್ನು ಒಳಗೊಂಡಂತೆ' ಎಂದು ಡಾ॥ ಮಣಿ ಮಾಲಿನಿಯವರು, 'ಭೈರಪ್ಪನವರ ಪರ್ವ ಕಾದಂಬರಿ ಒಂದು ವಿಮರ್ಶಾತ್ಮಕ ಪರಿಶೀಲನೆ' ಎಂದು ಡಾ॥ ನಾಗರಾಜ್ ನೀರಗುಂದ ಅವರು, ಈಗಾಗಲೇ ಪ್ರೌಢಪ್ರಬಂಧವನ್ನು ವಿವಿಧ ವಿಶ್ವವಿದ್ಯಾನಿಲಯಗಳಿಗೆ ಸಲ್ಲಿಸಿರುತ್ತಾರೆ. ಹೀಗೆ ಇನ್ನೂ ಅನೇಕರು ವಿಭಿನ್ನ ದೃಷ್ಟಿಕೋನದಿಂದ ಭೈರಪ್ಪನವರ ಕೃತಿಗಳ ಅಧ್ಯಯನ ಮಾಡುತ್ತಿದ್ದಾರೆ. ಅಲ್ಲದೆ ಅನೇಕರ ಬಿಡಿ ಬಿಡಿ ಲೇಖನಗಳು, ವಿಮರ್ಶೆಗಳು ಭೈರಪ್ಪನವರ ಕಾದಂಬರಿಗಳ ಕುರಿತು ಬಂದಿವೆ. ಆದರೆ ಅವರ ಕಾದಂಬರಿಯ ರಚನೆಗೆ ಸಂಬಂಧಿಸಿದ ವಿಷಯದ ಮೇಲೆ ಸಮಗ್ರವಾದ ಅಧ್ಯಯನ ಈವರೆಗೆ ನಡೆದಿಲ್ಲ[೧]. ಕಾದಂಬರಿ ಕಟ್ಟುವ ಹಿಂದಿನ ಸಕಲ ಸಿದ್ಧತೆಯನ್ನು ಅವರ ಕಲಾತ್ಮಕ ಹಾಗೂ ಸೃಜನಾತ್ಮಕ ಪ್ರಕ್ರಿಯೆ ಹೇಗೆ ಹಾಸುಹೊಕ್ಕಾಗಿದೆ ಎಂಬುದನ್ನು, ಅವರ ೨೦ ಕಾದಂಬರಿಗಳನ್ನು ಗಮನದಲ್ಲಿರಿಸಿಕೊಂಡು ಅಧ್ಯಯನ ಮಾಡುವುದು ಈ ಮಹಾಪ್ರಬಂಧದ ಉದ್ದೇಶವಾಗಿದೆ. ಅಲ್ಲದೆ ಪ್ರಚಲಿತ ಅತ್ಯಂತ ಜನಪ್ರಿಯತೆಯನ್ನು ಇವರ ಕಾದಂಬರಿಗಳು ಪಡೆಯುವಲ್ಲಿ, ಇವರು ಕಟ್ಟುವ ಕಾದಂಬರಿಗಳ 'ಬಂಧ' ಎಷ್ಟರಮಟ್ಟಿಗೆ ಕಾರಣವಾಗಿರಬಹುದೆನ್ನುವುದನ್ನು ತಿಳಿಯುವುದು ಕೂಡ ಈ ರೀತಿಯ ಅಧ್ಯಯನದ ಉದ್ದೇಶವಾಗಿದೆ ಎಂದು ಹೇಳಬಹುದು.

<u>**೧.೧ಸಾಧನ–ವಿಧಾನ:**</u> ಪ್ರಸ್ತುತ ಅಧ್ಯಯನ ಎಸ್.ಎಲ್.ಭೈರಪ್ಪನವರ ಕಾದಂಬರಿಗಳ 'ಶಿಲ್ಪ'ವು ಭೈರಪ್ಪನವರ ಕಾದಂಬರಿಯ 'ರಚನೆ' 'ಬಂಧ'ದ ನೆಲೆಯನ್ನಾಶ್ರಯಿಸಿದೆ. ಇಲ್ಲಿ ಕೃತಿ ಕಟ್ಟುವಿಕೆಯನ್ನು ಹಾಗೂ ಬರವಣಿಗೆಯ ಅಭಿವ್ಯಕ್ತೀಕರಣವನ್ನು 'ಶಿಲ್ಪ' ಎಂಬ ಅರ್ಥದಲ್ಲಿ ಪರಿಭಾವಿಸಲಾಗುತ್ತದೆ. ಮೇಲೆ ತಿಳಿಸಿರುವಂತೆ ಭೈರಪ್ಪನವರ ಕಾದಂಬರಿಗಳ

---

[೧] 'ಸಹಸ್ಪಂದನ' 'ವಂಶವೃಕ್ಷ' 'ಶಿಲ್ಪ' 'ರಚನೆ' ಎನ್ನುವ ಒಂದು ಲೇಖನ ಬಂದಿದೆ.

ಕುರಿತಾದ ವಿಸ್ತ್ರತ ಚರ್ಚೆ ವಿಮರ್ಶೆ ಸಾಹಿತ್ಯವಲಯದಲ್ಲಿ ವಿಪುಲವಾಗಿ ದೊರೆಯುತ್ತಿದ್ದರೂ 'ಶಿಲ್ಪ'ದ ನೆಲೆಯನ್ನಾಶ್ರಯಿಸಿ ಇಂತಹ ಪ್ರಯತ್ನಗಳು ನಡೆದಿಲ್ಲ ಎಂದೇ ಹೇಳಬಹುದು.

'ಆವರಣ' ಕಾದಂಬರಿಯ ಮೂಲಕ ಅನೇಕ ಪ್ರತಿಕ್ರಿಯೆಗಳಿಗೆ ಒಳಗಾದ ಕಾದಂಬರಿಕಾರರ ಬಗ್ಗೆ ಓದುಗ ಸಮುದಾಯ ಅನಾಸಕ್ತಿಗೆ ಒಳಗಾದಂತೆ ಕಂಡುಬರುವ ಈ ಸಂದರ್ಭದಲ್ಲಿ, ಪ್ರಸ್ತುತ ಅಧ್ಯಯನವು ಅರ್ಥಪೂರ್ಣ ಮತ್ತು ಸಮರ್ಥನೀಯವೆಂದು ಭಾವಿಸಲಾಗಿದೆ. ಕಾದಂಬರಿಗಳ 'ಶಿಲ್ಪ'ದ ಕುರಿತಂತೆ ಅಧ್ಯಯನಗಳು ಈವರೆಗೆ ಬಂದಿಲ್ಲವಾದ ಕಾರಣ ಪ್ರಕೃತ ಅಧ್ಯಯನಕ್ಕೆ ಹೆಚ್ಚು ಅವಕಾಶವೂ, ಅನಿವಾರ್ಯತೆಯೂ ಇದೆ ಎಂದು ಹೇಳಬಹುದು. ಎಸ್.ಎಲ್.ಭೈರಪ್ಪನವರು ಬರೆದಿರುವ ೨೦ ಕಾದಂಬರಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಅವುಗಳು ಹೊರಚೆಲ್ಲುವ ವಸ್ತುವೈವಿಧ್ಯ, ವ್ಯಾಪ್ತಿಗನುಗುಣವಾಗಿ ಒಂದೇ ವಿಧದ ಪ್ರಾಮುಖ್ಯ ನೀಡಿ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಆ ಮೂಲಕ ಅವುಗಳಿಂದ ದೊರಕಿದ 'ಶಿಲ್ಪ'ದ ವಿಶೇಷತೆಯನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಈವರೆಗೆ ಭೈರಪ್ಪನವರ ಕಾದಂಬರಿಗಳಿಗೆ ಸಂಬಂಧಿಸಿ ಬಂದಿರುವ ಅನೇಕ ವಿಮರ್ಶಾ ಲೇಖನಗಳನ್ನು ಬಳಸಿಕೊಳ್ಳುವ ಜೊತೆಗೆ, ಗ್ರಂಥಾಲಯಗಳಲ್ಲಿ ಈ ಸಂಶೋಧನಾ ಅಧ್ಯಯನಕ್ಕೆ ಸಂಬಂಧಪಟ್ಟ ವಿವಿಧ ಗ್ರಂಥ, ವಿವಿಧ ಲೇಖನಗಳನ್ನು ಪರಾಮರ್ಶಿಸಿ 'ಶಿಲ್ಪ'ದ ಸಂಬಂಧಿ ವಿಭಾಗದಲ್ಲಿ ದೊರಕುವ ಮಾಹಿತಿಗಳಲ್ಲಿ ಪೂರಕಾಂಶಗಳನ್ನು ಗುರುತಿಸಿ ಬಳಸಲಾಗಿದೆ.

ಭೈರಪ್ಪನವರ ಕಾದಂಬರಿಗಳ ವಸ್ತು-ವೈವಿಧ್ಯತೆಯನ್ನು ಮಾತ್ರ ಹೇಳುವುದು ಈ ಅಧ್ಯಯನದ ಉದ್ದೇಶವಲ್ಲ. ಅವುಗಳ ಸಮಗ್ರವಾದ ರಚನೆ ಮತ್ತು ಕಾದಂಬರಿಯನ್ನು ಬೆಳೆಸಿಕೊಂಡು ಹೋಗುವ ರೀತಿ, ಅದರಲ್ಲಿಯ ಕ್ರಿಯಾತ್ಮಕತೆ ಹಾಗೂ

ಸೃಜನಾತ್ಮಕತೆಯನ್ನು ಗುರುತಿಸುವುದು ಮುಖ್ಯವಾದುದು. ಪ್ರಸ್ತುತ ಅಧ್ಯಯನ ಮುಂದೆ ಅಧ್ಯಯನಕಾರರಿಗೆ ಅದರಲ್ಲೂ ಮುಖ್ಯವಾಗಿ ಸಾಹಿತ್ಯ ರಚನೆಯ ಕುರಿತಂತೆ ಅಭ್ಯಾಸ ಮಾಡುವ ಆಸಕ್ತರಿಗೆ ಪ್ರಮುಖ ಪೂರಕ ಸಾಮಗ್ರಿಯಾಗಬಹುದೆಂಬ ನಿರೀಕ್ಷೆಯೂ ಈ ಅಧ್ಯಯನಕ್ಕೆ ಹಿನ್ನೆಲೆಯಾಗಿದೆ.

ಭೈರಪ್ಪನವರ ಕಾದಂಬರಿಗಳಲ್ಲಿ ಲಭ್ಯವಾಗುವ ವಸ್ತು, ಘಟನೆ ಹಾಗೂ ಪಾತ್ರಗಳನ್ನು ಪರಿಶೀಲಿಸಿ, ಅವುಗಳ ಪ್ರಾಮುಖ್ಯಕ್ಕನುಗುಣವಾಗಿ ಬಳಸಿಕೊಳ್ಳಲಾಗಿದೆ. ಅಧ್ಯಯನದ ವ್ಯಾಪ್ತಿಗೆ ಅನುಗುಣವಾಗಿ ವಿವರಣಾತ್ಮಕ, ವಿಶ್ಲೇಷಣಾತ್ಮಕ, ತೌಲನಿಕ ಹಾಗೂ ತಲಸ್ಪರ್ಶಿ ವಿಧಾನಗಳನ್ನು ಅನುಸರಿಸಲಾಗಿದೆ. ಪಾತ್ರಗಳ ವಿವೇಚನೆಯಲ್ಲಿ ಮನೋವಿಶ್ಲೇಷಣಾತ್ಮಕ ವಿವೇಚನೆಯ ವಿಧಾನವನ್ನು ಅನುಸರಿಸಲಾಗಿದೆ.

*************

# ಅಧ್ಯಾಯ–೧

## ‘ಶಿಲ್ಪ’ ಅರ್ಥ–ವ್ಯಾಪ್ತಿ.

## ಕನ್ನಡ ಕಾದಂಬರಿ ‘ಶಿಲ್ಪ’ ಪ್ರಾರಂಭದಿಂದ ಭೈರಪ್ಪನವರೆಗೆ.

## ಅಧ್ಯಾಯ ೨

## 'ಶಿಲ್ಪ' ಅರ್ಥ-ವ್ಯಾಪ್ತಿ

ಒಂದು ಸಾಹಿತ್ಯ ಕೃತಿಯ ವ್ಯವಸ್ಥೆಯಲ್ಲಿರುವ ಎಲ್ಲ ತತ್ವಗಳ ಕ್ರೋಢೀಕರಣವೇ 'ಶಿಲ್ಪ'. ಅಂದರೆ ಕೃತಿಯ ಘಟಕಗಳ ನಡುವಣ ಸಮಗ್ರತೆ ಹಾಗೂ ಸಾವಯವತೆಗಳನ್ನು ಆ ಕೃತಿಯ 'ಶಿಲ್ಪ' ಎಂದು ಗುರುತಿಸಬಹುದು. ಒಬ್ಬ ಶಿಲ್ಪಿಯ ಕೈಯಲ್ಲಿ ಸಾಮಾನ್ಯ ಕಲ್ಲು ಒಂದು ನಿಶ್ಚಿತ ಆಕೃತಿ ಪಡೆದು ವಿಗ್ರಹವಾಗುವಂತೆ, ಒಬ್ಬ ಬರಹಗಾರನ ಕೈಯಲ್ಲಿ ಅನುಭವವೆಂಬ ವಸ್ತು ನಿರ್ದಿಷ್ಟ ರೂಪಪಡೆದು ಸಾಹಿತ್ಯವಾಗುತ್ತದೆ. ಈ ರೂಪವನ್ನೇ ವಿಮರ್ಶಕರು 'ಶಿಲ್ಪ', 'ಬಂಧ', 'ನೆಯ್ಗೆ' ಮೊದಲಾದ ಪರಿಕಲ್ಪನೆಗಳ ಮೂಲಕ ವಿವರಿಸಿದ್ದಾರೆ.

A dictionary of literary terms longman ನಲ್ಲಿ Martin Grayಯವರು 'structure' ಎನ್ನುವುದಕ್ಕೆ ಈ ರೀತಿಯ ವಿವರಣೆಗಳನ್ನು ನೀಡಿರುವುದನ್ನು ಕಾಣಬಹುದು.-"The over all principles of organization in a work of literate, Literature may be shaped by many different factors such as Narrative 'poet' repeated 'Images' 'symbols' or motifs, logical argument. A work structure may be dependent on any of these in any combination. In due any element of language may be used to create a sense of structure or meaningful shape or pattern in literature. To some extent 'structure' was a jargon word of the New critics a replacement of the word 'Form' which had been made vague by constant redefinition... Examination of the relationship

between a written, a writer, readers, the work of art language and society also gives raise to a 'structure' which may impose certain condition on the nature of literature and culture".

'ಶಿಲ್ಪ' ಅಥವಾ 'ರೂಪ'ವನ್ನು ಸಾಮಾನ್ಯವಾಗಿ ಸಾಹಿತ್ಯದ ಭಾಷಿಕ ರಚನೆಗೆ ಸಂಬಂಧಿಸಿ ವ್ಯಾಖ್ಯಾನಿಸುವುದುಂಟು. ಆದರೆ ಅದು ವಸ್ತುವಿನ ಬೆಳವಣಿಗೆಗೆ ಸಂಬಂಧ ಪಟ್ಟಂತಹುದು. ಈ ಬೆಳವಣಿಗೆ ಹೀಗೇ ಇರಬೇಕೆಂಬ ನಿಯಮವೇನಿಲ್ಲ. ಅದು ಕೆಲವೊಮ್ಮೆ Lenear ಆಗಿರಬಹುದು. ಮತ್ತೆ ಕೆಲವೊಮ್ಮೆ Fugal ಆಗಿರಬಹುದು" ಎಂದು ಡಾ॥ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ಅಭಿಪ್ರಾಯ ಪಡುತ್ತಾರೆ.[೧]

ಕೆ.ವಿ.ನಾರಾಯಣ ಅವರು "ಕೃತಿಯು ತನ್ನ ಮೂಲ ಸಾಮಗ್ರಿಗಳನ್ನು ತನ್ನ ಉದ್ದೇಶಕ್ಕೆ ತಕ್ಕಂತೆ ಪರಿವರ್ತಿಸಿಕೊಂಡಿರುವುದನ್ನು ಕೂಡಾ ಗುರುತಿಸಿ ಅದನ್ನು 'ಶಿಲ್ಪ'ದ ವ್ಯಾಖ್ಯೆಯೊಳಗೆ ಸೇರಿಸಿಕೊಳ್ಳುವುದುಂಟು. ಈವರೆಗಿನ ನಮ್ಮ ಕಾದಂಬರಿ ವಿಮರ್ಶೆಯು ಕೃತಿಯ 'ಶಿಲ್ಪ'ವನ್ನು ಕುರಿತಂತೆ ಅದರ ಅಭಾವದಲ್ಲಿ ಮಾತ್ರ ಚರ್ಚಿಸಿದಂತಿದೆ. ಎಂದರೆ 'ಶಿಲ್ಪ'ವು ಕೃತಿಯ ಪ್ರಾಥಮಿಕ ಅವಶ್ಯಕತೆ ಎಂಬ ಪೂರ್ವಾನುಮಾನದಲ್ಲೇ ಇಂತಹ ವಿಚಾರಗಳು ರೂಪುಗೊಳ್ಳುತ್ತಿದೆ ಎನ್ನುತ್ತಾರೆ"[೨].

ಕಾದಂಬರಿ ರಚನೆಯ ಸಂದರ್ಭದಲ್ಲಿ ವಸ್ತು-ತಂತ್ರ-ಶೈಲಿ ಇವುಗಳು ಪ್ರಮುಖವಾದಷ್ಟೇ ಅಲ್ಲಿಯ 'ಶಿಲ್ಪ'ವು ಪ್ರಮುಖ ಎಂದು ಹೇಳಬಹುದು. ಸಾಹಿತ್ಯದಲ್ಲಿ 'ಶಿಲ್ಪ'ವು ಎಲ್ಲ ಕೃತಿಗಳಲ್ಲಿ ಒಂದೇ ರೀತಿಯಾಗಿರುವುದಿಲ್ಲ. ಅದು ಕೃತಿಯಿಂದ ಕೃತಿಗೆ ಭಿನ್ನವಾಗಿರುತ್ತದೆ. ಅದೇ ರೀತಿಯಲ್ಲಿ 'ಶಿಲ್ಪ' ಅಥವಾ 'ಬಂಧ'ದಲ್ಲಿ ಶಿಥಿಲ ಹಾಗೂ

---

[೧] ಸಾಹಿತ್ಯ ವಿಮರ್ಶೆ ಪುಟ ೧೧. ಜಿ.ಎಸ್.ಶಿವರುದ್ರಪ್ಪ ೧೯೯೮.
[೨] ಕಾರಂತ ಪ್ರಪಂಚ ಪುಟ ೩೧. ಲೇ. ಕೆ.ವಿ.ನಾರಾಯಣ. ಸಂ. ಹರಿದಾಸ ಭಟ್ಟ ಕು.ಶಿ. ೧೯೬೯.

ಸಾವಯವ 'ಬಂಧ' ಎಂದು ಎರಡು ವಿಧಗಳನ್ನು ಗುರುತಿಸಬಹುದಾಗಿದೆ. ಸಾಮಾನ್ಯವಾಗಿ ಯಾವ ಕಾದಂಬರಿಯಲ್ಲಿ ವ್ಯಕ್ತಿ ಚಿತ್ರಣಕ್ಕಿಂತ ಸಮಾಜ ಚಿತ್ರಣ ಕೇಂದ್ರದಲ್ಲಿರುತ್ತದೆಯೋ ಅಂದರೆ ಯಾವ ಕಾದಂಬರಿ ಪಾತ್ರಗಳ ವ್ಯಕ್ತಿತ್ವ ವಿಶ್ಲೇಷಣೆಗಿಂತ ಸಾಮಾಜಿಕ ವಿಶ್ಲೇಷಣೆಯನ್ನು ಲಕ್ಷ್ಯದಲ್ಲಿಟ್ಟು ಕೊಂಡಿರುತ್ತದೆಯೋ ಆ ಕಾದಂಬರಿಯ 'ಬಂಧ' ಅಥವಾ 'ಶಿಲ್ಪ' ಅನಿವಾರ್ಯವಾಗಿ ಶಿಥಿಲವಾಗುತ್ತದೆ.

ಕೃತಿಯ ಸಾವಯವತೆ ಹಾಗೂ ಸಮಗ್ರತೆಯನ್ನು ಕುರಿತ ಚಿಂತನೆ ಪಾಶ್ಚಾತ್ಯರಲ್ಲಿ ಮೂಲಭೂತವಾಗಿ ಕಾವ್ಯದ ಸಂದರ್ಭದಲ್ಲಿ ರೂಪುಗೊಂಡದ್ದು. ಮುಂದೆ ಕಾದಂಬರಿಯ ವಿಮರ್ಶೆಯಲ್ಲೂ ಅದನ್ನು ಬಳಸಲು ತೊಡಗಿದರು. ಹಾಗೆಯೇ ಪಾಶ್ಚಾತ್ಯರಿಂದ ಪ್ರೇರಿತವಾದ ಕನ್ನಡ ಸಾಹಿತ್ಯದಲ್ಲಿ ಇಂಥ ಪ್ರಯತ್ನಗಳು ನಡೆದವು, ಕವಿ ಗೋಪಾಲಕೃಷ್ಣ ಅಡಿಗರು ಸಾವಯವ 'ಶಿಲ್ಪ'ದ ಸಮಗ್ರೀಕರಣ ಬಲವೇ ಸಾಹಿತ್ಯದ ಜೀವವೆಂಬುದಾಗಿ ಅಭಿಪ್ರಾಯಪಟ್ಟಿರುವುದನ್ನು ಅವರ 'ಶರದ್ಗೀತ' ಕವಿತೆಯ ಈ ಮುಂದಿನ ಸಾಲುಗಳಿಂದ ತಿಳಿಯಬಹುದು.

> "ಗಡಿಯಾರ ಬಿಚ್ಚಿ ಯಂತ್ರೋಪಯಂತ್ರಗಳು ಚೆಲ್ಲಾಪಿಲ್ಲಿ
> ಚೆಲ್ಲಿ, ಕೈ ಕಟ್ಟಿ ಕುಳಿತ ರಿಪೇರಿಯವನಂತೆ
> ಯಾವ ತಿರುಗಣೆ ಮೊಳೆಯನ್ನೆಲ್ಲ ಹಾಕಲಿ? ಮತ್ತೆ ಈ
> ಸುರುಳಿ ತಂತಿಯನ್ನೆಲ್ಲಿ ತುರುಕಲಿ?
> ಗಡಿಯಾರವಿದೆ, ಯಂತ್ರವಿದೆ, ಎಲ್ಲ ಇದೆ, ಇಲ್ಲ
> ಸಾವಯವ ಶಿಲ್ಪದ ಸಮಗ್ರೀಕರಣ ಬಲ".

'ಶಿಲ್ಪ'ವನ್ನು ಕುರಿತ ಚಿಂತನೆ ಅನ್ಯ ಕಲಾಪ್ರಕಾರಗಳ ಮೀಮಾಂಸೆಯಿಂದ ಬಂದದ್ದು. ಅದರಲ್ಲೂ ದೇಶಸ್ಥ ಕಲೆಗಳ ಪ್ರಭಾವ ಅಧಿಕವಾಗಿದೆ.

ವಾಸ್ತುಶಿಲ್ಪ ಹಾಗೂ ಚಿತ್ರಕಲೆಗಳ ಸಂದರ್ಭದ ಪರಿಕಲ್ಪನೆಯೊಂದನ್ನು ಸಾಹಿತ್ಯ ಮೀಮಾಂಸೆಯಲ್ಲಿಯೂ ಅಳವಡಿಸುವ ಪ್ರಯತ್ನ ಸಾಗಿದೆ. ಟಾಲ್‌ಸ್ಟಾಯ್ 'ಅನ್ನಾಕರೆನಿನಾ' ಕಾದಂಬರಿಯನ್ನು ಬರೆದ ಮೇಲೆ ಆ ಕಾದಂಬರಿಯ 'ಶಿಲ್ಪ'ವನ್ನು ಕುರಿತಂತೆ ತನ್ನ ಗೆಳೆಯನೊಬ್ಬನಿಗೆ ಕಾಗದ ಬರೆಯುತ್ತಾ 'ಆ ಕಾದಂಬರಿಯು ಅತ್ಯಂತ ಎಚ್ಚರದ ರಚನೆ. ಉಪಕಾರಕ ಹಾಗೂ ಉಚಿತ ಬಂಧಾನುಸಾರಿ, ಗಾಥಿಕ್ ವಾಸ್ತುಶಿಲ್ಪದಂತೆ' ಎನ್ನುತ್ತಾನೆ[೩]. ಇಲ್ಲಿ ಹೋಲಿಕೆಗಾಗಿ ತಂದ ವಾಸ್ತುಶಿಲ್ಪದ ಉಲ್ಲೇಖವನ್ನು ಗಮನಿಸಬಹುದು.

ಒಂದು ಕಾದಂಬರಿಯಲ್ಲಿ ನಾವು ಗಮನಿಸಬೇಕಾದ ಅಂಶಗಳು ಮೂರು. ಅವುಗಳೆಂದರೆ– ಕಥೆ, ಸಂವಿಧಾನ ಮತ್ತು ಶಿಲ್ಪ. 'ಶಿಲ್ಪ' ಎಂದರೆ ಕೃತಿ ಒಳಗೊಂಡಿರುವ ಕಥನ ಮಾರ್ಗಗಳ ಹಾಗೂ ಕಥನ ಮಾಧ್ಯಮಗಳ ಜಿಜ್ಞಾಸೆಯಾಗಿದೆ. ಕಾದಂಬರಿಗಳಲ್ಲಿನ 'ಶಿಲ್ಪ'ವನ್ನು ನಾವು ಕಾಲ, ಧೋರಣೆ, ಪ್ರಯೋಗ ಈ ಮೂರು ನೆಲೆಗಳಲ್ಲಿ ವಿಶ್ಲೇಷಿಸಬಹುದಾಗಿದೆ.

೧. <u>ಕಾಲ</u> : ಎಂದರೆ ಕಥೆಯ ಕಾಲದಲ್ಲಿ ಸಂವಿಧಾನ ಮಾಡಿರುವ ಕಾಲಾಂತರಗಳು. ಕೃತಿ ಕಥೆಯ ಮಧ್ಯದಲ್ಲಿ ಅಥವಾ ಕೊನೆಯಲ್ಲಿ ಪ್ರಾರಂಭವಾಗುವುದು. ಆಗಾಗ ಬರುವ ಹಿನ್ನೋಟಗಳು ಹಾಗೂ ಮುನ್ನೋಟಗಳು ಒಂದು ಕಾಲದಿಂದ ಏನೂ ಸೂಚನೆಯಿಲ್ಲದೆ ಮತ್ತೊಂದು ಕಾಲಕ್ಕೆ ಜಿಗಿಯುವುದು ಇತ್ಯಾದಿ. ಈ ಕಾಲವನ್ನು ನಾವು ಎರಡು ಬಗೆಯಾಗಿ ನೋಡಬಹುದು.

i. ಕ್ರಮ: ಘಟನೆಗಳ ವಾಸ್ತವಿಕ ಕಾಲಾನುಕ್ರಮಕ್ಕೂ ಕೃತಿಯಲ್ಲಿ ಅವು ಬಂದಿರುವ ಕ್ರಮಕ್ಕೂ ಇರುವ ಸಂಬಂಧ. ಒಂದು ಕೃತಿ ಕಾಲಾನುಕ್ರಮವಾಗಿಯೇ ಘಟನೆಗಳನ್ನು ನಿರೂಪಿಸಬಹುದು ಅಥವಾ ಆ ಕ್ರಮವನ್ನು ಬದಲಾಯಿಸಿ, ಕಥೆಯ ಮಧ್ಯದಲ್ಲಿ

---

[೩] ಕಾರಂತ ಪ್ರಪಂಚ ಪುಟ ೩೦. ಲೇ. ಕೆ.ವಿ.ನಾರಾಯಣ. ಸಂ. ಹರಿದಾಸ ಭಟ್ಟ ಕು.ಶಿ. ೧೯೬೯.

ಅಥವಾ ಕೊನೆಯಲ್ಲಿ ಪ್ರಾರಂಭವಾಗಬಹುದು. ಕಾಲಾನುಕ್ರಮವಾಗಿ ಕಥೆ ಹೇಳಲ್ಪಟ್ಟಿದ್ದರೂ ಅಲ್ಲಲ್ಲಿ ಹಿನ್ನೋಟ ಮತ್ತು ಮುನ್ನೋಟಗಳ ಉಪಯೋಗವಿರಬಹುದು.

ii. **ಅವಧಿ:** ಕೃತಿಯನ್ನು ಓದುವಾಗ ಒಂದು ದಿನದಲ್ಲಿ ನಡೆಯುವ ಕಥೆ/ಘಟನೆ ನಮಗೆ ಅನೇಕ ದಶಕಗಳನ್ನೊಳಗೊಂಡಂತೆ ಭಾಸವಾಗಬಹುದು (ವಿಸ್ತರಣೆ ವಿವರಣೆಗಳ ಮೂಲಕ) ದೀರ್ಘಾವಧಿಯ ಕಥೆ ಓದುವಾಗ ಒಂದೆರಡು ನಿಮಿಷಗಳಲ್ಲಿ ಮುಗಿದಂತೆ ತೋರಬಹುದು.

iii. **ಆವರ್ತನೆ:** ಎಂದರೆ ಕಥೆಯ ಒಂದು ಘಟನೆ ಕೃತಿಯಲ್ಲಿ ಎಷ್ಟು ಸಲ ಪುನರಾವರ್ತನೆಗೊಳ್ಳುತ್ತದೆ ಎಂಬ ಅಂಶ. ಕಥೆಯ ಒಂದು ಘಟನೆ ಕೃತಿಯಲ್ಲಿ ಒಂದೇ ಸಲ ಬರಬಹುದು ಅಥವಾ ಅದು ಮತ್ತೇ ಮತ್ತೇ ನಿರೂಪಿಸಲ್ಪಡಬಹುದು.

೨. **ಧೋರಣೆ** : ಕೃತಿಯಲ್ಲಿ ಯಾರ ಪ್ರಜ್ಞೆ, ಯಾವ ಸ್ವರೂಪದ ಪ್ರಜ್ಞೆ ಕಥೆಯ ಆಗು–ಹೋಗುಗಳನ್ನು ಗ್ರಹಿಸಿದೆ? ಮತ್ತು ಈ ಪ್ರಜ್ಞೆಗೂ ಕೃತಿಯ ಒಟ್ಟಾರೆಯಾದ ಪ್ರಜ್ಞೆಗೂ ಇರುವ ಸಂಬಂಧವೇನು? ಎಂಬುದಾಗಿದೆ. ಇಲ್ಲಿ ಕಥೆಯ ಭಾಗವೆಷ್ಟು ಮತ್ತು ವ್ಯಾಖ್ಯಾನದ ಭಾಗವೆಷ್ಟು? ಈ ಮುಂತಾದ ಪ್ರಶ್ನೆಗಳು ಮೂಡುತ್ತವೆ.

೩. **ಪ್ರಯೋಗ** : ನಿರೂಪಕನಿಗೂ ಕೃತಿಯ ಓದುಗನಿಗೂ ಇರುವ ಸಂಬಂಧ ಕೃತಿಯ ನಿರೂಪಕನು ಕೃತಿಯ ಒಳಗಿರಬಹುದು ಅಥವಾ ಕೃತಿಯ ಹೊರಗಿರಬಹುದು.

ಕನ್ನಡ ಕಾದಂಬರೀ ವಿಮರ್ಶೆಯಲ್ಲಿ ಕಾದಂಬರಿಯ 'ಶಿಲ್ಪ'ವನ್ನು ಕುರಿತು ಚರ್ಚಿಸಿರುವುದು ವಿರಳ. ಕಾದಂಬರಿಯ ಒಟ್ಟು ವಿಮರ್ಶೆಯ ಸಂದರ್ಭದಲ್ಲಿ ಆನುಷಂಗಿಕವಾಗಿ 'ಶಿಲ್ಪ', 'ರೂಪ', 'ಬಂಧ', 'ವಿನ್ಯಾಸ', 'ರಚನೆ', 'ನೆಯ್ಗೆ', 'ಆಕೃತಿ' ಈ

ಮೊದಲಾದ ಮಾತುಗಳ ಬಳಕೆಯಾಗಿರುವುದನ್ನು ಕಾಣಬಹುದಾಗಿದೆ. ಆದರೆ ಈ ಪರಿಕಲ್ಪನೆಗಳು ಎಲ್ಲಾ ಕಡೆಗಳಲ್ಲೂ ಒಂದು ಖಚಿತಾರ್ಥದಲ್ಲಿ ಬಳಕೆಯಾದಂತೆ ಕಂಡು ಬರುವುದಿಲ್ಲ. ಓ.ಎಲ್.ನಾಗಭೂಷಣಸ್ವಾಮಿ ಅವರ ಅಭಿಪ್ರಾಯದಂತೆ ಈ ಪರಿಕಲ್ಪನೆಗಳು "ಬೇರೆ ಬೇರೆ ಅರ್ಥಗಳಲ್ಲಿ ಕೆಲವು ಬಾರಿ ಸಮಾನಾರ್ಥಕವಾಗಿ ಕೆಲವು ಬಾರಿ ವಿಮರ್ಶಕರು ತಮ್ಮದೇ ಆದ ವಿಶಿಷ್ಟ ಅರ್ಥದಲ್ಲೂ ಬಳಸುತ್ತಿದ್ದು ಸಾಹಿತ್ಯ ವಿದ್ಯಾರ್ಥಿಗೆ ಗೊಂದಲವುಂಟಾಗುವುದು ಸಹಜ"[೪] ಎನ್ನುವ ಮಾತು ಸ್ವಾಭಾವಿಕವಾಗಿ ಬಂದಿದೆ.

"ಒಂದು ಕಾದಂಬರಿಯ 'ಶಿಲ್ಪ' ಮತ್ತು ಅದರ ಅರ್ಥ ಅದರ ವಿವರಗಳಲ್ಲಿಲ್ಲ, ಅದು ಆ ವಿವರಗಳನ್ನು ಒಳಗೊಂಡು ಅವಕ್ಕೆಲ್ಲ ಒಂದು ಅರ್ಥಪೂರ್ಣ ಸಂಬಂಧ ಕಲ್ಪಿಸುವ ಕಲ್ಪನೆ ಮತ್ತು ಶಕ್ತಿಯಲ್ಲಿದೆ." ಎನ್ನುವುದು ನವ್ಯ ವಿಮರ್ಶಕರ ಅಭಿಪ್ರಾಯವಾಗಿದೆ. ಕಾರಂತರ 'ಕಾದಂಬರಿಗಳ ಶಿಲ್ಪ'ವನ್ನು ಸಮೀಕ್ಷಿಸಿದ ಡಾ.ಕೆ.ವಿ.ನಾರಾಯಣ ಅವರು ಈ 'ಶಿಲ್ಪ'ದ ಪರಿಕಲ್ಪನೆಯೇ ನಮಗೆ ಪಾಶ್ಚಾತ್ಯರಿಂದ ಬಂದಿದ್ದಾಗಿ ಅಭಿಪ್ರಾಯ ಪಡುತ್ತಾರೆ. "ಕನ್ನಡ ಕಾದಂಬರಿಯನ್ನು ನಾವು ಪಾಶ್ಚಾತ್ಯರಿಂದ ಪಡೆದು ಕೊಂಡಿದ್ದೇವೆ ಎನ್ನುವ ಕಾರಣದಿಂದ ಕಾದಂಬರಿಯ 'ಶಿಲ್ಪ'ವನ್ನು ಕುರಿತ ಪರಿಕಲ್ಪನೆಯನ್ನು ಹಾಗೆಯೇ ಬಳಸಲಾಗುತ್ತಿದೆ. ಪಾಶ್ಚಾತ್ಯ ವಿಮರ್ಶೆಯ 'ಶಿಲ್ಪ'ದ ಪರಿಕಲ್ಪನೆ ಅಲ್ಲಿನ ಅನ್ಯ ದೇಶೀಯ ಕಲೆಗಳನ್ನು ಆಧರಿಸಿದೆ. ಆದರೆ ಕನ್ನಡದ 'ಶಿಲ್ಪ'ದ ರೂಪ ಸಂಗೀತದಲ್ಲಿ ಬರುವಂಥದ್ದು"[೫] ಎಂದಿದ್ದಾರೆ.

ಜೀವನಸೃಷ್ಟಿಯಂತೆಯೇ ಕಲಾಸೃಷ್ಟಿಯ ಸ್ವರೂಪವೂ ಇಂದಿಗೂ ಒಂದು ಸಂಕೀರ್ಣ ರಹಸ್ಯವಾಗಿಯೇ ಉಳಿದಿದೆ. ಒಂದು ಸಾಹಿತ್ಯಕೃತಿಯಲ್ಲಿ ಸ್ಥೂಲವಾಗಿ ನಾವು ಎರಡು "ರಚನೆ"ಗಳನ್ನು ಅಥವಾ "ವಿನ್ಯಾಸ"ಗಳನ್ನು ಗುರುತಿಸಬಹುದು. ಒಂದು ಜಾಗೃತ

---

[೪] 'ವಿಮರ್ಶೆಯ ಪರಿಭಾಷೆ'. ಪುಟ ೨೫೭-ಓ.ಎಲ್.ನಾಗಭೂಷಣ ಸ್ವಾಮಿ. ೧೯೮೩.
[೫] 'ಕಾರಂತ ಪ್ರಪಂಚ'. ಪುಟ ೩೧. ಕೆ.ವಿ.ನಾರಾಯಣ. ಸಂ. ಹರಿದಾಸ ಭಟ್ಟ ಕು.ಶಿ. ೧೯೭೯.

ಪ್ರಜ್ಞೆಯಿಂದ ರೂಪಿಸಲ್ಪಟ್ಟ ವೈಚಾರಿಕ ಸ್ತರದ "ಹೊರರಚನೆ" ಇನ್ನೊಂದು ಅಜಾಗೃತ ಸುಪ್ತಚಿತ್ತದಿಂದ ರೂಪಿಸಲ್ಪಟ್ಟ, ಭಾವನಾತ್ಮಕ ಸ್ತರದ "ಒಳರಚನೆ" ಎಲ್ಲಾ ಲೇಖಕರ ಎಲ್ಲಾ ಕೃತಿಗಳಲ್ಲಿಯೂ ನಾವು ಇಂತಹ "ಒಳ" ಹಾಗೂ "ಹೊರ" ರಚನೆಗಳನ್ನು ಗುರುತಿಸಬಹುದು. ಸ್ಥೂಲವಾಗಿ ಈ ವಿಧದ ಇಬ್ಬಗೆಯ ಸ್ವರೂಪವನ್ನೇ ವಿವಿಧ ಕಾಲಘಟ್ಟಗಳಲ್ಲಿ ವಿಮರ್ಶಕರು 'ಶಿಲ್ಪ' 'ಬಂಧ' ಎಂದು ಕರೆದಿರುತ್ತಾರೆ.

ತಾತ್ವಿಕ ನೆಲೆಯಲ್ಲಿ ಹೇಳುವುದಾದರೆ ಒಳ-ಹೊರ-ರಚನೆಗಳು ಒಂದು ಕೃತಿಯಲ್ಲಿ ಪರಸ್ಪರ ಪೂರಕವಾಗಿರಬಹುದು, ಅಥವಾ ವಿರುದ್ಧವಾಗಿರಬಹುದು. ಆದರೆ ವಾಸ್ತವವಾಗಿ ಬಹು ಕೃತಿಯಲ್ಲಿ ಇವೆರಡೂ ರಚನೆಗಳೂ ಪರಸ್ಪರ ವಿರುದ್ಧವೇ ಆಗಿರುತ್ತವೆ. ನಗರೀಕೃತ ಹಾಗೂ ಔದ್ಯೋಗೀಕೃತ ಆಧುನಿಕ ಸಮಾಜದಲ್ಲಿ ಒಂದು ಕೃತಿಯ ಒಳ-ಹೊರ ರಚನೆಗಳು ಪರಸ್ಪರ ಭಿನ್ನ ದಿಶೆಯಲ್ಲಿ ಚಲಿಸುತ್ತವೆ ಮತ್ತು ಒಂದು ರಚನೆ ಮತ್ತೊಂದಕ್ಕಿಂತ ಹೆಚ್ಚು ಪ್ರಬಲವಾಗಿಯೂ ಪರಿಣಾಮಕಾರಿಯಾಗಿಯೂ ಇರುತ್ತದೆ. ಈ ಹೇಳಿಕೆಗಳು ಲೇಖಕರ ಕೃತಿಗಳಿಗೂ ಅನ್ವಯವಾಗುತ್ತವೆ. ಆದರೆ ಪ್ರತಿಯೊಬ್ಬ ಲೇಖಕನ ಒಳರಚನೆಯ ಹಾಗೂ ಹೊರರಚನೆಯ ಅಂಶಗಳು ಬೇರೆ ಬೇರೆಯಾಗಿರುತ್ತದೆ ಮತ್ತು ಪರಸ್ಪರ ಈ ರಚನೆಗಳ ಸತ್ವ ಭಿನ್ನಭಿನ್ನವಾಗಿರುತ್ತದೆ.

ಯಾವುದೇ ಒಂದು ಕಾದಂಬರಿಯನ್ನು ಉತ್ತಮ ಕಲಾಕೃತಿ ಎಂದು ಕರೆಯಬೇಕಾದರೆ ಅದರಲ್ಲಿ ಹಲವಾರು ಸುಸಂಬದ್ಧ ಘಟನೆಗಳ ಅರ್ಥಪೂರ್ಣವಾದ ನಿರೂಪಣೆ ಇರಬೇಕಾಗುತ್ತದೆ. ಇಂಥ ಸುಸಂಬದ್ಧವಾದ ಘಟನೆಗಳನ್ನು ಅರ್ಥಪೂರ್ಣವಾದ ರೀತಿಯಲ್ಲಿ ಸಾಹಿತ್ಯದಲ್ಲಿ ಬಳಸುವುದೇ 'ಶಿಲ್ಪ'. ಇದು ಸಾಹಿತಿಯ ಅಥವಾ ಕಾದಂಬರಿಕಾರನ ಕೌಶ್ಯಲತೆಗೆ ಸಂಬಂಧಪಟ್ಟಿರುವಂಥದ್ದು.

************

## ೨.೧ ಕನ್ನಡ ಕಾದಂಬರಿ ಶಿಲ್ಪ ಪ್ರಾರಂಭದಿಂದ ಭೈರಪ್ಪನವರೆಗೆ

'ಕಾದಂಬರಿ' ಎನ್ನುವ ಸಾಹಿತ್ಯ ಪ್ರಕಾರವು ಕನ್ನಡಕ್ಕೆ ಆಂಗ್ಲ ಸಾಹಿತ್ಯದಿಂದ ಬಂದಿರುವುದು. ಕನ್ನಡದ ಮೊದಲ ಕಾದಂಬರಿಕಾರರು ಇಂಗ್ಲೀಷ್ ನಾವೆಲ್‌ನಿಂದ ಅಷ್ಟಾದರ್ಶ ವರ್ಣನೆಗಳಿಂದ ಮುಕ್ತವಾದ, ಸಾಮಾನ್ಯ ಜನಜೀವನಕ್ಕೆ ಸಂಬಂಧಿಸಿದ ಮುಖ್ಯವಾಗಿ ಮನೋರಂಜನೆಯನ್ನು ಗುರಿಯಾಗಿರಿಸಿಕೊಂಡ, ಗದ್ಯ ಕೃತಿಯ ಕಲ್ಪನೆಯನ್ನು ಪಡೆದುಕೊಂಡಿರುತ್ತಾರೆ. ಗುಬ್ಬಿ ಮುರುಗಾರಾಧ್ಯರು 'ಶೃಂಗಾರ ಚಾತುರ್ಯೋಲ್ಲಾಸಿನಿ'ಯ ಪೀಠಿಕೆಯಲ್ಲಿ "…..ಆದಕಾರಣ ವಿಷಯದಲ್ಲಿ ಹಿಂದೂ ಮರ್ಯಾದೆಯನ್ನೇ ಇಟ್ಟುಕೊಂಡು, ಇಂಗ್ಲೀಷ್ ನಾವೆಲ್ ಪದ್ಧತಿಯನ್ನೇ ಅನುಸರಿಸಿ ಬರೆಯಲು ಅನುಕೂಲವಾಗುವಂತೆ ಹೊಸದಾಗಿ ಒಂದು ಕಥೆಯನ್ನು ಕಲ್ಪನೆ ಮಾಡಿಕೊಂಡೆನು"[೧] ಎಂದಿರುವುದನ್ನು ಇಲ್ಲಿ ಗಮನಿಸಬಹುದು. ಇದೇ ರೀತಿಯಲ್ಲಿ ಬಿ.ವೆಂಕಟಾಚಾರ್ಯರು "A Novel in the sense it is understood in English is not familiar to the Kanarese speaking public"[೨] ಎಂದಿರುವುದರಲ್ಲಿಯೂ ಅವರು ಇಂಗ್ಲೀಷ್ ನಾವೆಲ್‌ನಲ್ಲಿ ಏನನ್ನು ಕಂಡರು? ವಾಸ್ತವತೆಯಂತೂ ಅಲ್ಲ, ಎಂಬುದು ತಿಳಿದುಬರುತ್ತದೆ. ಕನ್ನಡದ ಮೊದಲ ಕಾದಂಬರಿಗಳ ಮೇಲೆ 'ಇಂಗ್ಲೀಷ್ ನಾವೆಲ್'ನ ಪ್ರಭಾವ ಎಷ್ಟೆಂದು ತಿಳಿಸುವುದು ಕಷ್ಟಸಾಧ್ಯವೇ. ಸಿ.ಎನ್.ರಾಮಚಂದ್ರನ್ ಇವರು "ಕನ್ನಡದ ಮೊದಲ ಕಾದಂಬರಿಗಳ ಸ್ವರೂಪ (Structure–ಶಿಲ್ಪ–ಅರ್ಥದಲ್ಲಿ) ಸಂಪೂರ್ಣ ಭಾರತೀಯ ಸಾಹಿತ್ಯ ಪರಂಪರೆಯಲ್ಲಿಯೇ ರೂಪುಗೊಂಡದ್ದು"[೩] ಎಂಬುದಾಗಿ ಅಭಿಪ್ರಾಯಪಡುತ್ತಾರೆ. ಭಾರತೀಯ ಸಾಹಿತ್ಯದ ಒಂದು ಮುಖ್ಯ ಲಕ್ಷಣವೆಂದರೆ 'ಶಿಥಿಲ ಬಂಧ'. ಸಾಮಾನ್ಯವಾಗಿ

---

[೧] 'ಗುಬ್ಬಿ ಮುರುಗಾರಾಧ್ಯ ಶೃಂಗಾರ ಚಾತುರ್ಯೋಲ್ಲಾಸಿನಿ' ಹಾವನೂರ ಅವರು ಉದ್ಧರಿಸಿದಂತೆ ಪುಟ ೧೨೬.

[೨] ಮುನ್ನುಡಿ 'ದುರ್ಗೇಶನಂದಿನಿ' ಬಿ.ವೆಂಕಟಾಚಾರ್ಯರು.

[೩] 'ಶಿಲ್ಪ ವಿನ್ಯಾಸ' ಸಿ.ಎನ್.ರಾಮಚಂದ್ರನ್ ಪುಟ ೧೩.

ಯಾವ ಕಾದಂಬರಿಯಲ್ಲಿ ವ್ಯಕ್ತಿ ಚಿತ್ರಣಕ್ಕಿಂತ ಸಮಾಜ ಚಿತ್ರಣ ಕೇಂದ್ರದಲ್ಲಿರುತ್ತದೆಯೋ, ಅಂದರೆ ಯಾವ ಕಾದಂಬರಿ ಪಾತ್ರಗಳ ವ್ಯಕ್ತಿತ್ವ ವಿಶ್ಲೇಷಣೆಗಿಂತ ಸಾಮಾಜಿಕ ವಿಶ್ಲೇಷಣೆಯನ್ನು ಲಕ್ಷ್ಯದಲ್ಲಿಟ್ಟುಕೊಂಡಿರುತ್ತದೆಯೋ, ಆ ಕಾದಂಬರಿಯ 'ಬಂಧ' ಅಥವಾ 'ಶಿಲ್ಪ' ಅನಿವಾರ್ಯವಾಗಿ ಶಿಥಿಲವಾಗುತ್ತದೆ. 'ಮಹಾಭಾರತ', 'ರಘುವಂಶ', 'ಪಂಚತಂತ್ರ', 'ದಶಕುಮಾರ ಚರಿತೆ' ಇವುಗಳಲ್ಲೆಲ್ಲಾ ಭಾರತೀಯ ಸಾಹಿತ್ಯದ ಶಿಥಿಲ 'ಬಂಧ' (ಶಿಲ್ಪ)ದ ಲಕ್ಷಣಗಳನ್ನು ಗುರುತಿಸಬಹುದಾಗಿದೆ.

ಕನ್ನಡದ ಮೊದಲಿನ ಸಾಮಾಜಿಕ ಕಾದಂಬರಿಗಳಲ್ಲೆಲ್ಲಾ ಈ ತರಹ ಶಿಥಿಲ 'ಬಂಧ'ದ ಲಕ್ಷಣವನ್ನು ಗುರುತಿಸಬಹುದು. ಈ ಕಾದಂಬರಿಗಳಲ್ಲಿ ಸಮಕಾಲೀನ ಪ್ರಜ್ಞೆ ಮತ್ತು ಸಾಮಾಜಿಕ ಕಳಕಳಿ ಎದ್ದು ಕಾಣುವ ಅಂಶಗಳಾಗಿವೆ. ಹಿಂದೂ ಸಮಾಜದ ಜ್ವಲಂತ ಸಮಸ್ಯೆಗಳಾದ ಬಾಲ್ಯ ವಿವಾಹ ಮತ್ತು ವಿಧವಾ ವಿವಾಹ, ಮಠಾಧಿಪತಿಗಳ ಅನೈತಿಕತೆ ಮತ್ತು ನಿರಂಕುಶಲತೆ, ಅಧಿಕಾರಿ, ವರ್ಗದ ದರ್ಪ, ಹಾಗೂ ಸ್ವಾರ್ಥ ಇವುಗಳಿಗೆಲ್ಲಾ ಈ ಮೊದಲ ಕಾದಂಬರಿಗಳು ಸ್ಪಂದಿಸುತ್ತವೆ. 'ಇಂದಿರಾಬಾಯಿ', 'ವಾಗ್ದೇವಿ', 'ಭಾಗೀರಥಿ' ಈ ಕೃತಿಗಳು ಸಮಾಜಕ್ಕೆ ಬದ್ಧವಾಗಿವೆ. ಈ ವಿಧದ ಸಾಮಾಜಿಕ ಬದ್ಧತೆ, ತೀವ್ರವಾದಷ್ಟೂ ಕೃತಿಯ 'ಬಂಧ' ಶಿಥಿಲವಾಗುತ್ತದೆ. ಅಲ್ಲದೆ ಕನ್ನಡದ ಮೊದಲಿನ ಸಾಮಾಜಿಕ ಕಾದಂಬರಿಗಳಲ್ಲಿ ಶಿಥಿಲ 'ಬಂಧ'ವು ಒಂದರಲ್ಲಿ ಮುಖ್ಯವಾಗಿ ಮತ್ತೊಂದರಲ್ಲಿ ಗೌಣವಾಗಿಯೂ ಕಂಡುಬರುತ್ತದೆ. 'ಇಂದಿರಾಬಾಯಿ'ಯಲ್ಲಿ ಭೀಮರಾಯ ಅಂಬಾಬಾಯಿ ಇವರ ಕಥೆಯೇ ಕಾದಂಬರಿಯ ಅರ್ಧಕ್ಕಿಂತಲೂ ಹೆಚ್ಚು ವ್ಯಾಪಿಸಿಕೊಂಡು ಇಂದಿರಾಳ ಪುನರ್ವಿವಾಹದ ಕಥೆಯೇ ಗೌಣವಾಗುತ್ತದೆ. ಕಾದಂಬರಿ ಎತ್ತುವ ಮುಖ್ಯ ಸಮಸ್ಯೆ ವಿಧವಾ ವಿವಾಹವಾದರೆ ಅದು ಕೃತಿಯ ಕೇಂದ್ರಕ್ಕೆ ಪ್ರವೇಶಿಸದೇ ಕಾದಂಬರಿಯ ಅಂಚಿನಲ್ಲಿಯೇ ನಿಲ್ಲುತ್ತದೆ. ಮಠಾಧಿಪತಿಗಳ ಅಧಾರ್ಮಿಕತೆಯನ್ನು ಚಿತ್ರಿಸಲು ಹೊರಡುವ 'ವಾಗ್ದೇವಿ'ಯಲ್ಲಿ ಕಾದಂಬರಿಯುದ್ದಕ್ಕೂ ಕಂಡು ಬರುವುದು ವಾಗ್ದೇವಿ-ವೇದವ್ಯಾಸ ಉಪಾಧ್ಯಾಯ ಇವರ ತಂತ್ರ-ಪ್ರತಿತಂತ್ರಗಳು

'ಭಾಗೀರಥಿ'ಯಲ್ಲಿ ತೋಳಂ ಭಟ್ಟನ ಒಂದು ಉಪಕಥೆ, 'ಮಾಡಿದ್ದುಣ್ಣೋ ಮಹಾರಾಯ'ನಲ್ಲಿ ಸಂತೋಜಿ ನಾರಣಪ್ಪನ ಕಥೆ, ಮಹಾರಾಜರ ಆಸ್ಥಾನದ ವಿನೋದಗಳು, ಅಮಾಸೆಯ ಕಥೆ ಇತ್ಯಾದಿಗಳು ಒಂದಾದ ಮೇಲೊಂದರಂತೆ ಬರುವುದನ್ನು ಗಮನಿಸಬಹುದು.

ಗುಲ್ವಾಡಿಯವರ 'ಇಂದಿರಾಬಾಯಿ' ಕಾದಂಬರಿಯು ೬೨ ಅಧ್ಯಾಯಗಳ ಕೃತಿಯಾಗಿದೆ. ಕೃತಿಯ ಮೊದಲಿನ ೨೩ ಅಧ್ಯಾಯಗಳು ಭೀಮರಾಯ, ಅಂಬಾಬಾಯಿ ಇವರ ಪಾತ್ರ ಚಿತ್ರಣಕ್ಕೆ ಮೀಸಲಾಗಿದೆ. ನಂತರ ಮೂರು ಅಧ್ಯಾಯಗಳಲ್ಲಿ ಇಂದಿರಾಬಾಯಿಯ ಸಾಂಪ್ರದಾಯಿಕ ಮದುವೆಯ ಚಿತ್ರಣ ಬರುತ್ತದೆ. ಅನಂತರದ ಅಧ್ಯಾಯಗಳಲ್ಲಿ ಸುಂದರರಾಯನ ಮಗ ಭಾಸ್ಕರರಾಯನ ವಿದ್ಯಾಭ್ಯಾಸ, ಅವನ ಲಂಡನ್ ಪ್ರಯಾಣ, ಮದುವೆಯಾದ ಕೆಲವು ದಿನಗಳೊಳಗೆ ಗಂಡ ಸತ್ತು, ಮನೆಬಿಟ್ಟು ಅಮೃತರಾಯನಲ್ಲಿರುತ್ತಿರುವ ಇಂದಿರಾ ಇವರ ವರ್ಣನೆ ನಿರೂಪಿತಗೊಂಡಿದೆ. ಕಾದಂಬರಿಯ ಕೊನೆಯಲ್ಲಿ ಮತ್ತೆ ಸುಂದರರಾಯ– ಇಂದಿರಾ ಇವರ ವಿವಾಹದ ವರ್ಣನೆ ಬರುತ್ತದೆ. ಹೀಗೆ ನಿರೂಪಿತ ಗೊಂಡಿರುವ ಈ ಕಾದಂಬರಿ ಪರಸ್ಪರ ತುಲನಾತ್ಮಕ ಎರಡು ಭಾಗಗಳಿಂದ ಕೂಡಿದೆ. ಈ ಎರಡು ಭಾಗಗಳನ್ನು ಎರಡು ಮದುವೆಗಳ ಮೂಲಕ ಜೋಡಿಸಿ, ಆ ಎರಡು ಮದುವೆಗಳ ವರ್ಣನೆಗಳ ಮೂಲಕವೇ ನಮ್ಮ ಸಮಾಜ ಇರುವ ಹಾಗೂ ಇರಬೇಕಾದ ರೀತಿಗಳನ್ನು ಚಿತ್ರಿಸುತ್ತಾ ಕಡೆದಿರುವ ಕಾದಂಬರಿಯ 'ಶಿಲ್ಪ'ದ ಅದ್ಭುತತೆಯನ್ನು ಇಲ್ಲಿ ಗಮನಿಸಬಹುದಾಗಿದೆ.

ಇದೇ ರೀತಿಯಲ್ಲಿ ಗುಲ್ವಾಡಿಯವರ ಎರಡನೆಯ ಕಾದಂಬರಿ 'ಭಾಗೀರಥಿ' ಸಮಾಜ ತನ್ನ ವಿಧಿ ಕಟ್ಟು–ಕಟ್ಟಳೆಗಳಿಂದ, ಕಥೆಗಳಿಂದ, ವ್ಯಕ್ತಿಯನ್ನು ಎಷ್ಟು 'ಬ್ರೈನ್‌ವಾಶ್' ಮಾಡಿ ಕಂಡೀಶನ್ ಮಾಡಬಹುದುದೆನ್ನುವುದಕ್ಕೆ 'ಭಾಗೀರಥಿ' ಉತ್ತಮ ಉದಾಹರಣೆಯಾಗಿದೆ. 'ಭಾಗೀರಥಿ' ಓರ್ವ ಬಡ ವಿಧವೆ. ಅವಳು ದಿನವೂ ತನ್ನ

ನೆರೆಯವಳಾದ ಸುಶಿಕ್ಷಿತ ಸ್ತ್ರೀ ಲೀಲಾವತಿಗೆ ತನ್ನ ಕರುಣ ಕಥೆಯನ್ನು ಸ್ವಲ್ಪ ಸ್ವಲ್ಪವೇ ಹೇಳುವಂತೆ ಕಾದಂಬರಿ ನಿರೂಪಿತವಾಗಿದೆ. ಕಾದಂಬರಿಕಾರರು ಕಾದಂಬರಿಯಲ್ಲಿ ಪ್ರವೇಶಿಸದೆ ನಿರೂಪಕಿಯ ಮೂಲಕವೇ ಕಾದಂಬರಿಯನ್ನು ಬೆಳೆಸಿರುವುದು 'ಶಿಲ್ಪ'ದ ದೃಷ್ಟಿಯಿಂದ ವಿಶಿಷ್ಟವಾದುದು.

ಬೋಳಾರ ಬಾಬುರಾವ್ ಅವರ ವಾಗ್ದೇವಿಯ 'ಶಿಲ್ಪ'ವನ್ನು ಗುರುತಿಸುವುದಾದರೆ-ಕುಮುದಪುರವೆಂಬ ಒಂದು ಸಣ್ಣ ಸಾಮಾಜಿಕ ಘಟಕದಲ್ಲಿ ಶುರುವಾಗುವ ಈ ಕಾದಂಬರಿಯ ಕಥೆ ನಿಧಾನವಾಗಿ ಸಮಾಜದ ಎಲ್ಲಾ ಘಟಕಗಳನ್ನು, ಪದರಗಳನ್ನು ಆವರಿಸುತ್ತಾ ಮುಂದುವರಿಯುತ್ತದೆ. ಅಂದರೆ ಈ ಕಾದಂಬರಿಯ ಮೂಲಕ ಕಾದಂಬರಿಕಾರರು ತಮ್ಮ ನಿಷ್ಠುರ ಸಾಮಾಜಿಕ ವಿಮರ್ಶೆಯಲ್ಲಿ ಸಮಾಜದ ಪ್ರತಿಯೊಂದು ಮೆಟ್ಟಿಲಿನಲ್ಲೂ ನಿಂತು ಅಲ್ಲಿನ ದೃಶ್ಯವನ್ನು ವಿವರಿಸುತ್ತಾ ಸಮಕಾಲೀನ ಹಿಂದೂ ಸಮಾಜ ಪ್ರತಿ ಒಂದು ಮೆಟ್ಟಿಲಿನಲ್ಲಿಯೂ ಅಧಾರ್ಮಿಕತೆ, ವಿಷಯಲೋಲುಪತೆ, ಧನಮೋಹ ಇವುಗಳಿಂದ ತುಂಬಿ ಕೊಳೆಯುತ್ತಿರುವ ಚಿತ್ರಣವನ್ನು ನೀಡುತ್ತಾರೆ.

ಗುಲ್ವಾಡಿ ಬಾಬುರಾಯರ ಕೃತಿಗಳಿಗೆ ಹೋಲಿಸಿದರೆ ಕೆರೂರರ 'ಇಂದಿರಾ'ದಲ್ಲಿ ಸುಸಂಬದ್ಧ ಕಥೆಯಿದೆ; ಉಪಪಾತ್ರ-ಉಪಕಥೆಗಳಿಲ್ಲದೆ ಕಥೆಯ ಓಟ ಏಕಮುಖವಾಗಿದೆ. ಇದೊಂದು ರೋಚಕ ಪ್ರಣಯದ ಕಥೆಯಾದ್ದರಿಂದ ಇಲ್ಲಿ ಪುನರ್ವಿವಾಹದ ಪ್ರಶ್ನೆ ಬಂದರೂ ಅದು ತೆಗಳಿಸಿಕೊಳ್ಳುವುದಕ್ಕಾಗಿಯೇ ಬಂದಂತಿದೆ.

ಎಂ.ಎಸ್.ಪುಟ್ಟಣ್ಣನವರು 'ಮಾಡಿದ್ದುಣ್ಣೋ ಮಹಾರಾಯ' ಕಾದಂಬರಿಯಲ್ಲಿ ಜಿ.ಎಸ್.ಅಮೂರ್ ಗುರುತಿಸಿರುವಂತೆ "ಒಂದು ಸುಪರಿಚಿತವಾದ ಸಾಹಿತ್ಯ ಕೃತಿಯ-ರಾಮಾಯಣ-ಚಪ್ಪರದ ಮೇಲೆ ತಮ್ಮ ವಾಸ್ತವಿಕ ಕಾದಂಬರಿಯನ್ನು

ಕಾದಂಬರಿಕಾರರು ಹಬ್ಬಿಸಿರುತ್ತಾರೆ[೪]. ಕಾದಂಬರಿಕಾರನ ಅಪೂರ್ವವಾದ ಕುಶಲತೆ ಸಾಮರ್ಥ್ಯದಿಂದ Imposition of one structure on another structure ಸ್ವರೂಪದ ತಂತ್ರ ಬಳಕೆಗೊಂಡಿದೆ. ಜಾಳು ಜಾಳಾಗಿ ಕಾಣುವ ಕೃತಿಯ ಸೂಚನೆಗಳಿಗೆ-ವಿವರಗಳಿಗೆ ಒಂದು ಅಖಂಡ ಸಮಗ್ರತೆಯನ್ನು ಕೊಡುವ ಸಲುವಾಗಿ ಮತ್ತು ತಮ್ಮ ಕೃತಿಯಲ್ಲಿ ಸಮಕಾಲೀನತೆ ಹಾಗೂ ಸಾರ್ವಕಾಲೀನತೆಯನ್ನು ಒಟ್ಟಿಗೆ ಬೆಸೆಯುವ ಉದ್ದೇಶದಿಂದ ಪುಟ್ಟಣ್ಣನವರು ರಾಮಾಯಣದ ಒಟ್ಟು ಆಕಾರವನ್ನು ಬಳಸಿಕೊಂಡು ಕೃತಿಯ ಮುಖ್ಯ ಪಾತ್ರಗಳಾದ ಸೀತಮ್ಮ, ಸದಾಶಿವ ದೀಕ್ಷಿತ-ಅಪ್ಪಾಜಿ ಇವರುಗಳನ್ನು ಒಂದು ಖಚಿತ ಚಾರಿತ್ರಿಕ ಕಾಲದಲ್ಲಿ ನಿಲ್ಲಿಸಿ, ತಮ್ಮ ಕೃತಿಗೆ ಒಂದು ನೈತಿಕನೆಲೆಯನ್ನು ಒದಗಿಸಿಕೊಳ್ಳುತ್ತಾರೆ.

"ಒಂದು ಕೃತಿಯ ಮೇಲೆ ಮತ್ತೊಂದು ಕೃತಿಯ ಹಂದರ-ಕೇವಲ ಎರಡು ಘಟನೆಗಳ ವಿವರಣೆಯಿಂದಲೇ ಕೃತಿಗೆ ಸಮಗ್ರತೆಯನ್ನು ನೈತಿಕ ವಿಮರ್ಶೆಯನ್ನೂ ಒಟ್ಟಿಗೆ ಕೊಡುವ ತಂತ್ರ, ಆವಿಶ್ವಾಸನೀಯ ನಿರೂಪಕಿ ಎರಡು ಪಾತ್ರಗಳ ತಂತ್ರ ಕುತಂತ್ರಗಳ ಮೂಲಕವೆ ಸಮಾಜದ ಒಂದೊಂದೇ ಮೆಟ್ಟಿಲನ್ನು ಮೇಲಕ್ಕೆ ಹತ್ತುತ್ತಾ, ಪ್ರತಿಯೊಂದು ಮೆಟ್ಟಿಲಿನಲ್ಲಿಯೂ ನಿಂತು ತೋರಿಸುವ ಸಮಾಜದ ಅಥೆಂಟಿಕ್ ಚಿತ್ರಣ ಇವೆಲ್ಲಾ ಲಕ್ಷಣಗಳು ಎಳೆಂಟು ದಶಕಗಳ ಹಿಂದೆಯೇ ಬರೆಯಲ್ಪಟ್ಟ ಕಾದಂಬರಿಗಳದ್ದು"[೫] ಎನ್ನುವ ಸಿ.ಎನ್.ರಾಮಚಂದ್ರನ್ ಅವರ ಹೇಳಿಕೆಯ ಹಿನ್ನೆಲೆಯಿಂದ ನಾವು ಕನ್ನಡದ ಪ್ರಾರಂಭದ ಕಾದಂಬರಿಗಳ 'ಶಿಲ್ಪ'ವನ್ನು ಗುರುತಿಸಬಹುದು.

---

[೪] 'ಕನ್ನಡ ಕಾದಂಬರಿಯ ಬೆಳವಣಿಗೆ' ಜಿ.ಎಸ್.ಅಮೂರ್ ಬೆಂಗಳೂರು ಪ್ರಸಾರಾಂಗ ೧೯೮೨.
[೫] 'ಶಿಲ್ಪ ವಿನ್ಯಾಸ' ಪುಟ ೧೨ ಸಿ.ಎನ್.ರಾಮಚಂದ್ರನ್.

"ಕನ್ನಡ ಸಾಂಪ್ರದಾಯಿಕ ಪ್ರತಿಭೆ ತನ್ನದೇ ರೀತಿಯ ಕಥನ ಪರಂಪರೆಯನ್ನು ಸೃಷ್ಟಿಸುತ್ತಿದ್ದ ಹೊತ್ತಿನಲ್ಲಿ ಪಾಶ್ಚಾತ್ಯ ಸಾಹಿತ್ಯ ಸಂಸ್ಕೃತಿಗಳ ಜೊತೆಗೆ ಅದು ಮುಖಾಮುಖಿಯಾಗಬೇಕಾಯಿತು. ಕನ್ನಡ ಕಾದಂಬರಿಯ ಮೊದಲ ಘಟ್ಟದ ಸಮಸ್ಯೆಯೆಂದರೆ ಸಾಂಪ್ರದಾಯಿಕ ಪ್ರತಿಭೆ ಮತ್ತು ಪಾಶ್ಚಿಮಾತ್ಯ ವೈಚಾರಿಕತೆಯ ಸಂಘರ್ಷ[೬].

ಸಾಹಿತ್ಯವು ತನ್ನ ದಂತಗೋಪುರದಿಂದ ಇಳಿದು ಸಮಾಜದ ಹೊಲಸನ್ನು ಹೊರಗೆಳೆದು, ಸಮಾಜವನ್ನು ತಿದ್ದುವುದರಲ್ಲಿ ಪ್ರವೃತ್ತವಾಗಬೇಕು ಎಂದು ನಂಬಿದ ಪ್ರಗತಿ ಶೀಲ ಚಳುವಳಿಯ ನಾಯಕತ್ವ ವಹಿಸಿದ್ದ ಅ.ನ.ಕೃ. ಈ ಉದ್ದೇಶಕ್ಕೆ ಬದ್ಧವಾಗಿಯೇ ಸಾಹಿತ್ಯವನ್ನು ರಚಿಸಿದವರು. ಸು.೧೨೫ ಕಾದಂಬರಿಗಳನ್ನು ರಚಿಸಿರುವ ಇವರು ತಮ್ಮ ಕಾದಂಬರಿಗಳಲ್ಲಿ ನಿರರ್ಗಳ ಭಾಷೆ, ಚತುರ ಸಂಭಾಷಣೆ, ಸ್ಪಷ್ಟ ಪಾತ್ರಚಿತ್ರಣಗಳನ್ನು ತಂದಿರುತ್ತಾರೆ. ಹುರಿಗಾಳಿನಂತೆ ಖರ್ಚಾಗುವ ಕಾದಂಬರಿ ಮಾರಾಟವನ್ನು ಪ್ರೇರೇಪಿಸಿದ ಅ.ನ.ಕೃ. ಅವರು 'ಗೃಹಲಕ್ಷ್ಮೀ', 'ಸಂಧ್ಯಾರಾಗ', 'ಸಂಜೆಗತ್ತಲು' ಈ ಮುಂತಾದ ಜನಪ್ರಿಯ ಕಾದಂಬರಿಗಳನ್ನು ರಚಿಸಿರುತ್ತಾರೆ. ತಮಗೆ ಅಪಾರ ಪ್ರತಿಭೆಯಿದ್ದೂ ಸುಲಭೀಕರಣ ಮತ್ತು ಸರಳೀಕರಣಗಳ ಪ್ರಲೋಭನೆಗೆ ಒಳಗಾದರು. ಇದರಿಂದ ಆದರ್ಶಗಳ ಕಾಲ್ಪನಿಕ ಲೋಕದಲ್ಲಿ ತೇಲುವ ಅವರ ಪಾತ್ರಗಳು ವಾಸ್ತವದಿಂದ ದೂರವಾಗುತ್ತಾ ಹೋದವು.

'ರಂಗಮ್ಮನ ವಠಾರ', 'ಚಿರಸ್ಮರಣೆ'- ಈ ಮುಂತಾದ ಜನಪ್ರಿಯ ಕಾದಂಬರಿಗಳನ್ನು ರಚಿಸುವುದರ ಮೂಲಕ ನಿರಂಜನರು ತಮ್ಮ ಕಥನಾ ಸಾಮರ್ಥ್ಯವನ್ನು ಮೆರೆದವರು. 'ಬಂಧ'ದ ಬಗೆಗೆ ಖಚಿತತೆ, ಓದುಗರೊಡನೆ ಕಥೆಗಳ ಮುನ್ನುಡಿ ಅಥವಾ ಹಿನ್ನುಡಿಯಲ್ಲಿ ನಡೆಸುವ ಸಂವಾದ, ಸುಸ್ಪಷ್ಟ ಪಾತ್ರ ಚಿತ್ರಣ,

---

[೬] 'ಕಥನ ಶಾಸ್ತ್ರ' -ಡಿ.ಆರ್.ನಾಗರಾಜ್.ಪುಟ ೬೭

ನಿರರ್ಗಳ ಭಾಷೆ, ರೂಪಕ ನಿರ್ಮಾಣ ಸಾಮರ್ಥ್ಯ- ಇವೆಲ್ಲವೂ ನಿರಂಜನರ ಕಥನದ ಲಕ್ಷಣಗಳಾಗಿವೆ.

ಅನುಪಮಾ ನಿರಂಜನರು 'ಆಳ', 'ಮಾಧವಿ'- ಮುಂತಾದ ಅನೇಕ ಕಾದಂಬರಿಗಳನ್ನು ಕನ್ನಡ ಕಾದಂಬರಿಲೋಕಕ್ಕೆ ನೀಡಿದವರು. ಆದರೆ ಇವರು ತಮ್ಮ ಕಾದಂಬರಿಗಳಲ್ಲಿ ಬರವಣಿಗೆಯ ಹದ, ಶೈಲಿ, ಧ್ವನಿ- ಇವುಗಳಿಗೆ ಗಮನಕೊಟ್ಟಿರಲಿಲ್ಲ. "ಬರಹಗಾರ್ತಿಯ ಬದುಕು" ಪುಸ್ತಕದಲ್ಲಿ ಸ್ವತಃ ಅನುಪಮಾ ಅವರೇ "ಅವಸರದ ರಚನೆ, ಅಧ್ಯಯನದ ಕೊರತೆ, ಸಾಕಷ್ಟು ಚಿಂತನೆ ಇಲ್ಲದಿರುವಿಕೆ, ಜನಪ್ರಿಯತೆಯ ಆಸೆ ಇವೆಲ್ಲ ತಮ್ಮ ಬರವಣಿಗೆಗೆ ಕುಂದನ್ನುಂಟು ಮಾಡಿದವು"[೭] ಎಂಬುದಾಗಿ ಅಭಿಪ್ರಾಯಪಟ್ಟಿರುತ್ತಾರೆ.

'ಸಂಸ್ಕಾರ', 'ಅವಸ್ಥೆ', 'ಭಾರತೀಪುರ', – ಈ ಮುಂತಾದ ಪ್ರಸಿದ್ಧ ಕಾದಂಬರಿಗಳನ್ನು ರಚಿಸಿರುವ ಅನಂತಮೂರ್ತಿಯವರು ನವ್ಯ ಪರಂಪರೆಯ ಕಾದಂಬರಿಕಾರರು. ಇವರ ಕಾದಂಬರಿಗಳ 'ಶಿಲ್ಪ'ದಲ್ಲಿ ಜೀವನದ ದ್ವಂದ್ವಗಳನ್ನು ಮತ್ತು ದ್ವಿಮುಖ ವಿರೋಧಿ ಶಕ್ತಿಗಳನ್ನು ಒಟ್ಟೊಟ್ಟಿಗೆ ಇಟ್ಟುನೋಡುವ ಪ್ರಜ್ಞೆಯನ್ನು ಕಾಣಬಹುದು.

ಲಂಕೇಶ್‌ರ ಕಾದಂಬರಿಗಳಲ್ಲಿ 'ಶಿಲ್ಪ'ವು ನಿಸ್ಸಂಕೋಚವಾದ ಅಭಿವ್ಯಕ್ತಿಯ ರೂಪವನ್ನು ತಾಳಿದೆ. "ನಾಗರೀಕತೆಯ ಕವಚದಲ್ಲಿ ಮನುಷ್ಯನ ನಿಜವಾದ ಸ್ವರೂಪದ ಅರಿವು ಅವರ(ಲಂಕೇಶರ) ನಿರಂತರ ಶೋಧದ ವಸ್ತು"[೮] ಎಂಬುದಾಗಿ ಜಿ.ಎಸ್.ಆಮೂರ್ ಅವರು ಅಭಿಪ್ರಾಯಪಟ್ಟಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ.

---

[೭] 'ಬರಹಗಾರ್ತಿಯ ಬದುಕು'. ಪುಟ ೩೮. 'ಆತ್ಮಕಥನ' ಅನುಪಮಾ ನಿರಂಜನ.

[೮] 'ಕನ್ನಡ ಕಥನ ಸಾಹಿತ್ಯ ಕಾದಂಬರಿ' – ಜಿ.ಎಸ್.ಆಮೂರ್.ಪುಟ ೫೮.

ಇವರು ರಚಿಸಿರುವ 'ಅಕ್ಕ', 'ದೇವಿ', ಈ ಮುಂತಾದ ಕಾದಂಬರಿಗಳಲ್ಲಿ ಬದುಕಿನ ತುಡಿತಗಳನ್ನು ಬಿಂಬಿಸುವಂಥ 'ಶಿಲ್ಪ' ರಚನೆಗೊಂಡಿರುವುದನ್ನು ಕಾಣಬಹುದು.

೧೯೬೦ರ ದಶಕದ ಪ್ರಾರಂಭದಲ್ಲಿ ಕನ್ನಡ ಕಾದಂಬರಿಗೆ ಹೊಸ ಚಾಲನೆಯನ್ನು, ಹೊಸ ಚೈತನ್ಯವನ್ನು ನೀಡಿರುವಂತಹವರು ಕುವೆಂಪು, ಶಿವರಾಮ ಕಾರಂತ ಮತ್ತು ಎಸ್.ಎಲ್.ಭೈರಪ್ಪನವರು.

ಕುವೆಂಪು ಇವರು 'ಮಲೆಗಳಲ್ಲಿ ಮದುಮಗಳು', 'ಕಾನೂರು ಸುಬ್ಬಮ್ಮ ಹೆಗ್ಗಡತಿ'- ಈ ಕಾದಂಬರಿಗಳ ಮೂಲಕ ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಪ್ರಸಿದ್ಧಿಯನ್ನು ಪಡೆದವರು. ಇವರ ಕಾದಂಬರಿಗಳು ಪಾತ್ರಗಳ ವ್ಯಕ್ತಿತ್ವ ವಿಶ್ಲೇಷಣೆಗಿಂತ ಸಾಮಾಜಿಕ ವಿಶ್ಲೇಷಣೆ ಲಕ್ಷ್ಯದಲ್ಲಿಟ್ಟುಕೊಂಡು ರಚನೆಯಾಗಿದ್ದು, ಭಾರತೀಯ ಪರಂಪರೆಯ ಶಿಥಿಲ 'ಬಂಧ'ವನ್ನು ಹೋಲುತ್ತದೆ. ಈ 'ಬಂಧ'ದ ಶಿಥಿಲತೆ ಇವರ ಕಾದಂಬರಿಗಳಲ್ಲಿ ದೂರದಿಂದ ಕಾಣುವ ಅಂಶ ಮಾತ್ರ, ಹತ್ತಿರದಿಂದ ಸೂಕ್ಷ್ಮವಾಗಿ ನೋಡಿದರೆ ಆ ಶಿಥಿಲತೆಯು, ಗೋಜು ಗೋಜಲಿನ ಆಳದಲ್ಲಿ ಬೇರೆಯೇ ತರಹದ ಒಂದು ಏಕತೆ ಕಾಣುತ್ತದೆ. ಈ ಏಕತೆಯ ಮೂಲ ಪರಸ್ಪರ ವಿರುದ್ಧವಾಗಿ ತೋರುವ ಘಟಕಗಳನ್ನು ಒಂದು ಗೂಡಿಸುವ ಮೂಲ ಅನೇಕ ವಿಧವಾಗಿರುತ್ತದೆ. ಉದಾ: 'ಮಲೆಗಳಲ್ಲಿ ಮದುಮಗಳು' ವಿನ ಹುಲಿಕಲ್ಲು ಗುಡ್ಡ ಚಿತ್ರಣ.

ಅನೇಕ ವಿಮರ್ಶಕರು ಗುರುತಿಸಿರುವಂತೆ ಸಂಸ್ಕೃತಿಯೊಡನೆ ಪ್ರೀತಿ – ದ್ವೇಷಗಳ ಸಂಬಂಧವನ್ನು ಇರಿಸಿಕೊಂಡಿರುವ ಕಾರಂತರು "ನಮ್ಮ ಸಂಸ್ಕೃತಿಯಲ್ಲೇ ಇರುವ ವೈರುಧ್ಯಗಳನ್ನು ನಮಗೆ ಕಾಣಿಸಿ ಆ ಮೂಲಕ ನಮ್ಮ ಅರಿವಿನ ವಿಕಾಸಕ್ಕೆ

ಕಾರಣರಾಗುತ್ತಾರೆ[೯]. ಕನ್ನಡ ಕಾದಂಬರಿ ಲೋಕಕ್ಕೆ ಅತ್ಯದ್ಭುತವಾದ ಕಾದಂಬರಿಗಳನ್ನು ನೀಡುವುದರ ಮೂಲಕ ಜನಮನವನ್ನು ಗೆದ್ದಿರುವ ಕಾರಂತರು 'ಸರಸಮ್ಮನ ಸಮಾಧಿ', 'ಅಳಿದ ಮೇಲೆ', 'ಬೆಟ್ಟದ ಜೀವ', 'ಚೋಮನ ದುಡಿ', 'ಧರ್ಮರಾಯನ ಸಂಸಾರ', 'ಮೈ ಮನಗಳ ಸುಳಿಯಲ್ಲಿ' –ಇವೇ ಮುಂತಾದ ಕಾದಂಬರಿಗಳನ್ನು ರಚಿಸಿರುತ್ತಾರೆ. ಇವರ ಕಾದಂಬರಿಗಳು ಒಂದು ನಿರ್ದಿಷ್ಟವಾದ 'ಶಿಲ್ಪ'ದಿಂದ ರಚನೆಗೊಂಡಿದೆ ಎಂದು ಹೇಳಲು ಸಾಧ್ಯವಾಗದು. 'ಸರಸಮ್ಮನ ಸಮಾಧಿ' ಕಾದಂಬರಿಯಲ್ಲಿ ಭ್ರಮೆ ಹಾಗೂ ವಾಸ್ತವಗಳು ಕಲ್ಪಿಸಿಕೊಳ್ಳುವ ನಿರೂಪಣಾ ವಿಧಾನವನ್ನು ಕಾರಂತರು ಬಳಸಿದರೆ 'ಮೈ ಮನಗಳ ಸುಳಿಯಲ್ಲಿ' ಉತ್ತಮ ಪುರುಷ ನಿರೂಪಣೆ ಎರಡನ್ನೂ ಬಳಸಿಕೊಂಡಿದ್ದಾರೆ. 'ಮರಳಿ ಮಣ್ಣಿಗೆ' ಸರಳ ರೇಖಾತ್ಮಕ ಕಥನ ಕ್ರಮದಲ್ಲಿದೆ. ಶೈಲಿ, ತಂತ್ರಗಳ ಬಗ್ಗೆಯೂ ಕಾರಂತರಿಗೆ ಅತಿಗೀಳು ಇಲ್ಲ. "ಯಾವ ತಂತ್ರವೇ ಇರಲಿ ಅದೇ ಒಂದು ದೈವವಲ್ಲ.... ಯಾರಿಗೆ ನಾವು ತಿಳಿಸ ಬಯಸುತ್ತೇವೋ ಅದು ಅವರಿಗೆ ಅರ್ಥವಾಗದೆ ಹೋದರೆ ನಮ್ಮ ಹಿರಿಮೆ ಹೆಚ್ಚಾಗುವುದಿಲ್ಲ"[೧೦] ಎನ್ನುವ ಅವರ ಮಾತನ್ನು ಇಲ್ಲಿ ನೆನಪಿಸಿಕೊಳ್ಳಲಾಗಿದೆ. ಅನಂತಮೂರ್ತಿಯವರು ಕೂಡ ಕಾರಂತರ ಸಾಹಿತ್ಯ ಸೃಷ್ಟಿಯ ಕುರಿತಂತೆ "…. ಸುಂದರವಾಗಿ ಬರೆಯಬೇಕು, ಆಕರ್ಷಕವಾಗಿ ಕಾಣಬೇಕು ಎನ್ನುವ ಚಪಲವಿಲ್ಲದೆ ಆಯ್ದುಕೊಂಡ ವಿಷಯದಲ್ಲಿ ಏಕಾಗ್ರ ಮನಸ್ಕರಾಗಿ..... ಸೃಷ್ಟಿಸುತ್ತಾರೆ" ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ.

ಕುವೆಂಪು, ಕಾರಂತ–ಇವರ ಕಾದಂಬರಿಗಳ ವಿಧಾನವೇ ಬೇರೆ, ಡಾ॥ ಎಸ್.ಎಲ್.ಭೈರಪ್ಪನವರ ವಿಧಾನವೇ ಬೇರೆ. "ಜೀವನದ ಘಟನೆಗಳನ್ನು ನೇರವಾಗಿ ಹಾಗೆಯೇ ತೆಗೆದುಕೊಂಡು ಒಂದು ಹೂ ಅರಳಿದ ಹಾಗೆ, ಒಂದು ಗಿಡ ಬೆಳೆದ ಹಾಗೆ ವಿವರಿಸಲು ಭೈರಪ್ಪನವರಿಗೆ ಆಗುವುದಿಲ್ಲ. ತಾವು ಏನು ಅನುಭವಗಳನ್ನು ಎಲ್ಲಾ

---

[೯] ಶಿವರಾಮ ಕಾರಂತ ಎರಡು ಅಧ್ಯಯನಗಳು ಪುಟ ೧೯. ಟಿ.ಪಿ.ಅಶೋಕ್.

[೧೦] ಸಾಹಿತ್ಯ ಸಂವಾದ ಕಾರ್ಯಕ್ರಮವೊಂದರಲ್ಲಿ ಕಾರಂತರು ಆಡಿರುವ ಮಾತು.

ದಿಕ್ಕುಗಳಿಂದ ಪಡೆಯುವರೋ ಆ ಅನುಭವಗಳು ಮಥಿಸಿ–ಮಥಿಸಿ, ಹಾಗೆ ಅಮೂರ್ತವಾದ ಕೆನೆಯಾಗುತ್ತಾ ಹೋಗುತ್ತದೆ. ಇವರ ಮನಸ್ಸಿನೊಳಗೆ ಮೂರ್ತವಾದ ಇಂದ್ರೀಯಗಳಿಂದ ಗ್ರಹಿತವಾದ ಅನುಭವಗಳು ಅಮೂರ್ತದ ನೆಲೆಯನ್ನು ಮುಟ್ಟಿದ ಮೇಲೆ ಅಲ್ಲಿ ಚಿಂತನೆಗಳೊಳಗಾದ ಮೇಲೆ ಅದಕ್ಕೆ ತಕ್ಕ ಆಕಾರವನ್ನು ಪಡೆಯುವ ರೀತಿ ಇವರ ಕಾದಂಬರಿ ರಚನೆಯಾಗಿದೆ[೧೧].

ಕನ್ನಡದಲ್ಲಿ ರೂಪಕ್ಕೆ ಗಮನಕೊಟ್ಟ ಕಾದಂಬರಿಕಾರರೇ ಇಲ್ಲ. ವಿ.ಎಂ.ಇನಾಂದಾರರು ಮಾತ್ರ ರೂಪಕ್ಕೂ ಗಮನಕೊಟ್ಟು ಕಾದಂಬರಿಗಳನ್ನು ಸೊಗಸಾಗಿ ಬರೆಯುತ್ತಿದ್ದರು. ರೂಪದ ಕಲಾತ್ಮಕ ಸಿದ್ಧಿಯನ್ನು ಕನ್ನಡದಲ್ಲಿ ಭೈರಪ್ಪನವರ ಕಾದಂಬರಿಗಳಲ್ಲಿ ಕಾಣಬಹುದು. ಅವರೇ ಹೇಳಿರುವ ಮಾತು–"ನಾನು ತೆಗೆದುಕೊಂಡ ವಸ್ತು ಮತ್ತು ಕಲ್ಪಿಸಿಕೊಂಡ ಪಾತ್ರಗಳು ಅವಕ್ಕೆ ತಕ್ಕಂತೆ ರೂಪ ತಾನೇ ತಾನಾಗಿ ನಡೆಯುತ್ತಾ ಹೋಗುತ್ತವೆ"[೧೨]. ಅಂದರೆ ಇವರ ಕಾದಂಬರಿಗಳಲ್ಲಿ ವಸ್ತು ತನ್ನ ಆಕಾರವನ್ನು ತಾನೇ ರೂಪಿಸಿಕೊಳ್ಳುತ್ತಾ ಹೋಗುತ್ತದೆ. ಕಾದಂಬರಿ ರಚನೆಕಾಲದಲ್ಲಿ ಭೈರಪ್ಪನವರು ಅಮೂರ್ತದಿಂದ ಮೂರ್ತಕ್ಕೆ ಇಳಿದು ಬರುತ್ತಾರೆ. ಇವರ ಕಾದಂಬರಿಯಲ್ಲಿ ವಾಸ್ತವತೆ ಎನ್ನುವುದು ಬದುಕು ಹೇಗೆ ಇದೆಯೋ ಹಾಗೆ ಇರುವಂಥ ರೀತಿಯದಲ್ಲ.

ಯಾವುದೇ ವಿಚಾರ, ಆಲೋಚನೆ, ವೈಚಾರಿಕತೆ ಕಲೆಯಾಗಿ ಪರಿವರ್ತಿತ ಆಗದೇ ಹೋದರೆ, ಆ ಹದವನ್ನು ಸಾಧಿಸಿಕೊಳ್ಳದೇ ಹೋದರೆ ಆ ಕಾದಂಬರಿ ವಿಫಲವಾಗುತ್ತದೆ. ಅಂದರೆ ವಿಚಾರ ಅಧಿಕವಾದಾಗ ಆ ಕೃತಿ ರಚನೆ ಸೋಲುತ್ತದೆ ಎಂಬುದು ಭೈರಪ್ಪನವರ ಅಭಿಮತ. ಈ ಅಂಶವನ್ನು ಭೈರಪ್ಪನವರು ತಮ್ಮ

---

[೧೧] 'ಭೈರಪ್ಪಾಭಿನಂದನಾ' ಪುಟ ೨೪೪. ಪ್ರೋ।।ಎಂ.ಎಚ್.ಕೃಷ್ಣಯ್ಯ

[೧೨] 'ನಾನೇಕೆ ಬರೆಯುತ್ತೇನೆ' ಪುಟ ೭೮. –ಎಸ್.ಎಲ್.ಭೈರಪ್ಪ.

ಕಾದಂಬರಿಗಳಿಗೆ 'ಶಿಲ್ಪ'ವನ್ನು ತಂದುಕೊಳ್ಳುವಾಗ ವಿಶೇಷವಾಗಿ ಗಮನದಲ್ಲಿಟ್ಟುಕೊಂಡಿರುವುದನ್ನು ಕಾಣಬಹುದಾಗಿದೆ.

ಹೀಗೆ ಕನ್ನಡ ಕಾದಂಬರಿಯ 'ಶಿಲ್ಪ'ವು ಪ್ರಾರಂಭದಲ್ಲಿ ಶಿಥಿಲ 'ಬಂಧ'ದ ಸ್ವರೂಪದಲ್ಲಿ ಕಾಣಿಸಿಕೊಂಡಿದ್ದು, ಕ್ರಮೇಣ ಆಧುನಿಕ ಕನ್ನಡ ಕಾದಂಬರಿ ರಚನೆಯ ಸಂದರ್ಭದಲ್ಲಿ ವಿಭಿನ್ನ ದೃಷ್ಟಿಕೋನದ ಹಿನ್ನೆಲೆಯಿಂದ ವಿಭಿನ್ನವಾದ ಕಥನ ಕ್ರಿಯೆಯ ಸ್ವರೂಪವನ್ನು ತಾಳಿತು. ಅದರಲ್ಲಿಯೂ ಭೈರಪ್ಪನವರ ಕಥನ 'ಶಿಲ್ಪ'ವು ಉಳಿದೆಲ್ಲಾ ಕಾದಂಬರಿಕಾರರ ಕಾದಂಬರಿಗಳ ಕಥನ 'ಶಿಲ್ಪ'ಕ್ಕಿಂತ ಭಿನ್ನ ಸ್ವರೂಪವನ್ನು ಪಡೆದುಕೊಂಡು ರಚನೆಗೊಂಡಿದೆ. ಭೈರಪ್ಪನವರ ಕಾದಂಬರಿಗಳ ವೈಶಿಷ್ಟ್ಯವೆಂದರೆ ಅವರ ಕೃತಿಗಳ ವೈಚಾರಿಕ ಹೊರರಚನೆ ಅತಿ ದುರ್ಬಲವಾಗಿರುತ್ತದೆ. ಅವರ ಭಾವನಾತ್ಮಕ ಒಳರಚನೆ ಅತ್ಯಂತ ಪ್ರಭಾವಶಾಲಿಯಾಗಿರುತ್ತದೆ. ಇವರ ಹೆಚ್ಚಿನ ಕಾದಂಬರಿಗಳಲ್ಲಿ ಕೃತಿಗಳ ಹೊರರಚನೆಗಳ 'ಆಧುನಿಕ' ವೈಚಾರಿಕತೆಯನ್ನು ಅವುಗಳ ಸಂಪ್ರದಾಯನಿಷ್ಠ ಒಳರಚನೆಗಳು ಅಲ್ಲಲ್ಲೇ ಸತತ ವಿರೋಧಿಸುತ್ತ ಖಂಡಿಸುತ್ತ ಹೋಗುತ್ತದೆ.

ಈ ಹೇಳಿಕೆಗಳ ನಿದರ್ಶನಕ್ಕಾಗಿ ಅವರ ಕೆಲವು ಪ್ರಸಿದ್ಧ ಕೃತಿಗಳನ್ನು ಗಮನಿಸುವುದಾದರೆ 'ವಂಶವೃಕ್ಷ' ಕಾದಂಬರಿಯ ಹೊರರಚನೆ–ವೈಚಾರಿಕವಾದದ್ದು. ಹಿಂದೂ ಸಮಾಜದಲ್ಲಿ ಅದರಲ್ಲೂ ಬ್ರಾಹ್ಮಣ ಸಮಾಜದಲ್ಲಿ ವಂಶಗೌರವ ಮತ್ತು ವಂಶ ಪಾವಿತ್ರ್ಯಕ್ಕೆ ಇರುವ ಮಹತ್ವದ ಸ್ಥಾನವನ್ನು ಅಲ್ಲಗಳೆಯುವುದು, ಹಾಗೂ ಪುರುಷನಿಗಿರುವಂತೆಯೇ ಸ್ತ್ರೀಗೂ ಮರು ವಿವಾಹವನ್ನು ಸಮರ್ಥಿಸುವುದು, ಅಂತೆಯೇ ಸನಾತನ ಧರ್ಮನಿಷ್ಠ ಶ್ರೋತ್ರಿಗಳು ತಮ್ಮ ವಿಧವೆ ಸೊಸೆ ಮರುಮದುವೆಯಾಗಲು ಅವರ ಒಪ್ಪಿಗೆ ಕೇಳಿದಾಗ, ತಮ್ಮ ವಂಶವನ್ನು ಕುರಿತು ಅಪಾರ ಗೌರವವಿರುವ ಅವರು ಅದಕ್ಕೆ ಸಮ್ಮತಿಸುವುದಿಲ್ಲ ಮತ್ತು ಅವಳ ಮಗನನ್ನೂ ಅವಳೊಡನೆ ಕಳುಹಿಸುವುದಿಲ್ಲ. ಆದರೆ ಕೊನೆಗೆ ಅವರಿಗೆ ತಾವೇ ಆ ವಂಶಕ್ಕೆ ಸೇರಿದವರಲ್ಲವೆಂದು, ಒಬ್ಬ ಅಜ್ಞಾತ

ಹರಿಕಥೆಯ ದಾಸನ ಮಗನೆಂದೂ ತಿಳಿಯುತ್ತದೆ. ಹೀಗೆ ಒಟ್ಟಾರೆಯಾಗಿ, ಈ ನೆಲೆಯಲ್ಲಿ ಸನಾತನ ಧರ್ಮದ ಅಡಿಗಲ್ಲಾಗಿರುವ 'ವಂಶಪಾವಿತ್ರ್ಯ'ದ ಪರಿಕಲ್ಪನೆಯನ್ನು ನಗೆಗೀಡು ಮಾಡಿ ತಿರಸ್ಕರಿಸುವ, ಆ ಮೂಲಕ ಅಂತಹ ಧರ್ಮದ ಇತರ ಆಚಾರ-ವಿಚಾರಗಳನ್ನು ಅಲ್ಲಗಳೆಯುವ ಕೃತಿ 'ವಂಶವೃಕ್ಷ'.

ಆದರೆ ಈ ಕೃತಿಯ ಒಳರಚನೆ ಇದರ ವಿರುದ್ಧ ದಿಕ್ಕಿನಲ್ಲಿ ಸಾಗುತ್ತದೆ. ಇಲ್ಲಿ ತಿರಸ್ಕಾರಕ್ಕೆ ಒಳಗಾಗಬೇಕಾದ ಶ್ರೀನಿವಾಸ ಶ್ರೋತ್ರಿಗಳು ಒಂದು ಭವ್ಯ, ಉದಾತ್ತ ವ್ಯಕ್ತಿಯಾಗಿ ಬಿಡುತ್ತಾರೆ. ಅವರ ವ್ಯಕ್ತಿತ್ವದಲ್ಲಿಯ ಸಂಯಮ, ವಿದ್ವತ್ ಮತ್ತು ಸಾತ್ವಿಕತೆ ಅವರ ಪಾತ್ರವನ್ನು ಉದಾತ್ತಗೊಳಿಸುತ್ತವೆ. ಹೆತ್ತ ತಾಯಿಯಿಂದ ಮಗನನ್ನು ಬೇರ್ಪಡಿಸುವಂತಹ ಅವರ ಕ್ರೌರ್ಯವೂ ಮುಚ್ಚಿಹೋಗುತ್ತದೆ. ಶ್ರೋತ್ರಿಗಳ ಪಾತ್ರ ಎಷ್ಟು ಪ್ರಭಾವಕಾರಿಯಾಗಿ ಬಂದಿದೆಯೋ ಅಷ್ಟೇ ದುರ್ಬಲವಾಗಿ ಕಾತ್ಯಾಯಿನಿಯ ಪಾತ್ರ ರಚನೆಗೊಂಡಿದೆ. ಎರಡನೆಯ ಮದುವೆಯಾದ ನಂತರ ಅವಳಿಗೆ ಆಗುವ ಹೆದರಿಕೆ, ಮನೋವಿಕಾರ ದುಃಸ್ವಪ್ನಗಳಿಗೆ ಕೃತಿಯಲ್ಲಿ ಯಾವ ಕಾರಣವೂ ದೊರಕುವುದಿಲ್ಲ. ಪದೇ ಪದೇ ಆಕೆಗೆ ಗರ್ಭಪಾತವಾಗುವುದು. ಈ ಎಲ್ಲ ಚಿತ್ರಣದಿಂದಾಗಿ ಕೃತಿಯ ವೈಚಾರಿಕತೆ ಕುಸಿದುಹೋಗುತ್ತದೆ. ಅಂದರೆ ಶ್ರೋತ್ರಿಗಳ 'ಸಾತ್ವಿಕತೆ' ಮತ್ತು ಮರುವಿವಾಹದ ನಂತರ ಕಾತ್ಯಾಯಿನಿ ಅನುಭವಿಸುವ ದುಃಖಕ್ಲೇಶಗಳು ಓದುಗರಿಗೆ ವಿಧವಾವಿವಾಹ ಅನರ್ಥಕಾರಿಯಾದುದು ಎಂಬ ಅಭಿಪ್ರಾಯವನ್ನು ನೀಡಿಬಿಡುತ್ತದೆ.

ಭೈರಪ್ಪನವರ ಇನ್ನೊಂದು ಕೃತಿ 'ದಾಟು'-ಈ ಕಾದಂಬರಿಯು ಜಾತಿಪದ್ಧತಿಯನ್ನು ವಿರೋಧಿಸುವ, ಜಾತಿಯ ಅಡೆತಡೆಗಳನ್ನು ದಾಟಿ ಮಾನವೀಯತೆಯನ್ನು ಎತ್ತಿ ಹಿಡಿಯಲು ಪ್ರಯತ್ನಿಸುವ ಕೃತಿ. ಈ ಕಾದಂಬರಿಯಲ್ಲಿ ಲೇಖಕರು ತಂದಿರಿಸಿರುವ ವೈಚಾರಿಕತೆ ಹಾಗೂ ಆಧುನಿಕ ದೃಷ್ಟಿಕೋನ ಅತ್ಯಂತ ತೀವ್ರವಾಗಿದ್ದು, ಕಾದಂಬರಿಯ ಹೊರರಚನೆಯನ್ನು ಗಟ್ಟಿಗೊಳಿಸುತ್ತವೆ. ಕೃತಿಯ

ಕೊನೆಯಲ್ಲಿ ಬರುವ ಘಟನೆ–ಡೈನಮೈಟ್ ಸಿಡಿತದಿಂದಾಗಿ ಕಟ್ಟೆಯೊಡೆದು ನುಗ್ಗುವ ಹಾಗೂ ಇಡೀ ಊರನ್ನೇ ಮುಳುಗಿಸುವ ಜಲಪ್ರವಾಹ ಘಟನೆಯ ಮೂಲಕ, ಕಾದಂಬರಿಕಾರರು ಒಂದು ಭಯಂಕರ ಕ್ರಾಂತಿಯಾಗದೇ ನಮ್ಮ ಹಿಂದೂ ಸಮಾಜದಲ್ಲಿ ಜಾತಿ ನಿರ್ಮೂಲ ಸಾಧ್ಯವಿಲ್ಲ ಎಂದು ಅತ್ಯಂತ ಪರಿಣಾಮಕಾರಿಯಾಗಿ ನಿರೂಪಿಸುತ್ತಾರೆ. ಅಲ್ಲದೆ ಕೃತಿಯುದ್ದಕ್ಕೂ ವರ್ಣವ್ಯವಸ್ಥೆಯ ವಿವಿಧ ಮುಖಗಳನ್ನು ಪ್ರದರ್ಶಿಸುವ ಘಟನೆಗಳು ನಂಬಿಕೆಗಳು, ಕಥೆಗಳು ಕಾದಂಬರಿಯ ಹೊರ–ರಚನೆಯನ್ನು ದಟ್ಟವಾಗಿಸುತ್ತವಲ್ಲದೆ ಅದಕ್ಕೆ ಸಂಕೀರ್ಣತೆಯನ್ನು ಕೊಡುತ್ತವೆ. ಆದರೆ ಕೃತಿಯ ಒಳರಚನೆ ಸೂಕ್ಷ್ಮವಾಗಿ ಅಲ್ಲಲ್ಲಿ ಕೃತಿಯ ವೈಚಾರಿಕತೆಯನ್ನು ವಿರೋಧಿಸುತ್ತಾ ಪರೋಕ್ಷವಾಗಿ ಜಾತಿ ವ್ಯವಸ್ಥೆಯನ್ನು ಎತ್ತಿ ಹಿಡಿಯುತ್ತದೆ. ಸಹಜವಾಗಿಯೇ ಜಾತಿ ವ್ಯವಸ್ಥೆಯನ್ನು ಕುರಿತ ಅವಳ ವಿರೋಧ, ಅವಳ ಋಜುತ್ವ, ಸತ್ಯಪ್ರಿಯತೆ ಇತ್ಯಾದಿಗಳು ಅವಳನ್ನೂ ಆ ಮೂಲಕ ಅವಳ ಜಾತಿಯನ್ನು ಭವ್ಯಗೊಳಿಸುತ್ತವೆ. ಇದಕ್ಕೆ ವಿರುದ್ಧವಾಗಿ ಬರುವ ಹರಿಜನ ಮೋಹನದಾಸ ಹಾಗೂ ಮೀರಾ ಇವರ ಪಾತ್ರಗಳು ಕುಬ್ಜವಾಗಿದೆ.

ಮುಖ್ಯವಾಗಿ ಕೃತಿಯ ವೈಚಾರಿಕತೆ ದುರ್ಬಲವಾಗುವುದು. ಕಾದಂಬರಿಯ ಪ್ರಮುಖ ಘಟ್ಟದಲ್ಲಿ ಮೋಹನದಾಸ ದೇವಸ್ಥಾನಕ್ಕೆ ಪ್ರವೇಶ ಮಾಡಿದೊಡನೆಯೇ ಮೂರ್ಛೆ ಹೋಗುವುದು, ಮೀರಾ ಮಾನಸಿಕವಾಗಿ ಸ್ಥೈರ್ಯ ಹಾಗೂ ಆತ್ಮವಿಶ್ವಾಸವಿಲ್ಲದೇ ದುರ್ಬಲವಾಗುವಲ್ಲಿ, ಇದರಿಂದಾಗಿ ವರ್ಣಾಶ್ರಮ ಪದ್ಧತಿಯನ್ನು ಎತ್ತಿ ಹಿಡಿದಂತೆ ಕಂಡುಬರುತ್ತದೆ. ಇದಕ್ಕೆ ಪೂರಕವಾಗಿ ಸತ್ಯಳು ಏಕಾಂಗಿಯಾಗಿ ತೋಟದಲ್ಲಿ ಹೋಮ ಮಾಡುವುದು; ಮೀರಾಳಿಗೆ ಯಜ್ಞೋಪವೀತಧಾರಣೆ ಮಾಡಿಸುವುದು, ಕೀಳುಜಾತಿಗಳ ಮುಖಂಡರು ಬಂದು ಊರ ಜೋಯಿಸನಿಗೆ ಲಂಚಕೊಟ್ಟು ತಮ್ಮ ಜಾತಿಗಳನ್ನು ತುಸು ಮೇಲೆತ್ತಲು ಪ್ರಯತ್ನಿಸುವುದು, ಬ್ರಾಹ್ಮಣೇತರರ ಮೂಢನಂಬಿಕೆಗಳು ಇತ್ಯಾದಿ ಇವೆಲ್ಲ ಒಟ್ಟಾಗಿ ವೈದಿಕ ಧರ್ಮ ಹಾಗೂ ಆಚರಣೆಗಳನ್ನು ಎತ್ತಿ ಹಿಡಿದು ಕೃತಿಯ ವೈಚಾರಿಕತೆಯನ್ನು ಅಲ್ಲಗಳೆಯುತ್ತದೆ.

ಒಳ-ಹೊರ ರಚನೆಗಳ ವೈರುಧ್ಯದ ಇನ್ನೊಂದು ವಿನ್ಯಾಸವನ್ನು ದಾಖಲಿಸುವ ಕಾದಂಬರಿ 'ಸಾಕ್ಷಿ'ಯನ್ನು ಗಮನಿಸುವುದಾದರೆ, ಕಾಮದ ವಿವಿಧ ರೂಪಗಳನ್ನು ಮುಖ್ಯವಾಗಿ ಲೈಂಗಿಕ ಕಾಮ ಹಾಗೂ ಅರ್ಥಕಾಮ ಇವುಗಳನ್ನು ಈ ಕಾದಂಬರಿ ಮಂಜಯ್ಯ ಹಾಗೂ ನಾಗಪ್ಪ ಇವರುಗಳ ಮೂಲಕ ಶೋಧಿಸುತ್ತದೆ.

ಲೈಂಗಿಕ ಕಾಮದ ತೀವ್ರತೆ ಹಾಗೂ ಅದರ ಸುಳ್ಳನ್ನು ದಾಖಲಿಸುವ ಮಂಜಯ್ಯನ ಪಾತ್ರಕ್ಕೆ ಸಹಜವಾಗಿಯೇ ಕೃತಿಯಲ್ಲಿ ಒತ್ತು ಬೀಳಬೇಕು. ಆದರೆ 'ಸಾಕ್ಷಿ'ಯಲ್ಲಿ ಮಂಜಯ್ಯನ ಧೈರ್ಯ ನೇರನಡೆ, ನೀತಿ, ಅನೀತಿಗಳ ಪ್ರಶ್ನೆಯಿಂದ ದೂರವಾದ ಅವನ ವರ್ತನೆ ಇವುಗಳಿಂದಾಗಿ ಅವನಿಗೊಂದು ವಿಧದ 'ರಮ್ಯ ಭವ್ಯತೆ' ಬಂದು ಬಿಡುತ್ತದೆ. ಪುರುಷತ್ವದ ಪ್ರತೀಕವಾಗುವ ಅವನೆದುರಿನಲ್ಲಿ ಸ್ತ್ರೀ ಅತ್ಯಂತ ದುರ್ಬಲಳಾಗುತ್ತಾಳೆ. ಅವನ ಸ್ವಭಾವದ ಆರಿವಿದ್ದೂ ಎಲ್ಲಾ ಜಾತಿಗಳ, ಎಲ್ಲಾ ವಯಸ್ಸಿನ ಸ್ತ್ರೀಯರು ಅವನಿಂದ ಆಕರ್ಷಿತರಾಗುತ್ತಾರೆ. ಇಲ್ಲೆಲ್ಲಾ ಸುಳ್ಳೇ ಭವ್ಯವಾಗಿ ಸತ್ಯ ದುರ್ಬಲ ಹಾಗೂ ವಿಕಾರಗೊಳ್ಳುತ್ತದೆ.

ಒಟ್ಟಾರೆಯಾಗಿ ಸುಧಾರಣಾವಾದಿ, ವಾಸ್ತವಿಕ ಮಾರ್ಗದ ಭೈರಪ್ಪನವರ ಎಲ್ಲಾ ಕಾದಂಬರಿಗಳಲ್ಲಿಯೂ ವೈಚಾರಿಕ ಹೊರರಚನೆ ಕ್ರಾಂತಿಕಾರಕವಾಗಿದ್ದರೂ, ವೈದಿಕ ಚಿಂತನೆಯಿಂದ ರೂಪಿಸಲ್ಪಟ್ಟ ಒಳರಚನೆ ಸಂಪೂರ್ಣವಾಗಿ ಪರಂಪರಾಗತವಾಗುತ್ತದೆ. ಯಾವ ಕೃತಿಯ ವಸ್ತು ಸುಧಾರಣಾವಾದಿಯಾಗಿರುವುದಿಲ್ಲವೋ ಅಲ್ಲಿ ಕೃತಿಗಳ ಒಳ-ಹೊರ ರಚನೆಗಳು ಪರಸ್ಪರ ಪೂರಕವಾಗುತ್ತವೆ.('ಗೃಹಭಂಗ', 'ಅಂಚು', 'ಪರ್ವ' ಇತ್ಯಾದಿ ಕೃತಿಗಳು).

ಸಿ.ಎನ್.ರಾಮಚಂದ್ರನ್ ಅಭಿಪ್ರಾಯಪಡುವಂತೆ-ಇಂದಿನ ಭಾರತೀಯ (ವಿಶೇಷವಾಗಿ ಹಿಂದೂ) ಒಂದೇ ಕಾಲಕ್ಕೆ ಹನ್ನೆರಡನೆಯ ಶತಮಾನದಲ್ಲಿಯೂ ಮತ್ತು

ಇಪ್ಪತ್ತೊಂದನೆಯ ಶತಮಾನದಲ್ಲಿಯೂ ಬದುಕಲು ಆಶಿಸುತ್ತಾನೆ. ವಸಾಹತೀಕರಣದಿಂದಾಗಿ ಅವನ ವೈಚಾರಿಕತೆ ಮೇಲ್ಮಟ್ಟದಲ್ಲಿ ಆಧುನಿಕ; ಆದರೆ ಆಳದಲ್ಲಿ ಭಾವನಾತ್ಮಕವಾಗಿ ಅವನಲ್ಲಿ ಭಾರತೀಯ ಪರಂಪರೆಯ ಬಗ್ಗೆ ಅದರ ಸಾಮಾಜಿಕ ವ್ಯವಸ್ಥೆಯ ಬಗ್ಗೆ ಗೌರವವಿದೆ, ಅಭಿಮಾನವಿದೆ. ಅಳಿಸಲಾಗದ ಆಪ್ತತೆಯಿದೆ. ಅಲ್ಲದೆ, ಆಧುನಿಕತೆಯನ್ನು ಒಪ್ಪಿಕೊಂಡರೂ ತನ್ನ ಅನನ್ಯತೆಯನ್ನು ಉಳಿಸಿಕೊಳ್ಳಲು ಇಂದಿನ ಭಾರತೀಯ ಏನು ಮಾಡಲು ಸಿದ್ಧನಿದ್ದಾನೆ. ಆದರೆ ಎಲ್ಲೋ ತನ್ನ ಅನನ್ಯತೆ ಕಳೆದುಹೋಗುತ್ತಿರುವ ತೀವ್ರ ಭೀತಿ ಅವನನ್ನು ಕಾಡುತ್ತದೆ. ಇಂತಹ ಭಾರತೀಯನಿಗೆ ಭೈರಪ್ಪನವರ ಕಾದಂಬರಿಗಳ ಒಳರಚನೆಗಳು ಒಂದು ವಿಧದ ಅಪೂರ್ವ ತೃಪ್ತಿ ಸಮಾಧಾನ ಹಾಗೂ ಆತ್ಮ ವಿಶ್ವಾಸಗಳನ್ನು ನೀಡುತ್ತವೆ.[೧೨]

ಒಂದು ಕಡೆ ಆಧುನಿಕ ವಿಚಾರಕ್ಕೆ ತೆರೆದುಕೊಂಡರೂ ಇನ್ನೊಂದು ಕಡೆ ಸೂಕ್ಷ್ಮವಾಗಿ ಭಾವನಾತ್ಮಕವಾಗಿ ಆದರೆ ಅತ್ಯಂತ ಪರಿಣಾಮಕಾರಿಯಾಗಿ ಹಿಂದೂ ಸಂಸ್ಕೃತಿಯನ್ನು ಹಾಗೂ ಆಚಾರ-ವಿಚಾರಗಳನ್ನು ವೈಭವೀಕರಿಸುವುದು ಭೈರಪ್ಪನವರ ಕಾದಂಬರಿಗಳು. ಆಧುನಿಕ ಸಂಸ್ಕೃತಿಯ ಹುಚ್ಚು ಪ್ರವಾಹದಲ್ಲಿ ಸಂಪೂರ್ಣವಾಗಿ ತೇಲಿ ಹೋಗುತ್ತಿರುವ ಈ ಪ್ರಕ್ಷುಬ್ಧ ಮಾನಸಿಕ ಸ್ಥಿತಿಗೆ ಭೈರಪ್ಪನವರ ಕಾದಂಬರಿಗಳು ನಮಗೆ ಆತ್ಮೀಯವಾಗುತ್ತವೆ. ಆದ್ದರಿಂದಲೇ ಭೈರಪ್ಪನವರ ಕಾದಂಬರಿಗಳು ಎಲ್ಲಾ ವರ್ಗದ ಓದುಗರನ್ನು ಆಕರ್ಷಿಸುವ ಶಕ್ತಿಯನ್ನು ಪಡೆದುಕೊಂಡು ಪ್ರಸ್ತುತ ಜಗತ್ತಿನಲ್ಲಿ ಅತ್ಯಂತ ಜನಪ್ರಿಯತೆಯನ್ನು ಪಡೆದುಕೊಂಡಿವೆ.

---

[೧೨] 'ಎಸ್.ಎಲ್.ಭೈರಪ್ಪ ಅವರ ಕೃತಿಗಳ ವಿಮರ್ಶೆ'. ಸಂ.ಸುಮತೀಂದ್ರ ನಾಡಿಗ ಪುಟ ೨೦೧.

## ಅಧ್ಯಾಯ–೩

# ಕನ್ನಡ ಕಾದಂಬರಿ ಕವಲುದಾರಿಯಲ್ಲಿ ಭೈರಪ್ಪನವರ ಕೊಡುಗೆ.

## ಅಧ್ಯಾಯ ೩

## ಕನ್ನಡ ಕಾದಂಬರಿ ಕವಲು ದಾರಿಯಲ್ಲಿ ಭೈರಪ್ಪನವರ ಕೊಡುಗೆ

ಗಳಗನಾಥರಿಂದ ಆರಂಭಗೊಂಡ ಕನ್ನಡ ಕಾದಂಬರಿ ಪರಂಪರೆಯು ಅವರ ನಂತರ ನವೋದಯ, ಪ್ರಗತಿಶೀಲ, ನವ್ಯ ಇತ್ಯಾದಿ ಗುಂಪುಗಳಲ್ಲಿ ಶಾಖೋಪಶಾಖೆಗಳಾಗಿ ಚಿಗುರೊಡೆಯಿತು. ಇದರಲ್ಲಿ ನವ್ಯ ಸಾಹಿತ್ಯವನ್ನುಳಿದು ಇತರ ಎಲ್ಲಾ ಗುಂಪುಗಳು ಸಂಪ್ರದಾಯಬದ್ಧವಾದ ನಿರೂಪಣಾ ವಿಧಾನದಲ್ಲಿ ಕಾದಂಬರಿಯನ್ನು ರಚಿಸಿದವು. ಈ ಕಾಲಘಟ್ಟದಲ್ಲಿ ಶ್ರೀರಂಗ, ಚದುರಂಗ, ವಿನಾಯಕ, ಡಾ॥ ಶಂಕರಮೊಕಾಶಿ ಪುಣೇಕರ, ಕುವೆಂಪು, ಅನಂತಮೂರ್ತಿ, ರಾವ್ ಬಹದ್ದೂರ ಮುಂತಾದವರು ಪ್ರಮುಖವಾದ ಕಾದಂಬರಿಗಳನ್ನು ರಚಿಸಿದರು. ಆದರೆ ಈ ಎಲ್ಲ ಲೇಖಕರಿಗೆ ಜೀವನವನ್ನು ಕಾದಂಬರಿಯ ಕಣ್ಣಿನಿಂದಲೇ ನೋಡುವುದಾಗಲಿ, ಅಥವಾ ತಮ್ಮನ್ನು ಅರ್ಥೈಸಿಕೊಳ್ಳುವುದಕ್ಕೆ ಕಾದಂಬರಿಯೊಂದೇ ವಾಹಕವಾಗುವುದಾಗಲಿ ಆಗಿರಲಿಲ್ಲ. ಇವರಲ್ಲಿ ಹೆಚ್ಚಿನವರು ಸಾಹಿತ್ಯದ ಇತರ ಪ್ರಕಾರಗಳಲ್ಲಿಯೂ ತಮ್ಮ ಪ್ರತಿಭೆಯನ್ನು ಮೆರೆದವರು. ಆದ್ದರಿಂದ ಅವರ ಕಾದಂಬರಿಗಳೆಲ್ಲ ಕೇವಲ ಉತ್ಕಟಕ್ಷಣಗಳ ಪುಳಕಗಳಾಗಿ ಹೊರಹೊಮ್ಮಿವೆ.

ಕನ್ನಡ ಕಾದಂಬರಿಯ ಈ ಹಿನ್ನೆಲೆಯಲ್ಲಿ ಭೈರಪ್ಪನವರ ಸಾಧನೆಯನ್ನು ವೀಕ್ಷಿಸಿದಾಗ, ತಮ್ಮ ಅನಿಸಿಕೆಗಳಿಗೆ ಹಾಗೂ ವೈಚಾರಿಕತೆಗೆ ಕಾದಂಬರಿಯೊಂದನ್ನೇ ಯಶಸ್ವಿಯಾಗಿ ವಾಹಕವನ್ನಾಗಿ ಮಾಡಿಕೊಂಡು, ಸಮಾಜದ ಎಲ್ಲಾ ಸ್ತರಗಳ ಜನರಿಗೂ ತಾವು ಹೇಳಬೇಕಾಗಿರುವುದನ್ನು ತಲುಪುವಂತೆ ಮಾಡುವುದರಲ್ಲಿ ಕಾರಂತ ಹಾಗೂ ಭೈರಪ್ಪ ಉಳಿದವರಿಗಿಂತ ಭಿನ್ನರಾಗುತ್ತಾರೆ.

ಸಂಕ್ರಮಣಕಾಲದಲ್ಲಿ ಸಾಗುತ್ತಿರುವ ನಮ್ಮ ಭಾರತದ ಎಲ್ಲ ಸಮಸ್ಯೆಗಳನ್ನು ಹಿಡಿಯಬಲ್ಲ ಸಾಮರ್ಥ್ಯ ಇಂದು ಕಾದಂಬರಿ ಪ್ರಕಾರವೊಂದಕ್ಕೆ ಇರುವಂತೆ ತೋರುತ್ತದೆ. ಕನ್ನಡ ಕಾದಂಬರಿ ಕ್ಷೇತ್ರದಲ್ಲಿ 'ಸತ್ವಶಾಲಿ ಪರಂಪರೆಯನ್ನು ರೂಪಿಸಿದ ಅ.ನ.ಕೃ. ಶಿವರಾಮ ಕಾರಂತ ಮತ್ತು ಅವರನ್ನು ಅನುಸರಿಸಿದವರ, ಒಂದು ಕಾಲಕ್ಕೆ ಸತ್ವಶಾಲಿಯಾಗಿದ್ದ ಆದರೆ ಈಗ ಜಿಡ್ಡುಗಟ್ಟಿ ಹೋದ ಕಾದಂಬರಿ ಸಂಪ್ರದಾಯದಿಂದಾಗಿ ಹೊಸ ಕಾದಂಬರಿಯ ಉಗಮವಾಯಿತು. ಅ.ನ.ಕೃ ಮತ್ತು ಶಿವರಾಮ ಕಾರಂತರಂಥವರು ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಅತ್ಯಂತ ಪ್ರಭಾವ ಬೀರಿದ ಕಾದಂಬರಿಕಾರರು. ಇವರುಗಳು ಒಂದು ಪರಂಪರೆಯನ್ನೇ ಸ್ಥಾಪಿಸಿದವರು. ತೀರಾ ಇತ್ತೀಚಿನ ಕಾದಂಬರಿಕಾರರಾದ ಕಾರಂತರು ನಮ್ಮಲ್ಲಿ ಸತ್ವಶಾಲಿಯಾದ ಕಾದಂಬರಿ ಸಂಪ್ರದಾಯವನ್ನು, ವೈಚಾರಿಕ ಪರಂಪರೆಯನ್ನು ಸ್ಥಾಪಿಸಿದರೂ ಕೂಡ, ಅವರ ಕಾದಂಬರಿ ಸಂಪ್ರದಾಯದ ಸತ್ವವು ಈಗ ತೀರಿ ಹೋಗಿ ಆ ಮಾರ್ಗವು ಜಿಡ್ಡುಗಟ್ಟಿದೆ. ಇದರಿಂದಾಗಿ ಕನ್ನಡದಲ್ಲಿ ಹೊಸ ಕಾದಂಬರಿಯ ಉಗಮ ತೀರಾ ಅಗತ್ಯವಾಯಿತು. ಕಾಲಕಾಲಕ್ಕೆ ಸಾಮಾಜಿಕ ಸಂದರ್ಭವು ಬದಲಾದಂತೆ ಅದಕ್ಕನುಗುಣವಾಗಿ ಸಾಹಿತ್ಯದ ಸ್ವರೂಪವೂ ಬದಲಾಗುವುದು ಹೊಸತೇನಲ್ಲ. ಅಂದರೆ ಬದಲಾದ ಸಾಮಾಜಿಕ ಸಂದರ್ಭದಿಂದಾಗಿ ಕನ್ನಡದಲ್ಲಿ ಹೊಸ ಕಾದಂಬರಿಯ ಉಗಮ ಅನಿವಾರ್ಯವಾಯಿತು. ಶ್ರೀರಂಗ, ಗಿರೀಶ್ ಕಾರ್ನಾಡ್ ಮತ್ತು ಎಸ್.ಎಲ್.ಭೈರಪ್ಪ ಇವರುಗಳ ಸಾಹಿತ್ಯ ಸೃಷ್ಟಿ ಈ ಕೆಲಸವನ್ನು ಅತ್ಯಂತ ಸಮರ್ಥವಾಗಿ, ಹೆಚ್ಚು ವಸ್ತುನಿಷ್ಠವಾದ ಹಾಗೂ ಜವಾಬ್ದಾರಿಯುತವಾದ ರೀತಿಯಲ್ಲಿ ಹಾಗೂ ಹೆಚ್ಚು ಸ್ವತಂತ್ರವಾದ ದೃಷ್ಟಿಕೋನದಿಂದ ಮಾಡುತ್ತಾ ಬಂದಿದೆ.

ಈ ರೀತಿಯಲ್ಲಿ ಉಗಮಗೊಂಡಿರುವ ಕನ್ನಡ ಕಾದಂಬರಿ ಪ್ರಪಂಚದಲ್ಲಿ ಎಸ್.ಎಲ್ ಭೈರಪ್ಪನವರ ಕಾದಂಬರಿಗಳ ಸ್ಥಾನಮಾನವನ್ನು ವಿವೇಚಿಸುವುದಾದರೆ- ಇವರು ಇದುವರೆಗೆ ೨೦ ಕಾದಂಬರಿಗಳನ್ನು ಕನ್ನಡ ಕಾದಂಬರಿ ಪ್ರಪಂಚಕ್ಕೆ

ನೀಡಿರುತ್ತಾರೆ. ಇವರ ಹೆಚ್ಚಿನ ಕೃತಿಗಳು ಸಮಕಾಲೀನ ಬದುಕಿನ ಮತ್ತು ಸಂವೇದನೆಯ ಕರೆಗೆ ಸಾಕಷ್ಟು ಚೆನ್ನಾಗಿ ಓಗೊಡುತ್ತವೆ. ಇದಕ್ಕೆ ನಿದರ್ಶನವಾಗಿ ಇವರು ರಚಿಸಿರುವ 'ಧರ್ಮಶ್ರೀ', 'ವಂಶವೃಕ್ಷ', 'ದೂರಸರಿದರು', 'ಜಲಪಾತ', 'ಮತದಾನ' ಮತ್ತು 'ದಾಟು'- ಈ ಮುಂತಾದ ಕಾದಂಬರಿಗಳೇ ನಿದರ್ಶನವಾಗಿದೆ. ಇವರ 'ಮತದಾನ' ಮತ್ತು 'ದಾಟು'ವಿನಲ್ಲಿ ಚಿತ್ರಿತವಾದಷ್ಟು ಸಮಕಾಲೀನವಾದ ವಸ್ತುನಿಷ್ಠವಾದ, ವಿಭಿನ್ನ ದೃಷ್ಟಿಕೋನಗಳಿಂದ ಕೂಡಿದ ಸಂಕೀರ್ಣವಾದ ಹಾಗೂ ಪ್ರಾದೇಶಿಕವಾಗಿ ನೈಜವಾದ ಸಾಮಾಜಿಕ ಮತ್ತು ರಾಜಕೀಯ ಜೀವನವು ನಮ್ಮ ಯಾವ ನವ್ಯ ಕಾದಂಬರಿಯಲ್ಲಿಯೂ ಚಿತ್ರಿತವಾಗಿಲ್ಲವೆಂದೇ ಹೇಳಬಹುದು.

ಎಸ್.ಎಲ್.ಭೈರಪ್ಪನವರು ನವ್ಯ ಸಾಹಿತಿಯಲ್ಲ. ಆದ್ದರಿಂದ ಸಾಮಾನ್ಯವಾಗಿ, ನವ್ಯ ಸಾಹಿತಿಗಳಲ್ಲಿ ನಮಗೆ ಕಂಡು ಬರುವಂಥ ಅನೇಕಾನೇಕ ಹೊಸ ತಿರುವುಗಳಾಗಲಿ, ಹೊಸ ಆಯಾಮಗಳಾಗಲಿ ಅವರ ಕೃತಿಗಳಲ್ಲಿ ಕಂಡು ಬರುವುದಿಲ್ಲ. ಆದರೆ ಖ್ಯಾತ ವಿಮರ್ಶಕರಾದ ಶ್ರೀ ರಂಗನಾಥರಾಯರು "ಭೈರಪ್ಪನವರಂಥ ಒಬ್ಬಿಬ್ಬರು ಕಾದಂಬರಿಕಾರರು ತಾವು ಪ್ರತಿಪಾದಿಸುವ ಮೌಲ್ಯಗಳ ಆಧಾರಕರು, ಆದ್ದರಿಂದ ಅವರುಗಳಿಗೆ ಹೊಸ ಮೌಲ್ಯಗಳ ಅನ್ವೇಷಣೆಯಾಗಲಿ ಅಗತ್ಯವಾಗಲಿ ಕಂಡುಬರಲಿಲ್ಲ. ಹೊಸ ತಲೆಮಾರಿನ ಒಳಗುದಿ, ಸಂವೇದನೆಗಳು ಇವರಿಗೆ ತಾಕಲಿಲ್ಲ ಎಂದು ಅಭಿಪ್ರಾಯ ಪಡುತ್ತಾರೆ"[೧]. ಅಂದರೆ ಭೈರಪ್ಪನವರ ಕಾದಂಬರಿಗಳಲ್ಲಿ (ನಾಯಕ-ನಾಯಕಿಯರು) ಸಾಮಾನ್ಯವಾಗಿ ಪ್ರತಿಪಾದಿಸುವ ಸಾಂಪ್ರದಾಯಿಕ ಮೌಲ್ಯಗಳ ಆರಾಧಕರಂತೆ ಕಂಡು ಬರುತ್ತಾರೆ ಎಂಬುದು. ಆದರೆ ಭೈರಪ್ಪನವರು ರಚಿಸಿರುವ 'ಧರ್ಮಶ್ರೀ' ಮತ್ತು 'ವಂಶವೃಕ್ಷ'ಗಳಲ್ಲಿ ಸೇರಿದಂತೆ ಇತರ ಹೆಚ್ಚಿನ ಕೃತಿಗಳಲ್ಲಿ ಸಾಂಪ್ರದಾಯಿಕ ಮೌಲ್ಯಗಳನ್ನು

[೧] 'ಹೊಸ ತಿರುವು' ಪುಟ ೧೪-೧೯. ಶ್ರೀ ರಂಗನಾಥರಾಯರು.

ಆಧುನಿಕ ವೈಚಾರಿಕ ಮತ್ತು ವೈಜ್ಞಾನಿಕ ವಿವೇಚನೆಯ ನಿಕಷಕ್ಕೆ ಒಡ್ಡುವುದನ್ನು ಕಾಣಬಹುದು.

ವಿಮರ್ಶಕ ಗೋವಿಂದ ಜಾಲಿಹಾಳ ಅವರ ಅಭಿಪ್ರಾಯದಂತೆ- "ಭೈರಪ್ಪನವರ ಕಾದಂಬರಿಗಳಲ್ಲಿ ನನ್ನಂಥ ನವ್ಯ ಅನವ್ಯ ವಿಮರ್ಶಕನಿಗೆ ಕಂಡುಬರುವ ಹೊಸ ತಿರುವುಗಳು ಅಥವಾ ಹೊಸ ಆಯಾಮಗಳು ಕೇವಲ ಒಂದೋ ಎರಡೋ ಮಾತ್ರ. ಆದರೆ ಅವು ಮಾತ್ರ ನಮ್ಮ ಸಾಹಿತ್ಯದ ಸದ್ಯದ ಸಂದರ್ಭದಲ್ಲಿ ಆಂಶಿಕವಾಗಿಯೇ ಆಗಿರಲಿ ನಿಜವಾಗಿಯೂ ಹೊಸ ಲಕ್ಷಣಗಳಾಗಿವೆ, ಮಹತ್ವದ ಲಕ್ಷಣಗಳಾಗಿವೆ"[1].

"ಬೆಳೆಯುತ್ತಿರುವ ಮತ್ತು ಬದಲಾಗುತ್ತಿರುವ ಇಂದಿನ ಕನ್ನಡ ಕಾದಂಬರಿ ಕ್ಷೇತ್ರಕ್ಕೆ ಎಸ್.ಎಲ್.ಭೈರಪ್ಪ ಅವರ ಕೊಡುಗೆ ಎದ್ದು ಕಾಣುವಂಥ ವೈಶಿಷ್ಟ್ಯವನ್ನು ಹೊಂದಿದೆ. ಸಂಕೀರ್ಣವಾದ ಜೀವನದ ಗಾಢ ಅನುಭವ, ಮನೋವಿಜ್ಞಾನದ ಆಳವಾದ ಅರಿವು, ಕನ್ನಡ ನುಡಿಯ ದಟ್ಟ ಪರಿಚಯ ಇವುಗಳಿಂದ ಅವರ ಕಾದಂಬರಿಗಳು ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ಆಯಾಮವನ್ನು ತಂದುಕೊಡುತ್ತದೆ"[2].

ಭೈರಪ್ಪನವರ ಕಾದಂಬರಿಗಳಲ್ಲಿ ಕಾಣುವ ಮೊದಲನೆಯ ಮತ್ತು ಮಹತ್ವದ ಹೊಸ ಲಕ್ಷಣವೆಂದರೆ ವೈಚಾರಿಕತೆ. ಕಾದಂಬರಿ ಕ್ಷೇತ್ರದಲ್ಲಿ ವೈಚಾರಿಕತೆಯನ್ನು ದೇವುಡು, ಕುವೆಂಪು, ಕಾರಂತ, ಶ್ರೀರಂಗ, ಗೋಕಾಕ್, ಅನಂತಮೂರ್ತಿ ಮುಂತಾದವರು ಬಳಸಿರುತ್ತಾರೆ. ಆದರೆ ಭೈರಪ್ಪನವರು ತಮ್ಮ ಕೃತಿಗಳಲ್ಲಿ ವೈಚಾರಿಕತೆಯನ್ನು ವ್ಯಾಪಕವಾಗಿ, ಗಾಢವಾಗಿ, ಹಾಗೂ ವೈವಿಧ್ಯಮಯವಾಗಿ ಬಳಸಿದಷ್ಟು ನಮ್ಮ ಯಾವ ಕಾದಂಬರಿಕಾರರು ಬಳಸಲಿಲ್ಲವೆಂದು ಹೇಳಬಹುದು. ಭೈರಪ್ಪನವರ ಸ್ವತಂತ್ರವಾದ ಚಿಂತನಾಶೀಲತೆ, ತತ್ವಶಾಸ್ತ್ರಾಧ್ಯಯನ, ಗಾಢವಾದ ಜೀವನದ ಅನುಭವ

---

[1] 'ಸಹಸ್ಪಂದನ'. ಪುಟ ೯೯. ಲೇ. ಡಾ॥ ರಂ.ಶ್ರೀ.ಮುಗಳಿ. ಸಂ. ಮಾಧವ ಕುಲಕರ್ಣಿ ಮತ್ತು ಗೋಪಿಂದರಾಜ. ೧೯೭೮.

[2] 'ಭೈರಪ್ಪಾಭಿನಂದನಾ' ಪುಟ ೪. ಲೇ. ಡಾ॥ ರಂ.ಶ್ರೀ.ಮುಗಳಿ. ಕೊಂಡಜ್ಜಿ ಕೆ. ವೆಂಕಟೇಶ. ೧೯೯೩.

ಇವುಗಳೆಲ್ಲ ಅವರ ಕೃತಿಗಳಲ್ಲಿನ ವೈಚಾರಿಕತೆಗೆ ಒಂದು ವಿಶೇಷವಾದ ಮೆರುಗನ್ನು ತಂದುಕೊಟ್ಟಿದೆ ಎಂದು ಹೇಳಬಹುದು. ಕನ್ನಡ ಸಾಹಿತ್ಯದ ಮಟ್ಟಿಗೆ ಹೇಳುವುದಾದರೆ ಭೈರಪ್ಪನವರ ಕಾದಂಬರಿಗಳಲ್ಲಿ ಮಾತ್ರ ತಾತ್ವಿಕ ಹಾಗೂ ವೈಜ್ಞಾನಿಕ ವಿಚಾರಗಳ ತಾಕಲಾಟ ಮತ್ತು ಅವುಗಳ ಸಂಘರ್ಷವನ್ನು ಕಾಣಬಹುದು.

ಎಸ್.ಎಲ್.ಭೈರಪ್ಪನವರು ಜೀವಂತವಾದ ಪ್ರತಿಕ್ರಿಯೆಯುಳ್ಳ ವ್ಯಕ್ತಿತ್ವವನ್ನು ಹೊಂದಿದವರು. ಆದ್ದರಿಂದ ಇವರು ತಮ್ಮ ಕಾದಂಬರಿಗಳಲ್ಲಿ ಹಳೆಯದರಿಂದ ಹೊಸದಕ್ಕೆ ಬದಲಾವಣೆ ಹೊಂದುವಾಗ ಇರುವ ಸಂಕಟ, ಮಾನಸಿಕ ತುಮುಲ, ಹೊಯ್ದಾಟ ಇತ್ಯಾದಿಗಳನ್ನು ವಸ್ತುಗಳನ್ನಾಗಿ ಆಯ್ಕೆಮಾಡಿಕೊಂಡರು.

ಎಸ್.ಎಲ್‌ಭೈರಪ್ಪನವರ ಮೊದಲ ಕಾದಂಬರಿಯಾದ 'ಧರ್ಮಶ್ರೀ' ಪ್ರೀತಿಯ ಕಟ್ಟುಪಾಡಿಗೆ ಒಳಗಾಗಿ ಕ್ರಿಶ್ಚಿಯನ್ನಾಗಿ ಮತಾಂತರ ಹೊಂದುವ ಯುವಕನೊಬ್ಬನ ದ್ವಂದ್ವವನ್ನು ಚಿತ್ರಿಸುತ್ತದೆ. ನಂತರ ಬಂದ 'ದೂರ ಸರಿದರು' ಭೌದ್ಧಿಕ ಅಸಮಾನತೆಯಿಂದ ಬರುವ ಸ್ಥಿತಿಗತಿಗಳನ್ನು ವಿವರಿಸುತ್ತದೆ. ಭೈರಪ್ಪನವರ ಬಹು ಮಹತ್ವದ ಕೃತಿ 'ವಂಶವೃಕ್ಷ' ಈ ಕಾದಂಬರಿ ಬದಲಾವಣೆಯ ಕಾಲದಲ್ಲಿ ಎದುರಿಸಬೇಕಾಗುವ ಎಲ್ಲಾ ಸಮಸ್ಯೆಗಳಿಗೆ ಕನ್ನಡಿ ಹಿಡಿದಿರುತ್ತದೆ. ಸನಾತನ ಧರ್ಮ ಮತ್ತು ಆಧುನಿಕತೆ- ಇವೆರಡೂ ಧೋರಣೆಗಳು ನಂಬಿಕೆಗೆ ಅರ್ಹವೆನಿಸುವಂತೆ ಪಾತ್ರಗಳ ಮೂಲಕ, ಅವುಗಳ ದುರಂತಗಳ ಮೂಲಕ ಚಿತ್ರಿಸಿರುವ ಭೈರಪ್ಪನವರು ಕನ್ನಡ ಸಾಹಿತ್ಯಕ್ಕೆ ಈ ಕಾದಂಬರಿಯ ಮೂಲಕ ಅರ್ಥಪೂರ್ಣವಾದ ಕೃತಿಯನ್ನು ನೀಡಿರುತ್ತಾರೆ. ಭೈರಪ್ಪನವರ ಮುಂದಿನ ಕಾದಂಬರಿ 'ಜಲಪಾತ'. ಈ ಕಾದಂಬರಿಯು ದಾಂಪತ್ಯ ಜೀವನದ ಸಾಮರಸ್ಯದ ಕಲ್ಪನೆಯನ್ನು ಚಿತ್ರಿಸುವುದರ ಜೊತೆಗೆ, ಅತಿ ವೈಜ್ಞಾನಿಕ ದೃಷ್ಟಿಯು ದಾಂಪತ್ಯವನ್ನು ದುರಂತದಲ್ಲಿ ಕೊನೆಗೊಳ್ಳಿಸುವುದನ್ನು ಚಿತ್ರಿಸುತ್ತದೆ.

ಭೈರಪ್ಪನವರ ಮೊದಲ ಹಂತದ ಕಾದಂಬರಿಗಳಲ್ಲಿ ಭಿನ್ನವಾಗಿ ಮೂಡಿ ಬಂದ ಕಾದಂಬರಿ 'ನಾಯಿನೆರಳು'. ಪುನರ್ಜನ್ಮದ ಕಥೆ ಇಲ್ಲಿದೆ. ನಂಬಿಕೆ ಮತ್ತು ವೈಜ್ಞಾನಿಕ ದೃಷ್ಟಿಗಳ ವಸ್ತು ಈ ಕಾದಂಬರಿಯಲ್ಲಿ ಮೂಡಿ ಬಂದಿರುವುದಲ್ಲದೆ ಭೈರಪ್ಪನವರ ಇತರ ಕಾದಂಬರಿಗಳ ವಸ್ತುಗಳೊಂದಿಗೆ ಜೋಡಣೆಯನ್ನು ಪಡೆದಿರುತ್ತದೆ.

ಭೈರಪ್ಪನವರಿಗೆ ಹಳ್ಳಿಗಳ ಬಗ್ಗೆ ಇರುವ ಪರಿಜ್ಞಾನವನ್ನು ಅವರ 'ತಬ್ಬಲಿಯು ನೀನಾದೆ ಮಗನೆ' ಕಾದಂಬರಿಯಲ್ಲಿ ಕಾಣಬಹುದು. ಈ ಕಾದಂಬರಿಯ ವಸ್ತು ಮೇಲುನೋಟಕ್ಕೆ ಗೋವುಗಳಿಗೆ ಸಂಬಂಧಿಸಿದ ಕತೆಯಾಗಿ ಕಂಡು ಬಂದರೂ ಕೂಡ, ಕಾದಂಬರಿಯ ಬೆಳವಣಿಗೆಯ ಹಂತದಲ್ಲಿ ಇಡೀ ನಮ್ಮ ದೇಶದ ಹಳ್ಳಿಯ ಸಂಕೀರ್ಣತೆಯನ್ನು ತಳಿಕೆ ಹಾಕುತ್ತಾರೆ. ಹೊಸದನ್ನು ಬಿಡಲಾರದೆ ಹಳೆಯ ಬಂಧನಗಳನ್ನು ಕಿತ್ತೊಗೆಯಲಾರದೆ ತೊಳಲಾಡುವ ಕಾಳಿಂಗ; ಸ್ವಾತಿಕನಾಗಿಯೂ ಹೊಸದನ್ನು ತಿಳಿಯಬೇಕೆನ್ನುವ ವೆಂಕಟರಮಣ; ಇವರೆಲ್ಲ ಕಾದಂಬರಿಯಲ್ಲಿ ಶಕ್ತಿಯುತವಾಗಿ ಮೂಡಿ ಬಂದಿರುವುದರಿಂದ ಭೈರಪ್ಪನವರ ಮೂಲ ಸಮಸ್ಯೆ ಇಲ್ಲಿಯ ಹಳ್ಳಿಯ ವಾತಾವರಣದಲ್ಲಿ ಹೊಸರೂಪವನ್ನು ಪಡೆಯುತ್ತದೆ. ಅಂದರೆ ಆಧುನಿಕತೆ ಮತ್ತು ಸನಾತನದ ಸಂಘರ್ಷವನ್ನು ಈ ಕಾದಂಬರಿಯಲ್ಲಿ ಪ್ರಧಾನವಾಗಿ ಕಾಣಬಹುದು.

ಇವರ ಕಾದಂಬರಿಗಳೊಳಗಿನ ಒಂದು ಮಹತ್ವದ ತಿರುವನ್ನು ಪಡೆದ ಕಾದಂಬರಿ 'ಮತದಾನ'. ಪ್ರಪ್ರಥಮವಾಗಿ ರಾಜಕೀಯ ವಸ್ತುವು ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತದೆ. ಬುದ್ಧಿಜೀವಿಯೊಬ್ಬನ ಕಲ್ಪನೆಯನ್ನು ಮೀರಿದ ಕಪಟನಾಟಕಗಳು ಇಂದಿನ ರಾಜಕೀಯದಲ್ಲಿ ನಡೆಯುತ್ತವೆ ಎಂಬುದನ್ನು 'ಮತದಾನ' ಸಮರ್ಪಕವಾಗಿ ತೋರಿಸುತ್ತದೆ. ಈ ಹಂತದವರೆಗೆ ಬಂದ ಭೈರಪ್ಪನವರ ಎಲ್ಲ ಕಾದಂಬರಿಗಳು ಸಾತ್ವಿಕತೆಯನ್ನು ಸ್ವೀಕರಿಸುವ, ವೈಭವಗೊಳಿಸುವ ಮತ್ತು ವೈಚಾರಿಕವಾಗಿ ಸಮಸ್ಯೆಯನ್ನು

ನೋಡುವುದರಲ್ಲಿಯೇ ತಲ್ಲೀನವಾಗುತ್ತದೆ. ಆದರೆ ಇವರ 'ಗೃಹಭಂಗ'ವು ಈ ಹಂತದ ನಂತರ ಕೆಲವೊಂದು ಸವಾಲುಗಳನ್ನು ಎಸೆಯುತ್ತವೆ.

'ಗೃಹಭಂಗ' ಕಾದಂಬರಿಯು ಜೀವನಕ್ಕೆ ಒಂದು 'ಶಿಲ್ಪ'ವನ್ನು ರಚಿಸುವುದರತ್ತ ಗಮನ ಕೊಡುವುದಕ್ಕಿಂತ ಜೀವನದ ಒಂದು ತುಣುಕನ್ನು ವಾಸ್ತವಿಕ ಮಟ್ಟದಲ್ಲಿ ಚಿತ್ರಿಸುವುದಕ್ಕೆ ಹೆಚ್ಚು ಮಹತ್ವಕೊಟ್ಟಿದೆ.

ಭೈರಪ್ಪನವರ 'ಗ್ರಹಣ' ಹಾಗೂ 'ನಿರಾಕರಣ' 'ವಸ್ತು' ಹಾಗೂ 'ಬಂಧ'ದ ದೃಷ್ಟಿಯಿಂದ ಕನ್ನಡ ಸಾಹಿತ್ಯದ ಮೇಲೆ ಅಷ್ಟೇನೂ ಪರಿಣಾಮ ಬೀರಲಿಲ್ಲವೆಂದು ಹೇಳಬಹುದು.

ಕನ್ನಡ ವಿಮರ್ಶಾಲೋಕದಿಂದ ಸಾಕಷ್ಟು ಪ್ರತಿಕ್ರಿಯೆಯನ್ನು ಪಡೆದಿರುವ ಭೈರಪ್ಪನವರ ಇನ್ನೊಂದು ಕಾದಂಬರಿ 'ದಾಟು'. ಈ ಕಾದಂಬರಿಯು ಪ್ರಸ್ತುತ ಸಮಾಜದಲ್ಲಿನ ಜಾತಿ, ಮತ, ವರ್ಗ ಇದಕ್ಕೆ ಸಂಬಂಧಪಟ್ಟಂತಹ ಕ್ರಾಂತಿಗಳನ್ನು ಚಿತ್ರಿಸುವುದರ ಜೊತೆಗೆ ಒಂದು ಸಮಸ್ಯೆಯನ್ನು ಬೇರೆ ಬೇರೆ ದೃಷ್ಟಿಯಿಂದ ನೋಡುವ ಪ್ರಯತ್ನವನ್ನು ಈ ಕಾದಂಬರಿಯಲ್ಲಿ ಮಾಡಿರುತ್ತಾರೆ. ಸಮಕಾಲೀನವಾದ ಸಮಸ್ಯೆಯ ನಿರೂಪಣೆಯಲ್ಲಿ ಭೈರಪ್ಪನವರ ತಾಜಾವಾದ ಅನುಭವ, ಸೂಕ್ಷ್ಮಮತಿ ಈ ಕಾದಂಬರಿಯಲ್ಲಿ ಸಾಕಷ್ಟು ಕೆಲಸ ಮಾಡಿರುತ್ತದೆ. ಇದರಿಂದಾಗಿ ಕನ್ನಡ ಕಾದಂಬರಿ ಪ್ರಪಂಚದಲ್ಲಿ ಭೈರಪ್ಪನವರ ಈ ಕಾದಂಬರಿಯು ಸ್ಥಿರವಾದ ಒಂದು ಸ್ಥಾನವನ್ನು ಪಡೆದುಕೊಂಡಿತು.

ನಂತರ ರಚನೆಗೊಂಡಿರುವ 'ಅನ್ವೇಷಣೆ' ಭೈರಪ್ಪನವರ ಇತರ ಕಾದಂಬರಿಗಿಂತ ಭಿನ್ನವಾದ ಸ್ವರೂಪವನ್ನು ಪಡೆದುಕೊಂಡಿದೆ. ಇಲ್ಲಿ ಲೇಖಕರು ನಿರೂಪಣಾ ತಂತ್ರವನ್ನು ಬಳಕೆ ಮಾಡಿರುತ್ತಾರೆ. ಅಂತರಂಗ ನಿರೀಕ್ಷಣೆಯನ್ನು

ಪ್ರಮುಖವಾದ ಸ್ವರೂಪವನ್ನಾಗಿರಿಸಿಕೊಂಡ ಈ ಕಾದಂಬರಿಯ ಮೂಲಕ, ಮಾನವ ಬದುಕಿನ ಬಗೆಯನ್ನು ತಿಳಿಯುವ ವೈಚಾರಿಕ ವಸ್ತುವನ್ನು ಕಾದಂಬರಿಕಾರರು ಇಲ್ಲಿ ಪ್ರಯೋಗಮಾಡಿರುತ್ತಾರೆ.

ಭೈರಪ್ಪನವರ ದೃಷ್ಟಿಕೋನ ವೈವಿಧ್ಯಮಯ ಎನ್ನುವುದಕ್ಕೆ ಅವರ ಕಾದಂಬರಿಗಳ ವೈವಿಧ್ಯಮಯ ವಸ್ತುಸ್ವರೂಪವೇ ಸಾಕ್ಷಿಯಾಗಿದೆ. ಸಮಕಾಲೀನ ವಸ್ತುವನ್ನು ಹೇಗೆ ಸರಾಗವಾಗಿ ಮೂಡಿಸಬಲ್ಲರೊ ಹಾಗೆಯೇ ಹಳೆಯ ಮೌಲ್ಯಗಳನ್ನು ಆಧುನಿಕ ಕಾಲದಲ್ಲಿ ತೂಗಿ ನೋಡಬಲ್ಲರು. ಪೌರಾಣಿಕ ವಸ್ತುವನ್ನು ಆಧುನಿಕ ಪರಿಸರಕ್ಕೆ ಹೊಂದುವಂತೆ ರಚಿಸಿದ ಪ್ರಯೋಗಶೀಲತೆ ಅವರ 'ಪರ್ವ' ಕಾದಂಬರಿಯಲ್ಲಿ ಕಂಡುಬರುತ್ತದೆ. ಇದೊಂದು ನವೀನ ಪ್ರಯೋಗ.

ಸಾವನ್ನು ಕುರಿತು ಜಿಜ್ಞಾಸೆಯ ಹಿನ್ನೆಲೆಯಲ್ಲಿಯ ಬದುಕಿನ ವ್ಯಾಪಾರವನ್ನು ಕಾಣಿಸುವ ಪ್ರಯತ್ನ ಭೈರಪ್ಪನವರ 'ನೆಲೆ' ಕಾದಂಬರಿಯಲ್ಲಿದೆ. ಸಾವಿನ ಭಯವನ್ನು ದೂರವಾಗಿರಿಸಿ ಬದುಕಿನ ನೆಲೆಯನ್ನು ಕಾಣಿಸುವ ಪ್ರಯತ್ನವನ್ನು ಭೈರಪ್ಪನವರು ಈ ಕಾದಂಬರಿಯ ಮೂಲಕ ನಡೆಸಿದ್ದಾರೆ.

ಭೈರಪ್ಪನವರು 'ಸಾಕ್ಷಿ' ಕಾದಂಬರಿಯ ಮೂಲಕ ಪುರಾಣ ಮತ್ತು ನಮ್ಮ ಈ ಇಂದ್ರಿಯ ಜಗತ್ತುಗಳನ್ನು ಜೋಡಿಸುವ ಮನುಷ್ಯನ ನೀತಿಯ ಬೇರುಗಳನ್ನು ಶೋಧಿಸುತ್ತಾರೆ. 'ನಿಜವು ನೀತಿಯ ನೆಲೆಯೋ ನೀತಿಯು ನಿಜದ ನೆಲೆಯೋ' ಎಂಬಂಥಹ ಮೂಲಭೂತ ಪ್ರಶ್ನೆಗಳನ್ನು ಈ ಕಾದಂಬರಿಯು ಅರಗಿಸಿಕೊಂಡಿದೆ.

ತನ್ನನ್ನು ಅವುಚಿಕೊಂಡ ಅನ್ಯಾಯಗಳನ್ನು ಎತ್ತಿ ಎಸೆಯುವ ಭಾವಶಕ್ತಿ ಇಲ್ಲದ ಮನಸ್ಸು, ತನ್ನನ್ನು ತಾನೇ ನಾಶಮಾಡಿಕೊಳ್ಳುವ, ತನ್ನನ್ನು ಪ್ರೀತಿಸುವವರ ಮೇಲೆ ಕ್ರೌರ್ಯವನ್ನು ಋುಸೆಯುವ, ವಿಕೃತಿಗೆ ತಿರುಗುವ ವಸ್ತುವನ್ನು ಒಳಗೊಂಡಿರುವ

ಭೈರಪ್ಪನವರ 'ಅಂಚು' ಕಾದಂಬರಿಯು ಕ್ಷುದ್ರ ಹೃದಯ ದೌರ್ಬಲ್ಯಗಳ ನೆಲೆ-ಬೆಲೆಗಳನ್ನು ಅನ್ವೇಷಿಸುವುದು. ಅಲ್ಲದೆ ನಿರ್ಮಲವೂ, ಭರವಸೆಯುಳ್ಳದ್ದೂ ಆದ ಪ್ರೇಮವೇ ಇದಕ್ಕೆ ಚಿಕಿತ್ಸೆಯೆಂಬ ಸತ್ಯವನ್ನು ಮನಗಾಣಿಸುತ್ತದೆ.

ಗಾಂಧೀವಾದ, ಇಂದಿರಾವಾದಗಳ ಸಂಘರ್ಷದ ರಾಜಕೀಯ, ಸಾಮಾಜಿಕ ತಂತುಗಳನ್ನು ಒಳಗೊಂಡು ರಚನೆಗೊಂಡಿರುವ ಭೈರಪ್ಪನವರ ಕಾದಂಬರಿ 'ತಂತು'. ಇದರ ವಸ್ತು ಸ್ವಾತಂತ್ರ್ಯೋತ್ತರ ಭಾರತದ, ಅದರಲ್ಲೂ ಇಂದಿರಾಗಾಂಧಿ ಕಾಲದ ರಾಜಕೀಯ ಸಾಂಸ್ಕೃತಿಕ, ಶೈಕ್ಷಣಿಕ, ಸಂಗೀತ, ಪತ್ರಿಕೋದ್ಯಮ, ಉದ್ಯಮ ಮುಂತಾದ ಸಮಕಾಲೀನ ತಂತುಗಳನ್ನೊಳಗೊಂಡಿದೆ.

ಕಾಲ್ಪನಿಕ ಲೇಪನವನ್ನು ಪಡೆದ ಭೈರಪ್ಪನವರ ಒಂದು ಐತಿಹಾಸಿಕ ಕಾದಂಬರಿ 'ಸಾರ್ಥ'. ಎನೆಯ ಶತಮಾನದ ವಾಣಿಜ್ಯ ಪದ್ಧತಿ, ವೈದ್ದಿಕ ಹಾಗೂ ಬೌದ್ಧ ಧರ್ಮಗಳ ಆಂತರಿಕ ಸಂಘರ್ಷ ಜೊತೆಗೆ ಇಸ್ಲಾಮ್  ಸಂಘರ್ಷದ ಕಥೆಯನ್ನು ಹೇಳುವುದರ ಮೂಲಕ ಭರತ ಖಂಡದ ಐತಿಹಾಸಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಚಿತ್ರಗಳ ಬೆಳಕನ್ನು ನೀಡುತ್ತದೆ.

ಕಲೆ ಮತ್ತು ಕಲಾವಿದರ ಸಂಬಂಧ, ಕಲಾಸೃಷ್ಟಿ ಹಾಗೂ ವಾಸ್ತವ-ಸೃಷ್ಟಿಗಳ ನಡುವಣ ಸೆಣಸಾಟದ ಹಿನ್ನೆಲೆಯಲ್ಲಿ, ಸೌಂದರ್ಯ ಮತ್ತು ನೀತಿಗಳ ಸತ್ಯವನ್ನು ಶೋಧಿಸುವ ಅತ್ಯಂತ ಮಾರ್ಮಿಕ ಸಾಹಿತ್ಯ ಸಿದ್ಧಿಯಾಗಿ ಭೈರಪ್ಪನವರ 'ಮಂದ್ರ' ಕಾದಂಬರಿ ರಚನೆಗೊಂಡಿದೆ.

ಐತಿಹಾಸಿಕ ಸತ್ಯವನ್ನು ತೆರೆದಿಡುವ ಸಲುವಾಗಿ 'ಆವರಣ' ಎನ್ನುವ ಕಾದಂಬರಿಯೊಂದನ್ನು ಎಸ್.ಎಲ್.ಭೈರಪ್ಪನವರು ಇತ್ತೀಚಿನ ಸಮಯದಲ್ಲಿ ರಚಿಸಿದರು. ಹೀಗೆ ವೈವಿಧ್ಯಮಯ ವಸ್ತುಗಳನ್ನು, ಪಾತ್ರಗಳನ್ನು, ಘಟನೆಗಳನ್ನು, ತಂತ್ರಗಳನ್ನು

ಬಳಸಿಕೊಂಡು ಕಾದಂಬರಿಗಳನ್ನು ರಚಿಸುವುದರ ಮೂಲಕ ಕನ್ನಡ ಕಾದಂಬರಿ ಲೋಕಕ್ಕೆ ತನ್ನದೇ ಆದ ವಿಶಿಷ್ಟವಾದ ಕೊಡುಗೆಯನ್ನು ನೀಡಿರುತ್ತಾರೆ.

*********************

# ಅಧ್ಯಾಯ–೪

ಭೈರಪ್ಪನವರ ಕಾದಂಬರಿಗಳ 'ಕಥನಶಿಲ್ಪ'.

ಮೊದಲ ಘಟ್ಟದ ಕಾದಂಬರಿಗಳು.

ಎರಡನೇ ಘಟ್ಟದ ಕಾದಂಬರಿಗಳು.

ಮೂರನೇ ಘಟ್ಟದ ಕಾದಂಬರಿಗಳು.

## ಅಧ್ಯಾಯ ೪

## ಭೈರಪ್ಪನವರ ಕಾದಂಬರಿಗಳ 'ಕಥನಶಿಲ್ಪ'.

ಎಸ್.ಎಲ್.ಭೈರಪ್ಪನವರು ೨೦ ಕಾದಂಬರಿಗಳನ್ನು ರಚಿಸಿದ್ದಾರೆ. ಒಂದೊಂದು ಕಾದಂಬರಿಯ ಮೂಲಕವೂ ವಿಭಿನ್ನ ಬಗೆಯ ವಸ್ತುಗಳನ್ನು ಪರಿಚಯಿಸಿರುವ, ಇವರ ಕಾದಂಬರಿಗಳು ಬದುಕಿನ ನಾನಾ ಮುಖಗಳನ್ನು ಗರ್ಭೀಕರಿಸಿಕೊಂಡಿರುತ್ತದೆ. ವಿವಿಧ ಸಂಸ್ಕೃತಿಗಳು ಒಂದೆಡೆ ಬೆರೆತಾಗ ಉಂಟಾಗುವ ಸಂಘರ್ಷ, ಪರಂಪರೆ ಮತ್ತು ಅಧುನಿಕತೆಗಳ ನಡುವೆ ಏರ್ಪಡುವ ಸಂಘರ್ಷ, ಜಾತಿ ಮತಗಳ ನಡುವೆ ತಲೆದೋರುವ ಸಂಘರ್ಷಗಳು, ಆದರ್ಶ ಮತ್ತು ವಾಸ್ತವಗಳ ನಡುವಿನ ತಿಕ್ಕಾಟ ಇವರ ಕಾದಂಬರಿಗಳ ಕೇಂದ್ರ ವಿಷಯಗಳಾಗಿರುತ್ತವೆ. ಹೀಗೆ ವಿಭಿನ್ನ ತಾತ್ವಿಕ ದೃಷ್ಟಿಕೋನದಿಂದ ರಚಿಸಲ್ಪಟ್ಟಿರುವ ಭೈರಪ್ಪನವರ ಕಾದಂಬರಿಗಳಲ್ಲಿ ನೈಜ ಜೀವನದ ಪ್ರೀತಿ-ಪ್ರೇಮ-ಕಾಮ ದಾಂಪತ್ಯ, ವಾತ್ಸಲ್ಯ, ಅಂತರ್ಜಾತಿ ವಿವಾಹ, ಪುನರ್ಜನ್ಮದಂತಹ ವಸ್ತು-ವಿಷಯಗಳು ಪ್ರಧಾನವಾಗಿ ಚಿತ್ರಣಗೊಂಡಿದೆ. ಈ ಹಿನ್ನೆಲೆಯಲ್ಲಿ ಭೈರಪ್ಪನವರಿಗೆ ಜನಪ್ರಿಯತೆಯನ್ನು ತಂದುಕೊಟ್ಟಿರುವ ಕಾದಂಬರಿಗಳನ್ನು ಮೂರು ಹಂತದಲ್ಲಿ ವಿಭಾಗಿಸಿಕೊಂಡು ಒಂದೊಂದು ಹಂತದ ಪ್ರತಿಯೊಂದು ಕಾದಂಬರಿಗಳ ಕಥನ ಕ್ರಿಯೆಯನ್ನು ಇಲ್ಲಿ ಪರಿಚಯಿಸಲಾಗಿದೆ.

**೪.೧ ಮೊದಲ ಘಟ್ಟದ ಕಾದಂಬರಿಗಳು:** ಭೈರಪ್ಪನವರ ಮೊದಮೊದಲಿನ ಕಾದಂಬರಿಗಳಲ್ಲಿ ಸ್ವಂತ ಬದುಕಿನ ಅನೇಕ ಎಳೆಗಳನ್ನು ಕಾಣಬಹುದು. ಆ ಮೇಲಿನ ಕಾದಂಬರಿಗಳಲ್ಲಿ ಕೆಲವು ಅನುಭವಗಳು ಸ್ವಂತದ್ದೇ ಆದರೂ ಅವು ನುಡಿ ಪಡೆದಾಗ ಸೃಷ್ಟಿಶೀಲ ಸನ್ನಿವೇಶಗಳು ಮತ್ತು ಪಾತ್ರಗಳು ಕಲ್ಪನೆಯ ಮೂಲಕ ಹೊಸ ರೀತಿಯಲ್ಲಿ ಮೂಡಿ ಬಂದವು.

ಭೈರಪ್ಪನವರ ಎಲ್ಲ ಕಾದಂಬರಿಗಳಲ್ಲಿಯೂ ವಿವರಗಳೇ ಬಹು ಮುಖ್ಯವಾಗಿರುತ್ತದೆ. ಆದರೆ ಎಲ್ಲ ಲೇಖಕರ ಮೊದಮೊದಲ ಕೃತಿಗಳಲ್ಲಿ ಸ್ವಾಭಾವಿಕವಾಗಿರುವಂತೆ, ಇವರ ಮೊದಮೊದಲ ಬರಹಗಳಲ್ಲಿ ಕಥನವೇ ಪ್ರಧಾನವಾಗಿರುತ್ತದೆ. ಈ ಘಟ್ಟದ ಕಾದಂಬರಿಗಳಲ್ಲಿ ಪ್ರಧಾನವಾಗಿ ಪಾತ್ರಗಳಾಗಲಿ, ಘಟನೆಗಳಾಗಲಿ, ಚಿಂತನೆಯಾಗಲಿ ಇಲ್ಲವೆಂದಲ್ಲ, ಆದರೆ ಅವೆಲ್ಲವೂ ರೂಪಿಸುವುದು ಕಥನವನ್ನು.

ಭೈರಪ್ಪನವರ ಮೊದಲ ಘಟ್ಟದ ಕಾದಂಬರಿಗಳಾಗಿ 'ಧರ್ಮಶ್ರೀ', 'ದೂರಸರಿದರು', 'ಮತದಾನ', 'ವಂಶವೃಕ್ಷ', 'ಜಲಪಾತ', 'ನಾಯಿನೆರಳು', 'ತಬ್ಬಲಿಯು ನೀನಾದೆ ಮಗನೇ', 'ಗೃಹಭಂಗ', 'ನಿರಾಕರಣ', 'ಗ್ರಹಣ', 'ದಾಟು' ಮತ್ತು 'ಅನ್ವೇಷಣೆ'ಯನ್ನು ಗುರುತಿಸಬಹುದಾಗಿದೆ.

## 'ಧರ್ಮಶ್ರೀ'– ಕಥನ ಕ್ರಿಯೆ.

ಎಸ್.ಎಲ್.ಭೈರಪ್ಪನವರ ಅಧಿಕೃತವಾದ ಮೊದಲ ಕಾದಂಬರಿ 'ಧರ್ಮಶ್ರೀ'. ಪರಂಪರೆ ಮತ್ತು ಪ್ರಗತಿಗಳ ಘರ್ಷಣೆ ಎಂಬ ತಾತ್ವಿಕ ನೆಲೆಯಲ್ಲಿ ರಚನೆಗೊಂಡಿರುವ, ಈ ಕಾದಂಬರಿಯ ವಸ್ತು-ವಿನ್ಯಾಸ ಈ ರೀತಿಯಾಗಿದೆ. "ಕಥಾನಾಯಕನಾದ ಸತ್ಯನಾರಾಯಣ ಪ್ರತಿಕೂಲ ಪರಿಸರದಲ್ಲಿ ಹುಟ್ಟಿ ಬೆಳೆದು, ಪ್ರಿಯರಾದ ಉಪಾಧ್ಯಾಯರು ಮತ್ತು ಮಿತ್ರರ ಸಹಾಯದಿಂದ ತನ್ನ ಬದುಕನ್ನು ರೂಪಿಸಿಕೊಂಡವನು, ಸಂವೇದನಾ ಶೀಲನಾದ ಸತ್ಯ ಹಿಂದೂಧರ್ಮ ಸಂಸ್ಕೃತಿಯ ಪ್ರಭಾವಲಯದಲ್ಲಿ ಬೆಳೆದು ಅದರ ಬಗ್ಗೆ ಶ್ರದ್ಧೆಯನ್ನಿರಿಸಿಕೊಂಡವನು. ಪಾದ್ರಿಗಳ ಮತ ಪ್ರಚಾರವನ್ನು ವಿರೋಧಿಸುವ ಆರ್.ಎಸ್.ಎಸ್.ನ ಕಟ್ಟಾಳು ಆಗಿದ್ದ ಈತನಿಗೆ

ಹಿಂದೂಧರ್ಮದ ಬಗ್ಗೆ ಯೋಚಿಸುತ್ತಾ ಹೋದಂತೆ ಅಲ್ಲಿಯ ಡಾಂಭಿಕತೆ, ಮಠಾಧಿಪತಿಗಳ ಸೋಗು ಅಸಹನೀಯವಾಗಿ ತೋರುತ್ತದೆ. ಇದೇ ವೇಳೆಗೆ ಕ್ರಿಶ್ಚಿಯನ್ ಲಿಲ್ಲಿ ಆತನ ಅಂತರಂಗವನ್ನು ಪ್ರವೇಶಿಸಿ ತನ್ನ ನಿರ್ಮಲ ಮನಸ್ಸಿನ ನಡೆ ನುಡಿಗಳಿಂದ ಆತನ ಮನಸ್ಸನ್ನು ಗೆಲ್ಲುತ್ತಾಳೆ. ಹೀಗೆ ಲಿಲ್ಲಿಯಲ್ಲಿ ಅನುರಕ್ತನಾದ ಸತ್ಯನಿಗೆ ಆಕೆಯಿಂದ ಮತಾಂತರ ಹೊಂದಲು ಯಾವ ಒತ್ತಾಯವು ಇರಲಿಲ್ಲ. ಆದರೆ ಹಿಂದೂ ಧರ್ಮದ ಸಂಕುಚಿತ ದೃಷ್ಟಿಯಲ್ಲಿ ಕ್ರಿಶ್ಚಿಯನ್ನಳಾದ ಲಿಲ್ಲಿಗೆ ಸ್ಥಾನವಿಲ್ಲ. ಆದ್ದರಿಂದ ಲಿಲ್ಲಿಯನ್ನು ವಿವಾಹವಾಗುವುದರೊಂದಿಗೆ ಸತ್ಯ ಕ್ರಿಶ್ಚಿಯನ್ ಧರ್ಮವನ್ನು ಸ್ವೀಕರಿಸುತ್ತಾನೆ. ಆದರೆ ವಿವಾಹದ ನಂತರ ಸತ್ಯನ ಅಂತರಂಗದಲ್ಲಿ ತಾಕಲಾಟ ಪ್ರಾರಂಭವಾಗಿ ಎಲ್ಲರಂತೆ ಸುಖವಾಗಿ ಬಾಳಲು ಸಾಧ್ಯವಾಗಲಿಲ್ಲ. ಈ ಮದುವೆಯು ತಾಂತ್ರಿಕವಾಗಿ ಭಾವತೀವ್ರತೆಯನ್ನು ಶಮನ ಮಾಡಬಹುದೇ ಹೊರತು ಜೀವನಕ್ಕೆ ನೆಮ್ಮದಿಯನ್ನು ಕೊಡಲಾರದು ಎಂಬ ಸತ್ಯಾಂಶವು ಅನೇಕ ಸಂಗತಿಗಳ ಮೂಲಕ ಅರಿವಾಗುವುದು. ಸಾಯುವ ಸ್ಥಿತಿಯಲ್ಲಿದ್ದ ತಂದೆಯು ಸತ್ಯನು ಬಾಯಿಗೆ ಬಿಡುವ ನೀರನ್ನು ಕೂಡ ಸ್ವೀಕರಿಸುವುದಿಲ್ಲ. ತಾನೇ ಮದುವೆ ನಡೆಸಿ ಉದ್ಧರಿಸಿದ ಸ್ವಂತ ತಂಗಿಯು ತಂದೆಯ ಶ್ರಾದ್ಧದ ದಿನ ಪಂಕ್ತಿಬೇಧದಲ್ಲಿ ಪ್ರಸಾದ ಬಡಿಸಿದ್ದಾಳೆ.

ಇನ್ನೊಂದು ಕಡೆಯಲ್ಲಿ ವಿವಾಹ ನಿಮಿತ್ತವಾಗಿ ಕೈಗೊಂಡ ಉದ್ಯೋಗದಲ್ಲೂ ಧರ್ಮ ಸಂಬಂಧವಾದ ವರಸೆಗಳು ಘಟಿಸುತ್ತವೆ. ತನ್ನ ಧರ್ಮದ ಲೋಪ-ದೋಷಗಳ ಅರಿವಿದ್ದಂತೆ ಸತ್ಯನಿಗೆ ಅದರ ವೈಶಾಲ್ಯತೆ, ಸಾಧನೆಗಳ ಅರಿವು ಇರುವುದರಿಂದ ಅದು ಆತನ ಮನಸ್ಸಿನಿಂದ ದೂರವಾಗಿದೆ. ಆತ ಸ್ವೀಕರಿಸಿದ ಈ ಹೊಸ ಧರ್ಮದೊಂದಿಗೆ ತನ್ನನ್ನು ತೂಗಿಸಿಕೊಳ್ಳಬೇಕಾಗುತ್ತದೆ. ಆತನಿಗೆ ಜಿಗುಪ್ಸೆ ಇರುವುದು ಹಿಂದು ಧರ್ಮದ ಮೇಲಲ್ಲ, ಬದಲಾಗಿ ತಿರುಚಿ ಕೊಂಡ ಬದ್ಧ ಆಚರಣೆಗಳ ಬಗ್ಗೆ ಹಾಗೂ ಅವುಗಳನ್ನು ಸಮಾಜದ ಮೇಲೆ ಹೇರುವವರ ಬಗ್ಗೆ, ಇದರಿಂದಾಗಿ ಸತ್ಯನಿಗೆ ಮತಾಂತರಗೊಂಡಿರುವ ವಿಚಾರದಲ್ಲಿ ವಿಷಾದ ಮೂಡುತ್ತದೆ. ಹಿಂದು ಧರ್ಮದ

ಲೋಪ-ದೋಷಗಳು ಅಸಹನೀಯವಾಗಿ ಕಂಡು ಬಂದಿರುವ ಸತ್ಯನಿಗೆ ಈಗ ಅದು ಸಹನೀಯವಾಗಿ ಕಾಣಿಸತೊಡಗಿತ್ತು. ಮನಸ್ಸಿನ ಒತ್ತಡವು ಸತ್ಯನ ಶರೀರದಲ್ಲೂ ಪ್ರಭಾವ ಬೀರಿ ಆತ ರೋಗಗ್ರಸ್ತನಾಗುತ್ತಾನೆ. ಲಿಲ್ಲಿಯ ಆರೈಕೆಯಿಂದ ಸತ್ಯ ಗುಣಮುಖಿನಾಗುತ್ತಿದ್ದಂತೆಯೇ ಮತ್ತೇ ಅವನ ಜೀವನದಲ್ಲಿ ಶಂಕರನ ಆಗಮನವಾಗುತ್ತದೆ. ಆತನ ಸಲಹೆಯಂತೆ ಸತ್ಯ-ಲಿಲ್ಲಿಯರು ಆರ್ಯ ಸಮಾಜದ ವಿಧಿವಿಧಾನದ ಮೂಲಕ ಹಿಂದು ಧರ್ಮದ ಮರು ದೀಕ್ಷೆ ಪಡೆಯುತ್ತಾರೆ. ಪ್ರೀತಿಗಾಗಿ ಧರ್ಮವನ್ನು ಬಿಟ್ಟುಕೊಟ್ಟರು, ವಿಧರ್ಮವನ್ನು ಆಶ್ರಯಿಸಲಾರದ ಸತ್ಯನ ಮನಸ್ಸು ರೋಗಗ್ರಸ್ತವಾಗಿರುವುದರಿಂದಾಗಿ ಲಿಲ್ಲಿ 'ಧರ್ಮಶ್ರೀ'ಯಾಗಿ ಪರಿವರ್ತನೆ ಗೊಳ್ಳುತ್ತಾಳೆ. ವ್ಯಕ್ತಿ ತನ್ನ ಸಂಸ್ಕೃತಿಯಿಂದ ದೂರ ಹೋದರು ಅದು ಆತನ ಮೇಲೆ ಉಂಟುಮಾಡುವ ಪ್ರಭಾವ ತೀವ್ರ ದೂರವಾಗಿರಲಾರದು ಎಂಬುದಕ್ಕೆ ನಿದರ್ಶನವಾಗಿ ಕಾದಂಬರಿಯಲ್ಲಿ ಸತ್ಯ ಕಾಣಿಸಿಕೊಳ್ಳುತ್ತಾನೆ.

ಮತಾಂತರದಿಂದ ಸಂಭವಿಸುವ ಸಾಂಸ್ಕೃತಿಕ ಘರ್ಷಣೆಯ ಸ್ವರೂಪವೆಂತಹದು ಎಂಬ ವಿಚಾರವನ್ನು ಹಿನ್ನೆಲೆಯಾಗಿಟ್ಟು ರಚನೆಗೊಂಡಿರುವ 'ಧರ್ಮಶ್ರೀ' ಕಾದಂಬರಿಯ ಕಥನ ಕ್ರಿಯೆಯನ್ನು ಪರಿಶೀಲಿಸುವುದಾದರೆ-ಈ ಕಾದಂಬರಿಯು ಉತ್ತಮ ಪುರುಷದ ನಿರೂಪಣೆಯಲ್ಲಿ ರಚನೆಗೊಂಡಿದೆ. ಕಥಾ ನಾಯಕನನ್ನಾಗಿ ನಿರೂಪಕನನ್ನು ತಂದಿರುವುದು ಕಥನ ಕ್ರಿಯೆಯ ದೃಷ್ಟಿಯಿಂದ ಔಚಿತ್ಯ ಪೂರ್ಣವಾಗಿದೆ. ಈ ಕಾದಂಬರಿಯಲ್ಲಿ ಬರುವ ಕಥಾನಾಯಕನ ಪಾತ್ರದ ವಿವರಣೆ ಆತ್ಮ ಕಥೆಯಂತಿದೆ. ಹೊಸ ಮಾದರಿಯ ವಸ್ತುವನ್ನು ಆದರಿಸಿ ಕಾದಂಬರಿಕಾರರು ತಮ್ಮ ಸುಲಲಿತವಾದ ತಿಳಿಗನ್ನಡದಲ್ಲಿ ಹೆಣೆದ ಈ ಕಾದಂಬರಿ, ಜೀವನಕ್ಕಿಂತ ಭಿನ್ನವಾಗಿರದೇ ಅದೊಂದು ಸಮಸ್ಯೆಯಂತೆ ಇದೆ. ಪರಿಹಾರವನ್ನು ಕಾದಂಬರಿಯಲ್ಲಿಯೇ ಸೂಚಿಸಲಾಗಿದೆ.

ಲಿಲ್ಲಿ ಸತ್ಯನಾರಾಯಣ ಇವರ ಪ್ರೇಮದ ಚಿತ್ರಣದಲ್ಲಿ ಕಾದಂಬರಿಕಾರರು ಹೆಚ್ಚು ಗಮನ ಕೊಡದಿರುವುದು ಇಲ್ಲಿನ ವಿಲೋಮವಾದ ರಚನೆಯಾಗಿದೆ. ಪ್ರೀತಿಸಿ ಮದುವೆಗಾಗಿಯೇ ಮತಾಂತರಗೊಂಡವರಲ್ಲಿ ಸ್ವಲ್ಪವೂ ಪ್ರೇಮ ಗಾಢವಾಗಿ ಚಿತ್ರಿತಗೊಳ್ಳದಿರುವುದು ಗಮನಿಸಬೇಕಾದ ಒಂದು ಅಂಶವಾಗಿ ಕಂಡು ಬರುತ್ತದೆ. ಆರ್.ಎಸ್.ಎಸ್.ನ ಕಟ್ಟಾಳು ಆಗಿರುವ ನಾಯಕನಿಗೆ ಶಂಕರನ ಆದರ್ಶದ ವಿಚಾರಗಳ ಅಗತ್ಯತೆಯನ್ನು ನಿರೂಪಿಸಿರುವುದು ಅಗತ್ಯವಾಗಿ ಕಂಡುಬರುತ್ತದೆ. ಶಂಕರನಿಂದ ಅವನು ರಾಷ್ಟ್ರದ ವಿಷಯದಲ್ಲಿ ಹಲವಾರು ಸಂಗತಿಗಳನ್ನು ಕಲಿಯುತ್ತಾನೆ. ಆದರೆ ಶಂಕರನಂತೆ ತಾನು ತನ್ನನ್ನು ರಾಷ್ಟ್ರಕ್ಕೆ ಮೀಸಲಾಗಿಡಬೇಕೆಂಬ ಭಾವ ಅವನಲ್ಲಿ ಬರುವುದಿಲ್ಲ.

ಈ ಕಾದಂಬರಿಯಲ್ಲಿ ವಿಚಾರಗಳನ್ನು ಒತ್ತತ್ತಾಗಿ ತಂದು ಬಿಡುತ್ತಾರೆ. ಕಥನದಲ್ಲಿ ಆದಿ-ಅಂತರ್ಯ ಅಂತ್ಯ ಶಾಸ್ತ್ರೋಕ್ತವಾಗಿ ಮೂಡಿಬಂದಿದೆ. ಆದರೂ ಕೂಡ ಯಾವುದೋ ಒಂದು ಪ್ರಜ್ಞೆ ಇದರ ಹಿನ್ನೆಲೆಗಿದೆ ಅನಿಸಿಬಿಡುತ್ತದೆ. ಇಲ್ಲಿ ಮತಾಂತರದ ವಸ್ತುವೊಂದೇ ಅಲ್ಲದೆ ಹಿಂದೂ ಧರ್ಮದ ಒಳಗಡೆಯೇ ಇರುವ ಜಾತಿಸಮಸ್ಯೆ ವಿಗ್ರಹಾರಾಧನೆ, ಕಲೆಯ ಸಂಬಂಧ, ಭಿಕ್ಷಾನ್ನ-ಬ್ರಾಹ್ಮಣತ್ವ ಮುಂತಾದ ಅನೇಕ ವಿಷಯ ವಿಚಾರಗಳನ್ನು ಹೇಳಿಬಿಡುವ ಡಿಬೆಟಿಂಗ್ ಕೌಶಲ್ಯವನ್ನು ಕಾಣಬಹುದಾಗಿದೆ.

'ಧರ್ಮಶ್ರೀ'ಯಲ್ಲಿ ಚರ್ಚಿಸಬಹುದಾದ ಪ್ರಮುಖ ವಿಷಯವೆಂದರೆ ಪರಂಪರೆ ಮತ್ತು ಪ್ರಗತಿಯ ಸಂಘರ್ಷಗಳನ್ನು, ಇದನ್ನು ತರುಣನಾದ, ಸತ್ಯ (ನಿರೂಪಕ) ಮತಾಂತರಗೊಂಡು, ಮದುವೆಯಾಗಿ, ನಂತರ ಆರ್ಯ ಸಮಾಜಕ್ಕೆ ಸೇರುವುದರ ಮೂಲಕವಾಗಿ, ಹಿಂದೂಧರ್ಮಕ್ಕೆ ಮರುದೀಕ್ಷೆಯನ್ನು ಪಡೆಯುವ ರೀತಿಯಲ್ಲಿ ಕತೆಯನ್ನು ಕಟ್ಟಿಕೊಂಡು ಕಾದಂಬರಿಕಾರರು ಸಾಗುತ್ತಾರೆ. ಇಲ್ಲಿ ಹಿಂದೂಧರ್ಮವನ್ನು ಪರಂಪರೆಯ ಸಂಕೇತವಾಗಿಯೂ, ಕ್ರಿಶ್ಚಿಯನ್ ಧರ್ಮವನ್ನು ಪ್ರಗತಿಯ ಸಂಕೇತವಾಗುವಂತೆಯೂ, ಕತೆಯ ಚೌಕಟ್ಟನ್ನು ನಿರ್ಮಿಸಿಕೊಂಡಿರುತ್ತಾರೆ.

ಆದ್ದರಿಂದಲೇ ಸತ್ಯನಾರಾಯಣನ ಪಾತ್ರವೂ ಪರಂಪರೆಯ ಪ್ರತಿನಿಧಿಯಾಗಿಯೂ, ಲಿಲ್ಲಿಯ ಪಾತ್ರವೂ ಪ್ರಗತಿಯ ಪ್ರತಿನಿಧಿಯಾಗಿಯೂ ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತದೆ. ಪರಂಪರೆಯ ಪ್ರತಿನಿಧಿಯಾದ ಸತ್ಯನಾರಾಯಣ ಮತಾಂತರಗೊಂಡಿದ್ದರೂ ಕೂಡ ಅತ್ಯಂತ ಲವಲವಿಕೆಯಿಂದ ಇರುತ್ತಾರೆ. ಅಂದರೆ ಕತೆಯ ಚೌಕಟ್ಟಿನಲ್ಲಿ ನಾಯಕನ ಬದುಕಿನ ಹಿನ್ನೋಟವು ಪ್ರಧಾನವಾಗಿ ಕಂಡುಬರುತ್ತದೆ. ಇಲ್ಲಿ ನಾಯಕನಾದ ಸತ್ಯನಾರಾಯಣನಿಗೆ ಲಿಲ್ಲಿಯ ಪರಿಚಯವು ಪ್ರಗತಿಯ ಪರಿಚಯವಾಗುವಂತೆ ಚಿತ್ರಿಸಲಾಗಿದೆ. ನಂತರ ಆತ ಲಿಲ್ಲಿಯ ವಿಚಾರಗಳನ್ನು ಸಮ್ಮತಿಸುವಂತೆ ಆಕೆಯನ್ನು ವಿವಾಹವಾಗಿ ಆ ಧರ್ಮಕ್ಕೆ ಮತಾಂತರಗೊಳ್ಳುತ್ತಾನೆ. ಆದರೆ ಮನುಷ್ಯರು ಎಷ್ಟೇ ಪ್ರಗತಿಯನ್ನು ಹೊಂದಿದ್ದರೂ ಪರಂಪರೆಯ ಬೇರು ಆತನನ್ನು ಜಗ್ಗುತ್ತಾ ಇರುತ್ತದೆ ಎಂಬುದನ್ನು, ಸತ್ಯನಾರಾಯಣ ಮತ್ತೇ ಪುನಃ ಆರ್ಯ ಸಮಾಜದ ಮೂಲಕ ಹಿಂದೂಧರ್ಮಕ್ಕೆ ದೀಕ್ಷೆ ಪಡೆಯುವಲ್ಲಿಗೆ ತಂದು ನಿಲ್ಲಿಸುತ್ತಾರೆ.

**************

## 'ದೂರಸರಿದರು'-ಕಥನಕ್ರಿಯೆ.

'ದೂರಸರಿದರು'-ಭೈರಪ್ಪನವರ ಒಂದು ವೈಚಾರಿಕವಾದ ಕಾದಂಬರಿ. ಸಂಬಂಧಗಳು ಏರ್ಪಡುವ ಹಾಗಾದರೂ ಏರ್ಪಡದ ಸ್ಥಿತಿ, ವಾಸ್ತವಿಕತೆಗೆ ದೂರವಾದ ಇಂತಹ ನಂಬಿಕೆ ಮತ್ತು ಕನಸುಗಾರಿಕೆಗಳು, ಕಾಲೇಜು ವಿದ್ಯಾರ್ಥಿ-ವಿದ್ಯಾರ್ಥಿನಿಯರ ಅಭ್ಯಾಸ ಕಾಲದಲ್ಲಿಯೂ, ಮತ್ತು ತದ ನಂತರದ ಕೆಲವು ವರ್ಷಗಳಲ್ಲಿಯೂ ಒಂದೊಂದಾಗಿ ಅವರ ನಂಬಿಕೆ, ಕನಸುಗಳನ್ನು ಒಡೆಯುವುದೇ ಈ ಕಾದಂಬರಿಯ ವಸ್ತು. ಆದ್ದರಿಂದಲೇ ಕವಿ ಬೇಂದ್ರೆಯವರ ಮಾನವ ಚಾರಿತ್ರ್ಯದಲ್ಲಿ

'ಎಷ್ಟೋ ಪ್ರಳಯವಾಗಿವೆ
ಸ್ತ್ರೀಯ ಪ್ರೇಮ ಪುರುಷ ಭಾಗ್ಯ
ಕಾದು ಕಾದು ಮಾಗಿವೆ'. – ಎಂಬ ಸಾಲುಗಳು

ಕಾದಂಬರಿಯಲ್ಲಿ ಸೂಚನೆಯಾಗಿ ಬಂದಿವೆ. ಅಂದರೆ ತಾನಾಗಿ ಒದಗಿ ಬಂದ ಸ್ತ್ರೀಯ ಪ್ರೇಮ ಪುರುಷನ ಭಾಗ್ಯವಾದರೂ ಅದರ ಸ್ವೀಕಾರವಿಲ್ಲದೆ ಬಂದೆ, ಕಾದು ಶುಷ್ಕವಾಗುವುದು ಇಲ್ಲಿಯ ರೀತಿಯಾಗಿದೆ. ಈ ಕಾದಂಬರಿಯ ಶೀರ್ಷಿಕೆಗೆ ಎರಡು ಅರ್ಥಗಳಿವೆ.

೧. ಎಳೆಯ ಪ್ರೇಮಿಗಳು ಅಥವಾ ಹಾಗೆಂದು ತಮ್ಮನ್ನು ತಿಳಿದುಕೊಂಡವರು ಪರಸ್ಪರ ದೂರವಾಗುವ ಅರ್ಥ .

೨. ಅವರೆಲ್ಲರೂ ತಂತಮ್ಮ ನೆಲೆಗಳಿಂದ ದೂರ ಸರಿಯುವುದು ಇನ್ನೊಂದು ಅರ್ಥ.

'ದೂರ ಸರಿದರು' ಕಾದಂಬರಿಯ ಶಿಲ್ಪವು ಎರಡು ಮುಖ್ಯ ಸಂಬಂಧಗಳ ಕತೆಗಳಿಂದ ಕಟ್ಟಲ್ಪಟ್ಟಿದೆ. ಆನಂದ-ವಿನತೆಯರ ಪ್ರೇಮ ಸಂಬಂಧ ಹಾಗೂ ವಸಂತ-ಉಮೆಯರ ಪ್ರೇಮ-ಸಂಬಂಧ. ಈ ಕಾದಂಬರಿಯಲ್ಲಿ ವಸಂತ-ಉಮೆಯ ಕಥೆಯು ಆನಂದ-ವಿನುತೆಯರ ಕಥೆಯ ವಿರುದ್ಧವಾದ ದಿಕ್ಕಿನಲ್ಲಿ ನಡೆಯುವಂತಹದ್ದು.

ಈ ಕಾದಂಬರಿಯ ವಸಂತ ತತ್ವಶಾಸ್ತ್ರದ ವಿದ್ಯಾರ್ಥಿ, ಈತನಿಗೆ ಬೌದ್ಧಿಕ ಸಹಚರ್ಯವೇ ನಿಜವಾದ ದಾಂಪತ್ಯ ಜೀವನ ಎನ್ನುವ ಶುಷ್ಕ ತರ್ಕವಾದತನ. ಆದರೆ ಆನಂದ ಸಾಹಿತ್ಯದ ವಿದ್ಯಾರ್ಥಿ. ಆತನಿಗೆ ಶುದ್ಧ ಪ್ರೀತಿಯೇ ನಿಜವಾದ ದಾಂಪತ್ಯವಾಗಿ ಕಂಡುಬರುತ್ತದೆ. ಇದರಿಂದಾಗಿ ಕಾದಂಬರಿಯ ವಸ್ತು ತತ್ವ-ಸಾಹಿತ್ಯದ ನಡುವೆ, ಬುದ್ಧಿ-ಹೃದಯದ ನಡುವಿನ ತುಲನೆಯ ವೈಚಾರಿಕವಾದ ಹಂದರದಲ್ಲಿ ಕಟ್ಟಲ್ಪಟ್ಟಿರುತ್ತದೆ.

ಇಲ್ಲಿ ವಸಂತ ತನ್ನ ಸಹಪಾಠಿಯಾದ ಉಮೆಯೊಂದಿಗೆ ತನ್ನೆಲ್ಲಾ ವಿಚಾರಗಳನ್ನು ಹಂಚಿಕೊಳ್ಳುತ್ತಾನೆ. ಇವರಿಬ್ಬರ ಸಂಬಂಧದಲ್ಲಿ ಶುದ್ಧ ಪ್ರೇಮವಿದೆ. ಆದರೆ ವಸಂತ ಅದನ್ನು ಒಪ್ಪಿಕೊಳ್ಳಲಾರ. ಏಕೆಂದರೆ ಆತನ ದೃಷ್ಟಿಯಲ್ಲಿ ಬೌದ್ಧಿಕ ಸಹಚರ್ಯವೊಂದೇ ಮಹತ್ವದ್ದು. ಉಮೆ ಆತನ ವಿಚಾರಗಳನ್ನು ಒಪ್ಪಿಕೊಂಡರು ಕೂಡ ಮದುವೆಯ ವಿಷಯ ಬಂದಾಗ ವ್ಯವಹಾರಿಕ ನಿಲುವು ತಾಳುತ್ತಾಳೆ. ಆ ಕಾರಣದಿಂದ ಶುದ್ಧ ಪ್ರೇಮಕ್ಕೆ ಅವಕಾಶವಿಲ್ಲದ ವಸಂತನ ಶುಷ್ಕ ತತ್ವ ಅವಳಿಗೆ ನೀರಸವಾಗಿ ತೋರುತ್ತದೆ. ಆತನನ್ನು ವ್ಯವಹಾರಿಕ ಬದುಕಿನೆಡೆಗೆ ತರಲು ಸಾಕಷ್ಟು ಪ್ರಯತ್ನಿಸುತ್ತಾಳೆ. ಆ ಕಡೆಯಲ್ಲಿ ವಸಂತ ಅವಳನ್ನು ತನ್ನ ಆದರ್ಶದೆಡೆಗೆ ಎಳೆದೊಯ್ಯಲು ಪ್ರಯತ್ನಿಸಿ ಅವಳನ್ನು ಹಿಂಸಿಸುತ್ತಾನೆ. ಹೀಗೆ ವ್ಯವಹಾರಿಕ ಬದುಕಿನಿಂದ ದೂರವಾಗಿ ನಿಲ್ಲುವ, ಆತನ ಅತಿ ವೈಚಾರಿಕತೆಯನ್ನು ಅರಿತುಕೊಂಡ ಉಮೆ ಆತನಿಂದ ದೂರ ಸರಿಯುತ್ತಾಳೆ.

ಆನಂದ-ವಿನುತೆಯರ, ಪ್ರೇಮ-ಸಂಬಂಧಗಳನ್ನು ಕಾದಂಬರಿಯಲ್ಲಿ ಕಾದಂಬರಿಕಾರರು ಇನ್ನೊಂದು ದಿಕ್ಕಿನಿಂದ ಪರಿಚಯಿಸುವಂತೆ ಕತೆಯನ್ನು ಕಟ್ಟಿರುತ್ತಾರೆ. ಇಲ್ಲಿ ಆನಂದ-ವಿನುತೆಯರು ಸಹಪಾಠಿಗಳು. ಇಬ್ಬರು ಕೂಡ ಸಾಹಿತ್ಯದ ವಿದ್ಯಾರ್ಥಿಗಳು. ಆನಂದ ವೈಚಾರಿಕ ಆದರ್ಶವನ್ನು ತಿರಸ್ಕರಿಸುವುದಿಲ್ಲ. ಆದರೆ ಪ್ರೇಮದಲ್ಲಿ ಭಾವನಾತ್ಮಕ ನೆಲೆಯನ್ನು ಪ್ರತಿಪಾದಿಸುತ್ತಾನೆ. ಶುದ್ಧ ಪ್ರೇಮ ಆತನ ಆದರ್ಶ ತನ್ನ ಪ್ರಿಯತಮೆಯಲ್ಲಿಯೂ ಆತ ಇದನ್ನೇ ಅರಸುತ್ತಾನೆ. ಆದರೆ ಸಂಪ್ರದಾಯಸ್ಥೆಯಾಗಿರುವ

ಆಕೆಯ ತಾಯಿ ಅವರಿಬ್ಬರ ಪ್ರೇಮಕ್ಕೆ ವಿರೋಧ ಒಡ್ಡುತ್ತಾಳೆ. ಇದರಿಂದಾಗಿ ತಾಯಿಯನ್ನೆದುರಿಸಿ ಆನಂದನನ್ನು ಕೂಡಲಾಗದ ವಿನುತೆ ಅಸಹಾಯಕತೆಯಿಂದ ದೂರಸರಿಯುತ್ತಾಳೆ ಆದರ್ಶದಲ್ಲಿ ಕಟ್ಟು ಬಿದ್ದಿರುವ ಆನಂದ ತನ್ನನ್ನು ಮದುವೆಯಾಗಲು ರಮೆ ಸಿದ್ಧಳಿದ್ದರು ಕೂಡ ವಿನುತೆಯ ಜೊತೆಗಿನ ಶುದ್ಧ ಪ್ರೇಮದಿಂದಾಗಿ ಏಕಾಂಗಿಯಾಗಿರಲು ಸಿದ್ಧನಾಗುತ್ತಾನೆ. ಆದರೆ ತಾಯಿಯ ಒತ್ತಡದ ಮೇರೆಗೆ ಆಕೆ ಗೊತ್ತು ಮಾಡಿರುವ ಹೆಣ್ಣೊಂದನ್ನು ಮದುವೆ ಆಗುತ್ತಾನೆ. ಆದರೆ ಆಕೆಯೊಂದಿಗೆ ಮನಃಪೂರ್ವಕವಾಗಿ ದಾಂಪತ್ಯದಲ್ಲಿ ಪಾಲ್ಗೊಳ್ಳುವುದಿಲ್ಲ. ಆನಂದ–ವಿನುತೆ ಜೀವನವಿಡೀ ಒಂದಾಗದಿದ್ದರೂ ಕೂಡ ವಿನುತೆಯ ಅಂತಿಮಕಾಲದಲ್ಲಿ ೬ ದಿನಗಳ ಕಾಲ ಒಟ್ಟಿಗೆ ಕಳೆಯುತ್ತಾರೆ. ವಿನುತಾ ಆ ಆರು ದಿನದಿಂದಲೇ ತೃಪ್ತಿಗೊಂಡು ಕೊನೆಯುಸಿರೆಳೆಯುತ್ತಾಳೆ. ಹೀಗೆ ವ್ಯವಹಾರಿಕ ಬದುಕಿನಲ್ಲಿ ಒಂದಾಗದಿದ್ದರೂ ಮನಸ್ಸಿನ ನೆಲೆಯಲ್ಲಿ ಇಬ್ಬರೂ ಸದಾ ಒಂದಾಗುಳಿಯುತ್ತಾರೆ. ಇತ್ತ ಆನಂದನನ್ನು ಪ್ರೀತಿಸಿ ಆತನು ದೊರೆಯದಿದ್ದಾಗ ರಮೆ ಪ್ರೊ.ನರೋತ್ತಮನಲ್ಲಿ ಆ ಪ್ರೀತಿಯನ್ನು ಹಂಚಿಕೊಳ್ಳುತ್ತಾಳೆ. ಆದರೆ ನರೋತ್ತಮನದು ನಿಜವಾದ ಪ್ರೇಮವಲ್ಲ ಅದು ಕಾಮವಾಗಿರುತ್ತದೆ.

ಹೀಗೆ ಈ ಕಾದಂಬರಿಯಲ್ಲಿ ಕಾದಂಬರಿಕಾರರು ವಸಂತ–ಉಮೆ, ಆನಂದ–ವಿನುತೆ, ರಮೆ–ನರೋತ್ತಮ ಇವರ ಪ್ರೇಮ ಸಂಬಂಧಗಳನ್ನು ಕುಶಲವಾಗಿ ಒಂದರೊಳಗೊಂದು ಹೆಣೆದುಕೊಂಡು ಬರುತ್ತಾರೆ. ಶುದ್ಧವಾದ ಪ್ರೇಮದ ಆಶಯವನ್ನು ಇಟ್ಟುಕೊಂಡು ರಚಿಸಿರುವ ಈ ಕಾದಂಬರಿಯಲ್ಲಿ ಕಾದಂಬರಿಕಾರರು ಶುದ್ಧ ಪ್ರೇಮಕ್ಕೆ ಬೌದ್ಧಿಕ ಸಹಚರ್ಯಕ್ಕೆ ಹಾಗೂ ಕಾಮುಕ ಪ್ರೇಮಕ್ಕೂ ಸಂಬಂಧಿಸಿದ ಅನೇಕ ಚರ್ಚೆಗಳನ್ನು ಆಯಾ ಪಾತ್ರಗಳ ಮೂಲಕ ಮೂಡಿಸುತ್ತಾರೆ. ಕಾದಂಬರಿಯ ಆಶಯ ಪಾತ್ರವಾದ ಆನಂದನ ಹಲವಾರು ಮಾತುಕತೆಗಳಲ್ಲಿ ಸ್ವತಃ ಕಾದಂಬರಿಕಾರರೇ ಕಾಣಿಸಿಕೊಂಡಿರುವಂತೆ ಭಾಸವಾಗುತ್ತದೆ.

ಈ ಕಾದಂಬರಿಯಲ್ಲಿ ನಡೆಯುವ ಚರ್ಚೆಗಳು ಕತೆಯ ಓಟಕ್ಕೆ ತಡೆಯೊಡ್ಡುತ್ತವಾದರೂ ಎಲ್ಲ ಎಳೆಗಳನ್ನು ಬಿಡದೇ ಒಗ್ಗೂಡಿಸಿಕೊಂಡು ಬಂದಿರುವುದು ಶಿಲ್ಪದ ದೃಷ್ಟಿಯಿಂದ ಮಹತ್ತರವಾದ ವಿಚಾರ.

ಭೈರಪ್ಪನವರ ಮೊದಲ ಕಾದಂಬರಿಯಾದ 'ಧರ್ಮಶ್ರೀ'ಯಿಂದ 'ದೂರ ಸರಿದರು' ಕಾದಂಬರಿಯ ಹಂದರ ವಿಶಾಲವಾದದ್ದು. ಆದ್ದರಿಂದ ಕಾದಂಬರಿಕಾರರು ವಿಶಾಲವಾದ ಚೌಕಟ್ಟಿಗೆ ಸಂಬಂಧಿಸಿ ಪ್ರೇಮಕ್ಕೆ ಸಂಬಂಧಿಸಿದ ಅನೇಕ ಚರ್ಚೆಗಳನ್ನು ಬೇರೆ ಬೇರೆ ಎಳೆಗಳ ಮೂಲಕ ತಂದು ಒಟ್ಟು ಕಾದಂಬರಿಯನ್ನು ನಿರ್ಮಿಸಿರುತ್ತಾರೆ.

**************

## 'ಮತದಾನ'–ಕಥನಕ್ರಿಯೆ.

ಸಮಕಾಲೀನ ರಾಜಕೀಯ ಚಿತ್ರವನ್ನು ತೆರೆದಿಡುವ ಭೈರಪ್ಪನವರ 'ಮತದಾನ' ಕಾದಂಬರಿಯು, ಹೆಸರೇ ಸೂಚಿಸುವಂತೆ ಸ್ವಾತಂತ್ರ್ಯಾನಂತರ ರಾಜಕೀಯ ವ್ಯವಸ್ಥೆಯ ಚಿತ್ರಣವನ್ನು ವಿಡಂಬನಾತ್ಮಕವಾಗಿ ವಿವರಿಸುತ್ತದೆ.

ಈ ಕಾದಂಬರಿಯ ಕಥಾನಾಯಕ ಗಾಂಧೀಜಿಯವರ ಆದರ್ಶವನ್ನು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಲೆತ್ನಿಸುವ ಒಬ್ಬ ವೈದ್ಯ ಡಾ. ಶಿವಪ್ಪ. ಈತ ಗ್ರಾಮೀಣ ಭಾಗದ ಜನರಿಗೆ ಶುಶ್ರೂಷೆ ಮಾಡಿ ನಿಸ್ವಾರ್ಥದಿಂದ ಬದುಕಲು ಪ್ರಯತ್ನಿಸುತ್ತಾನೆ. ಆದರೆ ತನ್ನ ಪಾಡಿಗೆ ತಾನು ವೈದ್ಯಕೀಯ ಸೇವೆಯನ್ನು ಮಾಡಿಕೊಂಡಿರುವುದಕ್ಕೆ, ಸುತ್ತಲಿನ ರಾಜಕೀಯವು ಅವನನ್ನು ಬಿಡುವುದಿಲ್ಲ. ಮೊದಲಿಗೆ ಎರಡು ಪ್ರತಿಪಕ್ಷದ ಕುಟುಂಬಗಳು ತಂತಮ್ಮ 'ಹೆಣ್ಣು'ಕೊಟ್ಟು ಮದುವೆ ಮಾಡುವ ಮೂಲಕ ಅವನನ್ನು ಸೆಳೆಯಲು ನೋಡುತ್ತವೆ. ಆತ ಜಗ್ಗದ್ದಿದ್ದಾಗ ಅವನ ಜನಪ್ರಿಯತೆಯನ್ನು ಉಪಯೋಗಿಸಿಕೊಂಡು ಸಾರ್ವತ್ರಿಕ ಚುನಾವಣೆಗೆ ಅವನು ನಿಲ್ಲುವಂತೆ ಪ್ರಚೋದಿಸುತ್ತವೆ. ಒತ್ತದಕ್ಕೆ ಸಿಲುಕಿ ಒಪ್ಪಿಕೊಂಡ ವೈದ್ಯ ಚುನಾವಣೆಯ ತರಾತುರಿಯಲ್ಲಿ ತಾನು ಚಿಕಿತ್ಸೆ ಮಾಡಿದರೆ ಬದುಕುತ್ತಿದ್ದ ಒಬ್ಬ ರೋಗಿಯನ್ನು ಕಡೆಗಣಿಸಿ, ಆ ರೋಗಿಯ ಸಾವಿಗೆ ಕಾರಣವಾಗುತ್ತಾನೆ. ಇದರಿಂದ ಮನಸ್ಸು ಕಾಡತೊಡಗುತ್ತದೆ. ರಾಜಕೀಯ ಪಗಡೆಯಲ್ಲಿ ಪ್ರತಿಪಕ್ಷಗಳು ನಡೆಸುವ ಕೇವಲ ದಾಳವಾಗಿ ಶಿವಪ್ಪನ ಬಲಿಯಾಗಬೇಕೇ ವಿನಃ, ಅದರಲ್ಲಿ ಯಾವ ಸ್ವತಂತ್ರ ವ್ಯಕ್ತಿತ್ವವನ್ನೂ ಅವನು ಸಾಧಿಸಲಾರ. ರಾಜಕೀಯ ಪಕ್ಷಗಳ ಅನಿಸಿಕೆಯಂತೆ ಆತ ಚುನಾವಣೆಯಲ್ಲಿ ಸೋಲುತ್ತಾನೆ. ರಾಜಕೀಯವು ತನ್ನ ಕ್ಷೇತ್ರವಲ್ಲವೆಂಬುದರ ಅರಿವು ಆದಾಕ್ಷಣ ಆತ ಕಾರ್ಯಪ್ರವೃತ್ತನಾಗಿ ತನ್ನ ವೃತ್ತಿಗೆ ಹುರುಪಿನಿಂದಲೇ ಮರಳುತ್ತಾನೆ. ಯಾವುದೇ ಒಂದು ಆದರ್ಶವನ್ನು ನಾವು ಕೈಗೊಂಡಿದ್ದರೂ ಒಮ್ಮೆ ಅದು ನಮ್ಮನ್ನು ಪರೀಕ್ಷೆಗೆ ಒಡ್ಡುತ್ತದೆ. ಪ್ರಲೋಭನೆಗೆ ಸಿಕ್ಕಿ ದಾರಿ

ತಪ್ಪಿಸಬಹುದು. ಆದರೆ ಆ ಸಮಯ ಕಳೆದ ಮೇಲೆ ಆದರ್ಶ ತಾನಾಗಿಯೇ ಗೆದ್ದುಬಿಡುತ್ತದೆ. ಅದರ ಯೋಗ್ಯತೆಗೆ ತಕ್ಕ ಫಲ ಸಿಗುತ್ತದೆ ಎನ್ನುವ ತತ್ವವನ್ನು ಇರಿಸಿಕೊಂಡು ವಾಸ್ತವದ ಚಿತ್ರಣದೊಂದಿಗೆ ಕಾದಂಬರಿಯಲ್ಲಿ ಕಥನ ಕ್ರಿಯೆ ನಡೆಯುತ್ತದೆ.

ಕಾದಂಬರಿಯ ಕೇಂದ್ರ ವ್ಯಕ್ತಿ ಡಾ.ಶಿವಪ್ಪನವರನ್ನು ಸುತ್ತುವರಿಸಿ, ಇಡೀ ಸ್ವತಂತ್ರ ಭಾರತದ ರಾಜಕೀಯ ವ್ಯವಸ್ಥೆಯ ವಿಡಂಬನೆಯನ್ನು ಮಾಡಲು ಪ್ರಯತ್ನಿಸುತ್ತಾರೆ. ಸ್ವಾತಂತ್ರ್ಯ ನಂತರ ಹುಟ್ಟಿಕೊಂಡ ವಿವಿಧ ಪಕ್ಷಗಳ ಹುಟ್ಟಿಗೆ ಕಾರಣವಾದ ಅಂಶಗಳು ಇಲ್ಲಿ ವಿಶ್ಲೇಷಿತವಾಗಿವೆ. ರಾಜಕೀಯ ವ್ಯಕ್ತಿಗಳ ಸಮಯಸಾಧಕತನವನ್ನು ಕಾದಂಬರಿಯಲ್ಲಿ ಒಂದು ಎಳೆಯನ್ನಾಗಿ ಕಾದಂಬರಿಕಾರರು ತರುತ್ತಾರೆ. ಗೊತ್ತುಗುರಿಗಳಿಲ್ಲದ ಅನೇಕ ಪಕ್ಷಗಳ ರಚನೆಯಿಂದ ದೇಶದ ರಾಜಕೀಯ ನಗೆಪಾಟಲಿಗೆ ಈಡಾಗಿರುವುದನ್ನು ಕಾದಂಬರಿ ಬಿಂಬಿಸುತ್ತದೆ. ಹೀಗೆ ಈ ಕಾದಂಬರಿಯು ತತ್ಕಾಲೀನ ರಾಜಕೀಯ ಕ್ಷೇತ್ರದ ಸಮಸ್ತ ವ್ಯವಹಾರವನ್ನು, ಅವು ವಿರೂಪಗೊಂಡಿರುವುದನ್ನೂ ವಿಶ್ಲೇಷಿಸುತ್ತದೆ. ಪ್ರಾಮಾಣಿಕ ಹಾಗೂ ಅಪ್ರಾಮಾಣಿಕ ಮುಖಾಮುಖಿಯನ್ನು ಕಾದಂಬರಿಯ ಚೌಕಟ್ಟಿನಲ್ಲಿ ತಂದಿರುತ್ತಾರೆ. ಅಪ್ರಾಮಾಣಿಕರ ವಿಜೃಂಭಣೆಯನ್ನು ಕಾದಂಬರಿಯು ಬಿಂಬಿಸುವುದರ ಮೂಲಕ ದೇಶದ ವ್ಯವಸ್ಥೆ ಕಾಲಿಡುತ್ತಿರುವ ಮಾರ್ಗದಲ್ಲಿ ಓದುಗರನ್ನು ಲೇಖಕರು ಗಮನ ಸೆಳೆಯುವಲ್ಲಿ ಪ್ರಯತ್ನಿಸಿರುತ್ತಾರೆ.

ಒಟ್ಟಿನಲ್ಲಿ 'ಮತದಾನ' ಕಾದಂಬರಿಯ ಕಥನ ಕ್ರಿಯೆಯು ರಾಜಕೀಯ ವ್ಯವಸ್ಥೆಯಲ್ಲಿ ಮೌಲ್ಯ ಆದರ್ಶಗಳಿಗಿಂತಲೂ ತಂತ್ರವೇ ಮುಖ್ಯವೆಂಬುದನ್ನು ತೋರಿಸಿಕೊಟ್ಟಿದೆ ಎಂದು ಹೇಳಬಹುದು.

**************

## 'ವಂಶವೃಕ್ಷ'–ಕಥನಕ್ರಿಯೆ.

'ವಂಶವೃಕ್ಷ' ಎಸ್.ಎಲ್.ಭೈರಪ್ಪನವರಿಗೆ ಅತ್ಯಂತ ಜನಪ್ರಿಯತೆಯನ್ನು ತಂದುಕೊಟ್ಟಿರುವ ಕಾದಂಬರಿ. ವೈಚಾರಿಕತೆಯನ್ನು ಹಿನ್ನೆಲೆಯಾಗಿಟ್ಟುಕೊಂಡು ರಚನೆಗೊಂಡಿರುವ ಈ ಕಾದಂಬರಿಯ ಬಗ್ಗೆ ಸ್ವತಃ ಕಾದಂಬರಿಕಾರರೇ ಈ ರೀತಿಯಾಗಿ ಹೇಳಿಕೊಳ್ಳುತ್ತಾರೆ.–"ವ್ಯಕ್ತಿಯ ಮತ್ತು ಜನಜೀವನ ವಿಧಾನಕ್ಕೆ ಆಧಾರವಾಗಿರುವ ಕೆಲವೊಂದು ಮೌಲ್ಯಗಳ ಸಂಘಟನೆಯು ಕ್ರಮೇಣವಾಗಿ ಅಥವಾ ಒಮ್ಮಿಂದೊಮ್ಮೆಗೇ ಶಿಥಿಲವಾಗಿ ಹೊಸ ಮೌಲ್ಯಗಳ ಸಂಘಟನೆಯಲ್ಲಿ ವ್ಯಕ್ತಿಯ ಮತ್ತು ಸಮಾಜದ ಜೀವನವು, ಹೊಸ ವಿಧಾನದಲ್ಲಿ ರಚಿಸಲ್ಪಡುವ ಕಾಲವನ್ನು ಮನ್ವಂತರವೆಂದಾಗಲಿ, ಯುಗ ಸಂಧಿಕಾಲವೆಂದಾಗಲಿ ಕರೆಯಬಹುದು. ಈ ಮನ್ವಂತರ, ವ್ಯಕ್ತಿ ವ್ಯಕ್ತಿಗಳ ನಡುವೆ ವ್ಯಕ್ತಿ ಮತ್ತು ಸಮಾಜದ ನಡುವೆ, ವ್ಯಕ್ತಿಯ ಒಳಗೇ ಎರಡು ಪ್ರವೃತ್ತಿಗಳ ಅಥವಾ ಶ್ರದ್ಧೆಗಳ ನಡುವೆ ಘೋರವಾದ ಸಂಘರ್ಷವೇ ಉಂಟಾಗುತ್ತದೆ. ಇದು ವಾಸ್ತವವಾಗಿಯೂ ಮೌಲ್ಯಗಳ ನಡುವೆ ಆಗುವ ಸಂಘರ್ಷ. ---ಯುಗ ಸಂಧಿಕಾಲದಲ್ಲಿ ವ್ಯಕ್ತಿಯಾಗಲಿ, ಸಮಾಜವಾಗಲಿ ಹಳೆಯ ಮೌಲ್ಯಗಳಿಂದ ಪೂರ್ಣವಾಗಿ ಮುಕ್ತವಾಗಿರುವುದಿಲ್ಲ. ಹಾಗೆಯೇ, ಹೊಸ ಮೌಲ್ಯಗಳು ಜೀವನವನ್ನು ಅಸಂದಿಗ್ಧವಾಗಿ ನಡೆಸುವ ಮಟ್ಟಿಗೆ ಬೇರು ಬಿಟ್ಟಿರುವುದಿಲ್ಲ. ಕೆಲವು ವ್ಯಕ್ತಿಗಳಲ್ಲಿ ಹೊಸ ಮೌಲ್ಯಗಳ ಗಾಳಿ ಬೀಸಿ ಹಳೆಯದರ ಬಗೆಗೆ ಶ್ರದ್ಧೆಯು ದುರ್ಬಲವಾಗಿರುತ್ತದೆ. ಅಂಥವರು ಇನ್ನೂ ಹಳೆಯದರ ಪ್ರಭಾವದಲ್ಲಿಯೇ ಇರುವ ವ್ಯಕ್ತಿಯೊಡನೆ ಆಗಲಿ ಸಮಾಜದೊಡನೆ ಆಗಲಿ ಸಂಘರ್ಷದಲ್ಲಿ ಬೀಳುವುದು ಅನಿವಾರ್ಯ, ಅಥವಾ ತನ್ನ ಹಳೆಯ ಶ್ರದ್ಧೆಯಿಂದ ಪೂರ್ಣವಾಗಿ ಮುಕ್ತನಾಗದೆ ಹೊಸದನ್ನು ಅನುಸರಿಸಲು ಹೊರಟಾಗ ವ್ಯಕ್ತಿಯ ಒಳಗೇ ಸಂಘರ್ಷವು ಅನಿವಾರ್ಯವಾಗುತ್ತದೆ"[೧].

---

[೧] 'ವಂಶವೃಕ್ಷ' ಮುನ್ನುಡಿ – ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೭೭

ಇಂತಹ ವೈಚಾರಿಕವಾದ ಹಿನ್ನೆಲೆಯಿಂದ ರೂಪುಗೊಂಡಿರುವ 'ವಂಶವೃಕ್ಷ' ಕಾದಂಬರಿಯ 'ಶಿಲ್ಪ'ವನ್ನು ಪರಿಶೀಲಿಸುವುದಾದರೆ ಈ ಕಾದಂಬರಿಯಲ್ಲಿ ಎರಡು ಕತೆಗಳು ಬರುತ್ತದೆ. ಅವುಗಳು ಸಮಾನಾಂತರ ರೇಖೆಯಲ್ಲಿ ಚಲಿಸುತ್ತಿರುತ್ತವೆ. ಮೊದಲ ಕತೆ ಕಾತ್ಯಾಯಿನಿಯ ಮೊದಲನೆಯ ಗಂಡ ನಂಜುಂಡನ ಮೃತ್ಯುವಿನಿಂದ ಪ್ರಾರಂಭವಾಗಿ ಅವಳ ಮೃತ್ಯುವಿನಿಂದ ಕೊನೆಗೊಳ್ಳುವುದು, ಇಲ್ಲಿ ಕಾತ್ಯಾಯಿನಿ ಮತ್ತು ಶ್ರೀನಿವಾಸ ಶ್ರೋತ್ರಿ ಇವರುಗಳು ಪ್ರಮುಖ ಪಾತ್ರಧಾರಿಗಳಾಗಿರುತ್ತಾರೆ. ನಂಜುಂಡನ ಮೃತ್ಯವಿನಿಂದ ಕಾತ್ಯಾಯಿನಿಯ ಜೀವನದಲ್ಲಿ ದ್ವಂದ್ವ ಸುರುವಾಗುತ್ತದೆ. ಅದೇ ದ್ವಂದ್ವಭಾವ ಪ್ರಾರಂಭವಾಗುತ್ತದೆ. ಈ ದ್ವಂದ್ವಭಾವದ ಸಂತಾನಕ್ಕೆ ಅವಳು ಬಲಿಯಾಗುತ್ತಾಳೆ. "ಅವನ ಸ್ವಭಾವ ಬೇರೆ ಅಂತ ನಾನು ಕೇಳಿದೀನಿ. ಹಿಂದೆ ಅವನು ಸರ್ಕಾರಿ ಕಾಲೇಜಿನಲ್ಲಿ ಓದುತ್ತಿದ್ದಾಗ ಇವಳು ತನ್ನ ತಾಯಿ ಅಂತ ಅವನಿಗೆ ತಿಳಿಯಿತು. ಇವಳೇ ಅವನನ್ನು ಮನೆಗೆ ಕರಕೊಂಡು ಬಂದಿದ್ದಳು. ಮತ್ತೇ ಇವಳೊಡನೆ ಸಂಬಂಧ ಬೆಳೆಯಬಾರದು ಅಂತ ಮತ್ತು ಪ್ರಾಯಶಃ ತಿರಸ್ಕಾರದಿಂದಲೂ ಅವನು ಆ ಕಾಲೇಜನ್ನೇ ಬಿಟ್ಟು ಬೇರೆ ಕಾಲೇಜಿಗೆ ಸೇರಿದ ಸಂಗತಿ ನಿಮಗೆ ಗೊತ್ತಿರಬಹುದು". "..ಇವಳಿಗೆ ನಡುವೆ ಮೂರು ಸಲ ಗರ್ಭಪಾತವಾಯಿತು. ನನ್ನ ಪಾಪಕ್ಕಾಗಿಯೇ ಹೀಗಾಯಿತು ಎಂಬ ಪ್ರಜ್ಞೆ ಇವಳಲ್ಲಿ ಬೆಳೆಯಿತು. ಕೊನೆಗೆ ಮಗನಿಂದಲೂ ತಿರಸ್ಕೃತಳಾದ ಮೇಲೆ ಪೂರ್ತಿ ನಿರಾಶಳಾದಳು. ಆಗಿನಿಂದಲೇ ಅವಳ ಸುಪ್ತಪ್ರಜ್ಞೆ ಸಾಯುವ ಸಂಕಲ್ಪ ಮಾಡಿಕೊಂಡಿತೇನೋ"[೨].-ಈ ಮಾತುಗಳು ಆಕೆಯ ದ್ವಂದ್ವ ಭಾವಕ್ಕೆ ಹಿಡಿದ ಕೈಕನ್ನಡಿಯಾಗಿದೆ.

ಮೊದಲ ಕತೆಯಲ್ಲಿ ಬರುವ ಇನ್ನೊಂದು ಪ್ರಮುಖವಾದ ಪಾತ್ರ ಶ್ರೀನಿವಾಸ ಶ್ರೋತ್ರಿಯವರದ್ದು. ಶ್ರೀನಿವಾಸ ಶ್ರೋತ್ರಿಯವರ ಪಾತ್ರದ ದೃಷ್ಟಿಯಿಂದ

---

[೨] 'ವಂಶವೃಕ್ಷ' ಪುಟ ೪೫೮. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೬೭.

ನಂಜುಂಡನ ಮೃತ್ಯು ಎಂದರೆ ಒಂದು ವಿಧದಲ್ಲಿ ಅವರ ಮೊದಲ ಪರೀಕ್ಷೆ. ಹಾಗೆಯೇ ಕಾತ್ಯಾಯಿನಿಯ ಮೃತ್ಯು ಶ್ರೋತ್ರಿಯವರ ಕೊನೆಯ ಪರೀಕ್ಷೆ ಹಾಗೂ ಅವರ ಅವಸಾನಕ್ಕೂ ಗಂಟುಹಾಕಲಾಗಿದೆ.

ಕಾದಂಬರಿಯಲ್ಲಿ ಬರುವ ಎರಡನೆಯ ಕತೆ ಡಾ॥ ಸದಾಶಿವರಾಯರ ಬೌದ್ಧಿಕ ಹಂಬಲದಿಂದ ಪ್ರಾರಂಭವಾಗಿ ಅವರ ಕಾರ್ಯದ ಮುಕ್ತಾಯ, ಅವರ ಮೃತ್ಯು ಹಾಗೂ ಅವರ ಗ್ರಂಥ ನಿರ್ಮಾಣಕ್ಕೆ ನೆರವಾದ ಕರುಣಾರತ್ನೆಯ ಪ್ರಸ್ಥಾನದಿಂದ ಕೊನೆಗೊಳ್ಳುತ್ತದೆ. ಹೀಗೆ ಒಂದಕ್ಕೊಂದು ಪೂರಕವಾದ ಕಾತ್ಯಾಯನಿಯ ದ್ವಂದ್ವ ಭಾವ ಹಾಗೂ ಸದಾಶಿವರಾಯ ಕರುಣಾರತ್ನೆಯ ಪ್ರಸ್ಥಾನ ಈ ಎರಡೂ ಚೌಕಟ್ಟುಗಳ ನಡುವೆ ನಿಲ್ಲಿಸಿದ ಬೃಹತ್ ಹಂದರವನ್ನು ಭೈರಪ್ಪನವರು ಈ ಕಾದಂಬರಿಯಲ್ಲಿ ಕಡೆದಿದ್ದಾರೆ.

'ವಂಶವೃಕ್ಷ' ಕಾದಂಬರಿಯ 'ಶಿಲ್ಪ'ದ ಒಂದು ಪ್ರಮುಖ ವೈಶಿಷ್ಟ್ಯವೆಂದರೆ ಇಲ್ಲಿಯ ಘಟನೆಗಳನ್ನು ವ್ಯಂಗ್ಯಾತ್ಮಕವಾಗಿ ರಚಿಸಿದ್ದು. ಉತ್ಕಟವಾದ ವಂಶಪ್ರಜ್ಞೆ ಇದ್ದಂಥ ಶ್ರೀನಿವಾಸ ಶ್ರೋತ್ರಿಯರೇ ಆ ವಂಶದ ಸಂತಾನವಲ್ಲ. "....ತಾವು ಮೋಸದಿಂದ ದಕ್ಕಿಸಿಕೊಂಡ ಐಶ್ವರ್ಯವು ತಮ್ಮನಿಗೆ ಸೇರಬಾರದೆಂಬ ಏಕಮಾತ್ರ ದ್ವೇಷದಿಂದ ಅವರು ಈ ಅಪವಿತ್ರ ದಾರಿ ಹಿಡಿದರು. ಅದರ ಫಲವಾಗಿ ಅವರ ದ್ವೇಷಸಾಧನೆಯ ಛಲವನ್ನು ಉಳಿಸುವ ಆಧಾರವಾಗಿ ಹುಟ್ಟಿದ ಶಿಶು ನಾನು. ನನ್ನ ವಂಶವಾವುದು? ನನ್ನ ಹುಟ್ಟಿನ ಪಾವಿತ್ರ್ಯವೆಲ್ಲಿದೆ? ಶ್ರೋತ್ರಿಯರು ತಮ್ಮ ಮಾತಾಪಿತೃಗಳನ್ನು ತಿರಸ್ಕರಿಸುವ ಬದಲು ತಮ್ಮ ಹುಟ್ಟನ್ನು ತಾವೇ ಹಳಿದುಕೊಳ್ಳುತ್ತಿದ್ದರು"[೩]. "ಭೂಮಿಯ ಆಳವರಿಯದ ಗರ್ಭದಿಂದ ಹುಟ್ಟಿ ಮುಗಿಲಿನವರೆಗೂ ಬೆಳೆಯುತ್ತಿರುವ ವೃಕ್ಷವೊಂದರಲ್ಲಿ ತಾವು ಒಂದು ಕೊನೆ ಈಗ ಯಾರೋ ಆ ಕೊನೆಯನ್ನು ಕತ್ತರಿಸಿ ಹಾಕಿದರು. ಅದು ಅಂತರಿಕ್ಷದಿಂದ ಬೀಳುತ್ತಿದೆ. ಅಂತಹ ಘನವೂ ಭವ್ಯವೂ ಆದ ವೃಕ್ಷವು ಆ ಕೊನೆಯೊಡನೆ ತನಗೆ ಯಾವ

---

[೩] 'ವಂಶವೃಕ್ಷ' ಪುಟ ೪೦೨. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೭೭

ಸಂಬಂಧವೂ ಇಲ್ಲವೆಂಬ ಉಪೇಕ್ಷೆಯಿಂದ ಕ್ರೂರ ನೀರವತೆಯಿಂದ ನಿಂತಿದೆ. ನಾನೊಬ್ಬ ದಿಕ್ಕುಗಾಣದ ಅನಾಥ; ಅಪವಿತ್ರ ಉದ್ದೇಶಕ್ಕಾಗಿ ಅಪವಿತ್ರ ರೀತಿಯಲ್ಲಿ ಹುಟ್ಟಿದ ಶಿಶು. ದೇವರೇ, ಯಾವ ಜನ್ಮದ ನನ್ನ ಪಾಪಕ್ಕಾಗಿ ಈ ಅವಸ್ಥೆಯಲ್ಲಿ ನೀನು ನನ್ನನ್ನು ಸೃಷ್ಟಿಸಿದೆ"[೪]. ಶ್ರೋತ್ರಿಯುವರ ಹುಟ್ಟಿನ ಗರ್ಭದಲ್ಲಿ ಅಡಗಿರುವ ಈ ವ್ಯಂಗ್ಯವೇ ಇಡೀ ಕಾದಂಬರಿಯ ಹಿನ್ನೆಲೆಯಾಗಿ ನಿಂತು ಕಥಾ ಶಿಲ್ಪವನ್ನು ಕೆತ್ತಿನಿಲ್ಲಿಸುತ್ತದೆ.

ಡಾ॥ಸದಾಶಿವರಾಯ ಹಾಗೂ ರಾಜಾರಾಯ ಇವರು ತಮ್ಮ ಚಿಕ್ಕಪ್ಪ-ಕಿಟ್ಟಪ್ಪ ಶೋತ್ರಿಗಳ ಪುತ್ರರೆಂದು ತಿಳಿಯುವ ಹೊತ್ತಿಗೆ ಅವರಿಗೆ ಹೋಗಬೇಕಾದ ಆಸ್ತಿಯನ್ನೆಲ್ಲಾ ಶ್ರೀನಿವಾಸ ಶ್ರೋತ್ರಿಯರು ಬೇರೆಯವರಿಗೆ ದಾನಮಾಡಿ ಬಿಟ್ಟಿರುತ್ತಾರೆ.

ಇತಿಹಾಸ ಪ್ರಾಧ್ಯಾಪಕರಾದ ಡಾ॥ ರಾಯರಿಗೆ ನಮ್ಮ ಸುತ್ತ-ಮುತ್ತ ನಡೆದಿರುವ ಘಟನೆಗಳ ಪತ್ತೆಯೇ ಇರುವುದಿಲ್ಲ. ಶ್ರೀನಿವಾಸ ಶ್ರೋತ್ರೀಯರ ಮನೆಗೆ ಮೊದಲ ಬಾರಿ ಹೋದಾಗ ಅವರ ಮಗ ನಂಜುಂಡ ತೀರಿಕೊಂಡಿದ್ದು ಡಾ। ರಾಯರಿಗೆ ಗೊತ್ತಿರುವುದಿಲ್ಲ. ಊಟ ಮಾಡುವಾಗ ಡಾ. ರಾಯರು ಅಚಾನಕವಾಗಿ ಕೇಳಿದರು 'ಎಲ್ಲಿ, ನಂಜುಂಡ ಶ್ರೋತ್ರಿ ಕಾಣುವುದಿಲ್ಲವಲ್ಲ?', 'ಇಲ್ಲ ನಿಮ್ಮ ಶಿಷ್ಯನನ್ನು ಕಪಿಲೆ ತಗೊಂಡು ಬಿಟ್ಟಳು. ಹೋದ ಜೇಷ್ಠದಲ್ಲಿ ಕಾಲು ಜಾರಿ ಬಿದ್ದು ಬಿಟ್ಟ, ಮತ್ತೆ ದಡ ಸೇರಲಿಲ್ಲ'. ಡಾ. ರಾಯರಿಗೆ ಈ ಮಾತನ್ನು ಕೇಳಿ ಆಘಾತವಾಯಿತು. ಶ್ರೋತ್ರಿಯವರು ಹಾಸ್ಯಕ್ಕಾಗಿ ಎಂದೂ ಅಮಂಗಳ ಮಾತುಗಳನ್ನು ಆಡುವವರಲ್ಲ. ಆದರೂ ರಾಯರಿಗೆ ತಕ್ಷಣ ಈ ಮಾತನ್ನು ನಂಬುವುದು ಕಷ್ಟವಾಯಿತು. ಅವರು ಅವಾಕ್ಕಾಗಿ ಇವರ ಮುಖವನ್ನು ನೋಡುತ್ತಾ ಕುಳಿತರು. ಎರಡನೆಯ ಬಾರಿ ಶ್ರೋತ್ರಿಯವರ ಮನೆಗೆ ಹೋದಾಗ ಶ್ರೋತ್ರಿಯವರ ಹೆಂಡತಿ ಭಾಗೀರಥಮ್ಮ ತೀರಿಕೊಂಡಿದ್ದು ಡಾ. ರಾಯರಿಗೆ ಗೊತ್ತಿರುವುದಿಲ್ಲ.

---

[೪] 'ವಂಶವೃಕ್ಷ' ಪುಟ ೮೦೮. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೬೭

ತಾಯಿಯೆಂಬ ಅಧಿಕಾರದಿಂದ ಉತ್ಕಟ ಪ್ರೀತಿಯಿಂದ ಕಾತ್ಯಾಯಿನಿ ಚೀನಿಯನ್ನು ಮನೆಗೆ ಕರೆದೊಯ್ದರೆ ಆತ ಅವಳಿಂದ ಜಾರಿ ಹೋಗಿ ಬಿಡುತ್ತಾನೆ. ಮುಂದೆ ಅವರ ಒಪ್ಪಂದ ಆಗುವುದು ಅವಳ ಮರಣ ಶಯ್ಯೆಯ ಮೇಲೆಯೇ:

ಡಾ. ರಾಯರು ತಮ್ಮ ಇಡಿಯ ಜೀವನವನ್ನೇ ಸವೆಸಿ ಮಹದ್ಗ್ರಂಥಗಳನ್ನು ಬರೆದರೆ ಅವರ ಪುತ್ರನಾದ ಪೃಥ್ವಿಗೆ ಆ ಗ್ರಂಥಗಳಲ್ಲಿ ಅಭಿರುಚಿಯಿಲ್ಲದೇ ಇರುವುದು..... "ವಿದ್ವತ್ ಪ್ರಪಂಚಕ್ಕೆ ಕಾಣಿಕೆ ನೀಡಲೋಸುಗ ತಮ್ಮ ಜೀವನವನ್ನು ಧಾರೆ ಎರೆದು ಸೃಷ್ಟಿಸಿರುವ ತಂದೆಯ ಗ್ರಂಥದಲ್ಲಿ ಮಗನಿಗೆ ಅಭಿರುಚಿಯಿಲ್ಲ! ಅವನ ವ್ಯಾಸಂಗದ ವಿಷಯವೇ ಬೇರೆ ನಮ್ಮ ಕೆಲಸ ನಮ್ಮ ಮುಂದಿನ ಪೀಳಿಗೆಗಾಗಿ ಎನ್ನುತ್ತೇವೆ. ಈ ನಮ್ಮ ಪೀಳಿಗೆ ಯಾವುದು?"[೫]. ಹೀಗೆ ಘಟನೆಗಳ ಹಂದರದಲ್ಲಿ ಸುಳಿದಾಡುವ ಈ ವ್ಯಂಗ್ಯ, ಕತೆಯನ್ನು ಕುತೂಹಲಕಾರಿಯಾಗಿರಿಸಿದೆ.

ಇನ್ನು ಈ ವ್ಯಂಗ್ಯಾತ್ಮಕ ಘಟನೆಗಳ ಜೊತೆಗೆ ಕತೆಯ ಹಂದರದಲ್ಲಿ ಸಾಕಷ್ಟು ಸಮಾನಾಂತರ ಹಾಗೂ ಪರಸ್ಪರ ವಿರುದ್ಧ ಘಟನೆಗಳನ್ನು ಅಕ್ಕಪಕ್ಕದಲ್ಲಿಟ್ಟು, ರಚಿಸಿರುವುದು ಕೂಡ ಭೈರಪ್ಪನವರ ವಾಸ್ತು-ಕೌಶಲ್ಯವನ್ನು ಸಾರಿ ಹೇಳುವಂತಿದೆ. ಉದಾಹರಣೆಗೆ ಇಂಗ್ಲೆಂಡಿನಿಂದ ಬಂದ ರಾಜಾರಾಯ ಕಾತ್ಯಾಯನಿಗೆ ಹೊಸ ಜೀವನವನ್ನು ಕೊಡುತ್ತಾನೆ: ಅದೇ ರೀತಿ ಇಂಗ್ಲೆಂಡಿನಿಂದ ಬಂದ ಕರುಣಾರತ್ನೆ ಡಾ.ಸದಾಶಿವರಾಯರ ಜೀವನದಲ್ಲಿ ಹೊಸ ಚೈತನ್ಯ ನಿರ್ಮಾಣ ಮಾಡುತ್ತಾಳೆ. ಕಾತ್ಯಾಯನಿಯ ಲಗ್ನದ ವಿಷಯದ ದ್ವಂದ್ವವೂ ಶ್ರೋತ್ರೀಯರ ತಾರುಣ್ಯದ ದ್ವಂದ್ವವೂ ಸಹಜ ಧರ್ಮವೆನ್ನುವುದೇ ಧರ್ಮವಲ್ಲ' ಎಂಬ ತತ್ವದ ಹಿನ್ನೆಲೆಯಲ್ಲಿ ಅಕ್ಕ-ಪಕ್ಕದಲ್ಲಿಟ್ಟಿದ್ದಾರೆ. ಶ್ರೋತ್ರೀಯರು ದಾಂಪತ್ಯದ ಒಂದು ಸಂದಿಗ್ಧ ಸಂದರ್ಭದಲ್ಲಿ

---

[೫] 'ವಂಶವೃಕ್ಷ' ಪುಟ ೪೩೯. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೬೭.

ಬ್ರಹ್ಮಚರ್ಯ ಪಾಲಿಸಿದರೆ, ಅಂಥದೇ ಸಂದರ್ಭದಲ್ಲಿ ರಾಜ ಆಪರೇಶನ್ ಮಾಡಿಸಿ ಕೊಳ್ಳುತ್ತಾನೆ. (ಇಲ್ಲಿ ಸನಾತನ ಮನೋಧರ್ಮ ಬ್ರಹ್ಮಚರ್ಯೆ ಆಧುನಿಕ ಮನೋಧರ್ಮ ಆಪರೇಶನ್) ಕಾತ್ಯಾಯನಿ ಮನೋರೋಗದಿಂದ ಸಾವನಪ್ಪಿದರೆ ಡಾ। ರಾಯರು ಹೃದಯ ರೋಗದಿಂದ ಸಾವನಪ್ಪುತ್ತಾರೆ.

ಹೀಗೆ ಕೌಟುಂಬಿಕವಾದ ಪಾತಳಿಯ ಮೇಲೆ ನಡೆಯುವ ವಂಶವೃಕ್ಷ ಕಾದಂಬರಿಯಲ್ಲಿ, ಕಾಯಿಲೆ ಮತ್ತು ಶ್ರಾದ್ಧಗಳ ಸಂದರ್ಭಗಳನ್ನು ಭೈರಪ್ಪನವರು ಅತ್ಯಂತ ಜಾಣಾಕ್ಷತನದಿಂದಲೂ ಅರ್ಥಪೂರ್ಣವಾಗಿಯೂ ರಚಿಸಿದ್ದಾರೆ. ಕತೆಯ ಪ್ರಾರಂಭದಲ್ಲಿ ಚೀನೀಗೆ ಜ್ವರ ಬಂದಾಗ ಶ್ರೋತ್ರಿಯರ ವಂಶಪ್ರಜ್ಞೆಯ ತೀಕ್ಷ್ಣತೆ ನಮಗೆ ಗೊತ್ತಾಗುವುದು, ". . . ಬೇಡ ಅವನು ನನ್ನ ತೊಡೆ ಮೇಲೆ ಇರಲಿ ಎಂದು ಸೊಸೆಯ ಕಡೆ ತಿರುಗಿ ಹೇಳಿದರು. ದಿವಾನ್ ಖಾನೆಯ ಗಡಿಯಾರಾನ ಇಲ್ಲೇ ತಗೊಂಡು ಬಾ ಎರಡು ಗಂಟೆಗೊಂದಾವರ್ತಿ ಮಾತ್ರೆ ತೇಯ್ದು ಹಾಕಬೇಕು. ನನಗೆ ಕಾಲಕ್ಕೆ ಸರಿಯಾಗಿ ಜ್ಞಾಪಿಸು, ಅದನ್ನ ಯಾವ ಹದದಲ್ಲಿ ಒಂದೂವರೆ ಸುತ್ತು ತೇಯಬೇಕು ಅನ್ನೋದು ನಿಮಗೆ ತಿಳಿಯುಲ್ಲ. ನಾನು ತೇಯ್ದು ನಾಲಗೆಗೆ ಲೇಪಿಸ್ತೀನಿ"[೬]. ಶ್ರೋತ್ರಿಯವರು ಸನಾತನ ಧರ್ಮದಲ್ಲಿ ಜೀವಿಸುತ್ತಿದ್ದರು. ಅವರ ಪರಿಪೂರ್ಣ ವಿಶ್ವಾಸದ ಪ್ರಕಾರ "ಮನುಷ್ಯನು ಮದುವೆಯಾಗುವುದು ಗೃಹಸ್ಥ ಧರ್ಮಕ್ಕಾಗಿ. ಗೃಹಸ್ಥನಾಗುವುದು ಈ ಲೋಕದಲ್ಲಿರುವ ತನ್ನ ಕರ್ತವ್ಯಗಳನ್ನು ಪೂರೈಸುವುದಕ್ಕಾಗಿ, ನಂತರ ಮಕ್ಕಳಾಗುವುದು ವಂಶವೃಕ್ಷದ ಕೊನೆ ಮುಂದುವರಿಯುವುದಕ್ಕಾಗಿ ಸಂತಾನವಿಲ್ಲದೆ ಸಾಯುವ ಮನುಷ್ಯ ವಂಶವೃಕ್ಷದ ಕೊನೆಯ ಮಗನಾಗಿ ತನ್ನಿಂದ ಮುಂದೆ ಬರೀ ಶೂನ್ಯವನ್ನು ಬಿಟ್ಟು ಸಾಯಬೇಕು. ಪಿತೃಗಳಿಂದ ಪಡೆದ ಈ ಜೀವವು ಪಿತೃ-ಋಣ ತೀರಿಸುವುದು ತನ್ನ ಸಂತಾನದ ಮೂಲಕವೇ. ಶ್ರೋತ್ರಿಯ ವಂಶವೆಂಬುದು ಶ್ರೋತೃಗಳಷ್ಟೇ ಪುರಾತನವಾದುದು"[೭].

---

[೬] 'ವಂಶವೃಕ್ಷ' ಪುಟ ೫೮. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೬೭.
[೭] 'ವಂಶವೃಕ್ಷ' ಪುಟ ೫೯. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೬೭.

ಅದೇ ಮುಂದಿನ ಅಧ್ಯಾಯದಲ್ಲಿ ಪೃಥ್ವಿಗೆ ಜ್ವರ ಬಂದಾಗ ಡಾ. ಸದಾಶಿವರಾಯರ ಕೌಟುಂಬಿಕ ಜೀವನದೊಳಗಿನ ಅನಾಸ್ಥೆಯ ಪರಿಚಯ ನಮಗಾಗುತ್ತದೆ. ಡಾ. ರಾಯರು ರತ್ನೆಯೂ ಪ್ಲೂದಿಂದ ಕಾಯಿಲೆ ಬಿದ್ದು ಆಸ್ಪತ್ರೆಯಲ್ಲಿರುವ ಸಂದರ್ಭವನ್ನು ಡಾ.ರಾಯರನ್ನೂ ನಾಗಲಕ್ಷ್ಮೀಯನ್ನು ಸಮೀಪ ತರಲು ಉಪಯೋಗಿಸಿದ್ದಾರೆ. ಹೀಗೆ ಘಟನೆಗಳ ನಿರ್ಮಿತಿಯಲ್ಲಿ ಕಾಯಿಲೆಯನ್ನು ಉಪಯೋಗಿಸಿಕೊಳ್ಳುವ ರೀತಿಯೂ ವಿಶಿಷ್ಟವಾಗಿದೆ.

'ವಂಶವೃಕ್ಷ' ಕಾದಂಬರಿಯ ಶಿಲ್ಪದಲ್ಲಿ ಕೇಂದ್ರೀಯವಾಗಿ ಉಪಯೋಗಿಸಿಕೊಂಡ ಸಂದರ್ಭಗಳಲ್ಲಿ ಶ್ರಾದ್ಧದ ಸಂದರ್ಭವೂ ಕೂಡ ಒಂದು. ಕಾತ್ಯಾಯಿನಿ ಚೀನಿಯನ್ನು ಕರೆದುಕೊಂಡು ಬರಬೇಕೆಂದು ನಂಜನಗೂಡಿಗೆ ಹೋದ ದಿನ ಅವಳ ಮೊದಲ ಗಂಡನ ಶ್ರಾದ್ಧ ನಡೆಯುತ್ತಿರುತ್ತದೆ. ಆ ಶ್ರಾದ್ಧದಲ್ಲಿ ಮಡಿಯುಟ್ಟು ಭಾಗವಹಿಸಿದ ಅವಳ ಮಗ ಚೀನಿ 'ಅಮ್ಮಾ ಇವತ್ತು ಅಣ್ಣನ ತಿಥಿ, ನಿಂಗೊತ್ತಿಲ್ವಾ? ನಂದು ಮಡಿ ನಿನ್ ಮುಟ್ಟಿಸ್ಕೊಳೋಲ್ಲ' ಎಂದು ಹೇಳುತ್ತಾನೆ, ಊಟ ಚರ್ಚೆಯಾದ ನಂತರ ಕಾತ್ಯಾಯಿನಿ ಚೀನಿಯನ್ನು ಅಲ್ಲಿಯೇ ಬಿಟ್ಟು ಮೈಸೂರಿಗೆ ಮರಳುತ್ತಾಳೆ, ಮುಂದೆ ಶ್ರೀನಿವಾಸ ಶ್ರೋತ್ರಿಯರು ತಮ್ಮ ಜನ್ಮದ ರಹಸ್ಯ ತಿಳಿದ ದಿನವೇ ತಮ್ಮ ತಂದೆ ನಂಜುಂಡ ಶ್ರೋತ್ರಿಯ ಶ್ರಾದ್ಧ ಮಾಡಬೇಕಾಗಿ ಬರುತ್ತದೆ. ಆಗ ಅವರ ಇಡಿಯ ಜೀವನದ ವ್ಯಂಗ್ಯವೇ ನಮ್ಮ ಕಣ್ಣ ಮುಂದೆ ಸ್ಪಷ್ಟವಾಗಿ ನಿಲ್ಲುತ್ತದೆ. ಹೀಗೆ ಶ್ರಾದ್ಧದ ಈ ಎರಡೂ ಸಂದರ್ಭಗಳು ಕಾದಂಬರಿಯ ಸಂವಿಧಾನದ(ಶಿಲ್ಪದ) ಉಚ್ಚಾಂಕಗಳೆಂಬುದು ನಿರ್ವಿವಾದ.

'ವಂಶವೃಕ್ಷ'ದ ವಸ್ತುವಿನಲ್ಲಿ ವಿಜೃಂಬಿಸುವ ವೈಚಾರಿಕತೆಗಿಂತ ಕಾದಂಬರಿಯ 'ರಚನೆ–ಶಿಲ್ಪ'ಗಳಲ್ಲಿ ಕಂಡು ಬರುವ ವೈಚಾರಿಕತೆ ಶ್ರೇಷ್ಠವಾಗಿದೆ

ಎನ್ನಬಹುದು. ವಸ್ತುವಿನಲ್ಲಿಯ ವೈಚಾರಿಕತೆ ತೀರಾ ತೆಳುವಾದುದು. ಈ ಸಂಧಿಕಾಲದ ಸಂಕೀರ್ಣ ಸಮಸ್ಯೆಗಳನ್ನು ಎದುರಿಸುವ ಶಕ್ತಿ ಅದರಲ್ಲಿಲ್ಲ. ಹಳೆಯ ಮೌಲ್ಯಗಳನ್ನು ಹೊಸ ಸಂದರ್ಭದಲ್ಲಿ ಪರೀಕ್ಷಿಸಿ ಅವುಗಳ ನಿಜವಾದ ಸತ್ವವನ್ನು ಪ್ರದರ್ಶಿಸುವ ಅಥವಾ ಹೊಸಮೌಲ್ಯಗಳ ಗಹನತೆ ಸಂಕೀರ್ಣತೆ ಹಾಗೂ ಅದರ ವೈಶಿಷ್ಟ್ಯಪೂರ್ಣತೆಯನ್ನು ಕಂಡು ಹಿಡಿಯುವಂತಿಲ್ಲ. ಆದರೆ ಭೈರಪ್ಪನವರ ವೈಚಾರಿಕ ಉದ್ದೇಶಕ್ಕಾಗಿ ಎಷ್ಟು ಕತೆ ಬೇಕೋ ಅಷ್ಟನ್ನೇ ತೆಗೆದುಕೊಂಡು ಕಾದಂಬರಿ ರಚನೆ ಮಾಡುತ್ತಾರೆ. ಈ ರಚನಾಕಾರ್ಯವನ್ನು ಅವರು ಅತ್ಯಂತ ಸುಂದರ ಹಾಗೂ ಸಮರ್ಪಕವಾಗಿ ಮಾಡಿರುತ್ತಾರೆ. ಆದ್ದರಿಂದಲೇ ಓದುಗನಿಗೆ ಅವರ ಕಾದಂಬರಿಗಳು ಬಹಳ ಹಿಡಿಸಿವೆ. 'ರಚನೆ-ಶಿಲ್ಪ'ಗಳೊಳಗಿನ ಜಾಣ್ಮೆ ಕೌಶಲ್ಯಗಳಿಗೆ ಮಾರುಹೋಗಿ ವಸ್ತು ಪಾತ್ರಗಳಿಗೂ ಗಹನತೆಯನ್ನು ತಂದುಬಿಡುತ್ತಾರೆ. ಇದು ಭೈರಪ್ಪನವರ ಜನಪ್ರಿಯತೆಯ ಗುಟ್ಟು.

******************

## 'ಜಲಪಾತ'–ಕಥನಕ್ರಿಯೆ.

ಎಸ್.ಎಲ್.ಭೈರಪ್ಪನವರ ವಿಶಿಷ್ಟವಾದ ಕಾದಂಬರಿ ಕೃತಿ ಇದು. ಮೊತ್ತ ಮೊದಲು ಭೈರಪ್ಪನವರು ಪ್ರತೀಕಗಳನ್ನು ಆಧರಿಸಿಕೊಂಡು ರಚಿಸಿರುವ ಕೃತಿ ಇದು. ಮಾನವ ಜೀವನ ನೈಸರ್ಗಿಕ ಹಾಗೂ ಅನೈಸರ್ಗಿಕ ಪ್ರವೃತಿಗಳ ನಡುವಿನ ಘರ್ಷಣೆಯೇ ಈ ಕಾದಂಬರಿಯ ವಸ್ತು. ಅಂದರೆ ಸಂಪ್ರದಾಯಬದ್ಧ ಜೀವನ ದೃಷ್ಟಿಯು ಅನಿವಾರ್ಯವಾಗಿ ಆಧುನಿಕ ಪ್ರಜ್ಞೆಗೆ ತಲೆಬಾಗಬೇಕಾದ ದುರಂತವು ಈ ಕಾದಂಬರಿಯ ಕತೆ.

ಮುಂಬೈ ಪ್ರದೇಶವನ್ನು ಕಾದಂಬರಿಯ ಕೇಂದ್ರ ಪರಿಸರವನ್ನಾಗಿರಿಸಿ-ಕೊಂಡಿರುವ ಕಾದಂಬರಿಕಾರರು, ಅಲ್ಲಿ ತಮ್ಮ ವಿಚಾರಗಳಿಗೆ ತಕ್ಕುದಾದ ಪಾತ್ರಗಳನ್ನಿಟ್ಟು, ಸಂಗೀತ, ಚಿತ್ರಕಲೆಗಳನ್ನು ಮಾಧ್ಯಮವನ್ನಾಗಿಯೂ, ಜೋಗದ ಜಲಪಾತ, ಕಾವಂಟಿಪುರದ ಸೂಳೆಗೇರಿ, ಬಾಂದ್ರಾದ ಕಸಾಯಿಖಾನೆ, ಸಮುದ್ರ ತರಂಗಗಳು ಇತ್ಯಾದಿಗಳನ್ನು ಪ್ರತೀಕಗಳನ್ನಾಗಿ ಬಳಸಿಕೊಂಡು ಕಾದಂಬರಿಗಳನ್ನು ರಚಿಸಿರುತ್ತಾರೆ.

ಈ ಕಾದಂಬರಿಯ ಪ್ರಧಾನ ಪಾತ್ರಗಳು ಶ್ರೀಪತಿ ಹಾಗೂ ವಸುಂಧರೆ ಇವರಿಬ್ಬರೂ ಗ್ರಾಮೀಣ ಪರಿಸರದಲ್ಲಿ ಬೆಳೆದ ಸಂವೇದನಾಶೀಲ ವ್ಯಕ್ತಿಗಳು. ದುಡಿಮೆಗಾಗಿ ಶ್ರೀಪತಿ ಮಡದಿಯಾದ ವಸುಂಧರೆಯೊಂದಿಗೆ ಮುಂಬೈಗೆ ಬಂದು ನೆಲಸುತ್ತಾನೆ. ಆದರೆ ಕೈಗಾರೀಕರಣಗೊಂಡ ಮುಂಬೈ ನಗರದಲ್ಲಿ ಹಣ ಸಂಪಾದನೆ ಸಾಧ್ಯವೇ ಹೊರತು, ವ್ಯಕ್ತಿಯ ಚೇತನವನ್ನು ತಣಿಸುವ ಕಲಾಸಿದ್ಧಿ ಸಾಧ್ಯವಿಲ್ಲ ಎಂದು ಗಂಡ-ಹೆಂಡಿರಿಬ್ಬರೂ ಅರಿತುಕೊಳ್ಳುತ್ತಾರೆ. ಒಮ್ಮೆ ಜೋಗ ಜಲಪಾತಕ್ಕೆ ಹೋದಾಗ ಕೃತ್ರಿಮ ಬದುಕನ್ನು ಬಾಳುತ್ತಿರುವ ತಮಗೆ ಕಲಾಸಿದ್ಧಿ ಸಾಧ್ಯವಾಗದೇ ಇರುವುದಕ್ಕೆ ಸೃಷ್ಟಿಯ ನಿರಂತರ ಲಯದಿಂದ ತಾವು ದೂರವಾಗಿರುವುದೇ ಕಾರಣ ಎಂದು ತಿಳಿದುಕೊಳ್ಳುತ್ತಾರೆ. ಕಲಾಸಿದ್ಧಿ

ಜನನಿಬಿಡ ಮುಂಬೈಯಿಯ ಕೃತಕ ಜೀವನದಲ್ಲಿ ಸಾಧ್ಯವಿಲ್ಲವೆಂದು ಅರಿವಾಗಿ ಗಂಡ-ಹೆಂಡತಿ ಇಬ್ಬರೂ ಹಳ್ಳಿಗೆ ಬಂದು ನೆಲೆಸಬಯಸುತ್ತಾರೆ.

ತನ್ನ ಹಳ್ಳಿಗೆ ಮರಳಿ ತನ್ನದೆಂದಿರುವ ಜಮೀನನ್ನು ತೋಟವನ್ನು ಸಾಗುವಳಿ ಮಾಡಿ ಹೆಂಡತಿ-ಮಕ್ಕಳ ಜೊತೆಗೆ ಮುಕ್ತ ಜೀವನವನ್ನು ನಡೆಸಬಹುದು. ಜೊತೆಗೆ ಕಲೆಯ ಸೌಂದರ್ಯವನ್ನು ಮತ್ತು ಸಂಗೀತದ ಲಯವನ್ನು ಆ ಜೀವನದಲ್ಲಿ ಹೊಂದಿಸಿಕೊಳ್ಳಬಹುದು. ಅದರಂತೆ ಶ್ರೀಪತಿಯ ಸಂಸಾರ ಹಳ್ಳಿಗೇನೋ ಬರುತ್ತದೆ. ಆದರೆ ಅಲ್ಲಿಯ ಬದುಕು ಬೇರೆಯ ರೀತಿಯಲ್ಲಿ ದುಸ್ತರವಾದುದು, ಹಿಂದಿನ ಕಾಲದ ನಿಷ್ಠೆ, ವಿಶ್ವಾಸ, ಔದಾರ್ಯ, ಕ್ರಿಯಾತ್ಮಕತೆ ಮತ್ತು ಪ್ರಾಮಾಣಿಕತೆಗಳು ಬರೇ ಹಳ-ಹಳಿಕೆಯ ಮೌಲ್ಯಗಳಾಗುತ್ತವೆಯೇ ಹೊರತು, ವಾಸ್ತವತೆಯಲ್ಲಿ ಅದ್ಯಾವುದರ ಸುಳಿವೂ ಇರುವುದಿಲ್ಲ. ಈ ಪರಿಸ್ಥಿತಿಯಲ್ಲಿ ನಾಯಕ ಕೂಡಿಟ್ಟಿದ್ದ ರೊಕ್ಕವೆಲ್ಲಾ ಕರಗಿ ಹೋಗಿರುತ್ತದೆ. ಬದಲಾದ ಹಳ್ಳಿಯೂ ಮುಂಬಯಿಯಂಥದೇ ಎಂದು ಕೊಳ್ಳುತ್ತಾರೆ. ಒಮ್ಮೆ ಕೊಂಡಿ ತಪ್ಪಿದ ಬದುಕಿಗೆ ಮತ್ತೇ ಹೊಂದಿಕೊಳ್ಳಲಾಗದೆ ಅಸಹಾಯಕರಾಗಿ ಮುಂಬೈಗೆ ಹಿಂತಿರುಗುತ್ತಾರೆ.

ಹೀಗೆ ಈ ಕಾದಂಬರಿಯ ಕಥನ ಕ್ರಿಯೆಯು ಆವರ್ತನ ಪ್ರಕ್ರಿಯೆಯಲ್ಲಿ ಸಾಗುತ್ತದೆ. ಉದ್ಯಮೀಕರಣವು ಸಂಪೂರ್ಣವಾಗಿ ತನ್ನ ವಶಕ್ಕೆ ತೆಗೆದುಕೊಂಡಿರುವ ಮುಂಬಯಿಗೆ ಎಲ್ಲ ರೈಲೂ ಹೋಗುವುದೆ ಹೊರತು ಅಲ್ಲಿಂದ ಯಾವುದೂ ಹಿಂತಿರುಗುವುದಿಲ್ಲ. ಹಾಗೆ ಹಿಂತಿರುಗಿದರೂ ಮತ್ತೆ ಅಲ್ಲಿಗೆ ತಲುಪಬೇಕಾಗುತ್ತದೆ. ಇಂಥದೊಂದು ಆವರ್ತನವನ್ನು 'ಜಲಪಾತ' ಕಾದಂಬರಿಯಲ್ಲಿ ಕಾದಂಬರಿಕಾರರು ತಂದಿರುತ್ತಾರೆ. ಈ ಕಾದಂಬರಿಯಲ್ಲಿ ೩ ಉತ್ತಮ ಪುರುಷದ ನಿರೂಪಣೆ ಇದೆ. ಕಾದಂಬರಿಯ ನಾಯಕ-ನಾಯಕಿಯರು ತಂತಮ್ಮ ಸರದಿಯ ಪ್ರಕಾರ ಆತ್ಮ ನಿವೇದನೆಗಳನ್ನು ಮಾಡಿಕೊಳ್ಳುತ್ತಾ ಹೋಗುತ್ತಾರೆ ". . . .ನಾನು ಮೊದಲು ಅವಳನ್ನು

ಎಷ್ಟು ಚೈತನ್ಯಪೂರ್ಣವಾಗಿ ಪ್ರೀತಿಸುತ್ತಿದ್ದೆ ! ಅವಳನ್ನುಳಿದು ಮತ್ತೆ ಯಾರನ್ನೂ ನಾನು ಪ್ರೀತಿಸುತ್ತಿರಲಿಲ್ಲ. ಉಳಿದವರ ಮೇಲೆ ನನಗೆ ಸ್ನೇಹವಿರಬಹುದು ಅಂತಃಕರಣವಿರಬಹುದು, ಮಮತೆ ಇರಬಹುದು. ಆದರೆ ಯಾರ ಮೇಲೂ ನನ್ನ ಪ್ರೇಮ ಇರಲಿಲ್ಲ"[೧]- ಉತ್ತಮ ಪುರುಷದ ಪ್ರಯೋಗಕ್ಕೆ ಈ ಮಾತುಗಳು ಸಾಕ್ಷಿಯನ್ನು ಒದಗಿಸುತ್ತವೆ.

'ಜಲಪಾತ' ಕಾದಂಬರಿಯ ಕಥನ ಕ್ರಿಯೆಯು ಮೂರು ಬಗೆಯ ಪಾತ್ರಗಳಿಂದ ಕೂಡಿರುತ್ತದೆ.

i) ರೊಮ್ಯಾಂಟಿಕ್ ದೌರ್ಬಲ್ಯಗಳುಳ್ಳ ವ್ಯಕ್ತಿಗಳೆಂದು ನಾವು ಇಂದು ಕರೆಯುತ್ತಿರುವ ಭಾವಜೀವಿಗಳು. ಈ ಗುಂಪಿನಲ್ಲಿ ಶ್ರೀಪತಿ, ವಸುಂಧರೆ, ಸುಧಾಬಾಯಿ, ಇವರೊಂದಿಗೆ ವಸುಂಧರೆಯ ತಂದೆ-ತಾಯಿ- ಈ ಮುಂತಾದ ಪಾತ್ರಗಳು ಸೇರುತ್ತವೆ.

ii) ವೈಜ್ಞಾನಿಕ ಯುಗದಲ್ಲಿ ಇರಲು ತೀರಾ ಲಾಯಕ್ಕಾಗಿರುವಂತಹ ಪಾತ್ರಗಳು- ಈ ಗುಂಪಿನಲ್ಲಿ ಸುಬ್ಬು, ಆತನ ಹೆಂಡತಿ, ಮತ್ರಾನಿ, ಕೊನೆಗೆ ರಜೆಲೊ ಸೇರುತ್ತಾರೆ.

iii)ಆಚಾರವೊಂದಾದರೆ ವಿಚಾರ ಮತ್ತೊಂದು ಎನ್ನುವ ರೀತಿಯ ಪಾತ್ರ, ಈ ಗುಂಪಿನಲ್ಲಿ ಡಾ॥ ನಾಡಗೌಡನನ್ನು ಸೇರಿಸಬಹುದು.

ಈ ಕಾದಂಬರಿಯಲ್ಲಿ ಮುಖ್ಯವಾದ ಕತೆ ಶ್ರೀಪತಿ ಹಾಗೂ ವಸುಂಧರೆ ದಂಪತಿಯವರದ್ದಾದರೆ ಅದರಲ್ಲಿ ತಂದಿರುವ ಡಾ॥ ನಾಡಗೌಡ ಮತ್ತು ಸುಧಾಬಾಯಿ ದಂಪತಿಯವರದು ಉಪಕತೆಯಾಗಿ ಬಂದಿರುತ್ತದೆ. ಜಾನುವಾರುಗಳ ಉತ್ತಮ ತಳಿಯನ್ನು ಕೃತಕವಾಗಿ ಬೆಳೆಸುವ ವಿಧಾನದಲ್ಲಿ ಸಂಶೋಧನೆ ನಡೆಸುತ್ತಿರುವ ಗೌಡರು ಮಾನವರ ಮೇಲೂ ಈ ರೀತಿಯ ಪ್ರಯೋಗವನ್ನು ಮಾಡಲು ಯೋಜಿಸುತ್ತಿರುವ ಒಬ್ಬ

---

[೧] 'ಜಲಪಾತ' ಪುಟ ೬೮. ಎಸ್.ಎಲ್.ಭೈರಪ್ಪ. ಪ್ರಕಾಶನ ಸಾಹಿತ್ಯ ಭಂಡಾರ. ೧೯೬೭.

ಭವಿಷ್ಯವಾದಿ. ಸುಧಾಬಾಯಿಯ ಸಂತಾನಾಪೇಕ್ಷೆಯನ್ನು ನಿರ್ಲಕ್ಷಿಸಿ ಆಕೆಯ ಮೇಲೂ ಇಂತಹ ಪ್ರಯೋಗವೊಂದನ್ನು ಕೈಕೊಳ್ಳುತ್ತೇನೆಂದು ಅವರು ಸೂಚಿಸಿದಾಗ ಆಕೆ ಕಂಗೆಟ್ಟು ಊರಿಗೆ ಮರಳಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಕಾದಂಬರಿಕಾರರು ಕಥನ ಕ್ರಿಯೆಯ ಸಂದರ್ಭದಲ್ಲಿ ವಸ್ತುವನ್ನು ಉದ್ದಕ್ಕೂ ಪ್ರತೀಕಗಳ ಮೂಲಕ ಬೆಳೆಸಿರುತ್ತಾರೆ. ಇಲ್ಲಿನ ನಾಯಕ-ನಾಯಕಿಯರು ಕೂಡ ಇಲ್ಲಿ ಪ್ರತೀಕಗಳಾಗಿ ಕಾಣಿಸಿಕೊಳ್ಳುತ್ತಾರೆ. ವಸುಂಧರಾ ಎಂದರೆ 'ಭೂದೇವಿ', ಶ್ರೀಪತಿ ಎಂದರೆ 'ಭೂಪತಿ'. ಭೂಪತಿ-ಭೂದೇವಿ ಈ ಹೆಸರುಗಳು ಪ್ರಕೃತಿಗೆ ಸೇರಿರುವಂಥದ್ದು. "ನಿಜವೆಂದರೆ ಅವಳದು ಮಣ್ಣಿನ ಬಣ್ಣ. ಮಣ್ಣಿನ ವಾಸ್ತವ ಬಣ್ಣವನ್ನು ಕಂಡಿರುವವರು ಯಾರು? ಒಂದು ದೇಶದಲ್ಲಿ ಕಪ್ಪಗೆ, ಮತ್ತೊಂದು ದೇಶದಲ್ಲಿ ಬೆಳ್ಳಗೆ, ಇನ್ನು ಕೆಲವೆಡೆ ಕೆಂಪಗೆ, ಮಗದೊಂದು ಕಡೆ ಹಳದಿಯಾಗಿ ಕಾಣುವ ಮಣ್ಣಿಗೆ ಮೂಲವರ್ಣವೆಂಬುದು ಇಲ್ಲ. ಮಣ್ಣು ವಸುಂಧರೆಯ ಹೊರಮೈ ಬಣ್ಣ ಅದರ ಮೂಲ ಗುಣವಲ್ಲ ವಾಸನೆಯೊಂದೇ ಅದರ ಧರ್ಮ. ಬೇಸಗೆಯುರಿಯ ನಂತರ ಮೊದಲನೆಯ ಸಲ ದೂರದಲ್ಲಿ ಮಳೆ ಬಿದ್ದರೆ ಬರುವ ಕಂಪೇ ಮಣ್ಣಿನ ಗುಣ. ವಸು ಸೂಕ್ಷ್ಮವಾಗಿ ಬೆವೆತಾಗ ಆ ಬೆವರು ಅದೇ ರೀತಿಯ ಕಂಪು ಸೂಸುತ್ತದೆ"[೨]. ಹೀಗೆ ಕಾದಂಬರಿಯಲ್ಲಿ ಪಾತ್ರಗಳೇ ತಾವು ಪ್ರತೀಕವಾಗಿರುವುದನ್ನು ಹೊರಗೆಡಹುತ್ತವೆ.

ಜಲಪಾತದಲ್ಲಿ ಅನೇಕ ಆಶಯಗಳು ಸಂಕೀರ್ಣವಾಗಿ ಹೆಣೆದು ಕೊಂಡಿರುವುದರಿಂದ ಕಾದಂಬರಿಯ ಮುಖ್ಯ ಆಶಯ ಇಂಥದೇ ಎಂದು ಗುರುತಿಸಲಾಗದಿದ್ದರೂ ಈ ಕಾದಂಬರಿಯ ಮುನ್ನುಡಿಯಲ್ಲಿ ಲೇಖಕರು- "ಸೃಷ್ಟಿ ಶಕ್ತಿಯಿಂದ ವಿಜೃಂಭಿಸುವ ಜೀವನ ಪ್ರವೃತ್ತಿ, ಮತ್ತು ಆ ಶಕ್ತಿಯನ್ನು ಹತ್ತಿಕ್ಕುವ ಜೀವನ

---

[೨] 'ಜಲಪಾತ' ಪುಟ ೧೪೭. ಎಸ್.ಎಲ್.ಭೈರಪ್ಪ. ಪ್ರಕಾಶನ ಸಾಹಿತ್ಯ ಭಂಡಾರ. ೧೯೬೭

ಪರಿಸ್ಥಿತಿಯ ತಾಕಲಾಟವೇ 'ಜಲಪಾತ'ದ ಕಥಾವಸ್ತು. ನೀರು ಮತ್ತು ಮಣ್ಣಿನ ಶಕ್ತಿಯಿಂದ ಕಂಗೊಳಿಸುವ ವನಶ್ರೀ ಗಂಡುಹೆಣ್ಣುಗಳ ಮೂಲಶಕ್ತಿಯಾದ ಜೀವನವಿಕಾಸ, ಮತ್ತು ಬೌದ್ಧಿಕ ಸ್ತರದಲ್ಲಿ ಅನುಭವಿಸುವ ಕಲಾ ಸೌಂದರ್ಯ, ಇವು ಮೂರು ವಿವಿಧ ಸ್ತರಗಳಲ್ಲಿ ಪ್ರಕಟವಾಗುವ ಒಂದೇ ಮೂಲಶಕ್ತಿ ಎಂಬುದನ್ನು ಕಾದಂಬರಿಯ ಅಂಗಗಳಾಗಿ ಬೆಳೆದಿರುವ ಪ್ರತೀಕಗಳು ಎತ್ತಿ ತೋರುತ್ತವೆ[೫] ಎಂದಿರುತ್ತಾರೆ.

'ಜಲಪಾತ'ದಲ್ಲಿನ ಆಶಯಗಳ ಸಂಕೀರ್ಣತೆ, ಕಥಾನಕದ ಎರಡು ಪಾತ್ರಗಳೇ ಕಥೆಯನ್ನು ನಿರೂಪಿಸುವ ತಂತ್ರವಿನ್ಯಾಸ, ಕಥಾವಸ್ತುವಿನ ಅಂಶಗಳು ಪ್ರತೀಕಗಳಾಗಿ ಬೆಳೆದು ಬಂದಿರುವ ರೀತಿ ಭೈರಪ್ಪನವರ 'ತಂತು', 'ಪರ್ವ', 'ಮಂದ್ರ', 'ಸಾರ್ಥ' ಮುಂತಾದ ಬೃಹತ್ ಕಾದಂಬರಿಗಳಲ್ಲಿ ಅಳವಡಿಸಲ್ಪಟ್ಟಿರುವ, ಹೊಸ ಹೊಸ ವಿನ್ಯಾಸ, ಸಂರಚನಾ ವ್ಯವಸ್ಥೆ ಮತ್ತು ಸಂಕೀರ್ಣ ಆಶಯಗಳಿಗೆ ನಾಂದಿಯಾಗಿವೆಯೆನಿಸುತ್ತದೆ. ಮೇಲುನೋಟಕ್ಕೆ, 'ಹೃದಯ', 'ಮಿದುಳು'ಗಳಿಲ್ಲದ ಮುಂಬೈ ಮಹಾನಗರದಲ್ಲಿ ಮಧ್ಯಮವರ್ಗಕ್ಕೆ ಸೇರಿದ ವಸುಂಧರೆ, ಸುಸೂತ್ರವಾಗಿ ಜೀವನ ನಡೆಸಲು ಪಡುವ ಬವಣೆಯ ಚಿತ್ರಣ. ಈ ದಂಪತಿಗೆ ಪ್ರತಿಯಾಗಿ ಎನ್ನುವಂತೆ ಪಶುವೈದ್ಯ, ತಳಿಶಾಸ್ತ್ರದಲ್ಲಿ ಸಂಶೋಧನೆ ಮಾಡಿ ಪಿ.ಎಚ್.ಡಿ. ಪದವಿ ಪಡೆದಿರುವ ನಾಡಗೌಡ ಮತ್ತು ವಿದ್ಯಾವಂತೆ, ಸಂಪ್ರದಾಯಸ್ಥಳಾದ ಸುಧಾಬಾಯಿ ದಂಪತಿಯ ಚಿತ್ರಣ ಮೂಡಿಬಂದಿವೆ. ಮುಂಬೈನಂತಹ ಯಂತ್ರ ನಾಗರಿಕತೆಯಿಂದ ವಿಜೃಂಭಿಸುವ ಜೀವನ ಪ್ರವೃತ್ತಿಯನ್ನು, ಸೃಜನಾತ್ಮಕ ಸೃಷ್ಟಿಕ್ರಿಯೆಯನ್ನು ಹತ್ತಿಕ್ಕಿ ಬದುಕಬೇಕಾಗುವ ಪರಿಸ್ಥಿತಿಯನ್ನು ಅನಾವರಣಗೊಳಿಸುವ 'ಜಲಪಾತ', ಕಾಲಮಾನದ ಬದಲಾವಣೆಯೊಂದಿಗೆ ಭಾರತದ ಗ್ರಾಮಗಳಿಗೂ ಸಹ ಮುಂಬೈನ ಅವಕಾಶ ಅನುಕೂಲಗಳಿರದೇ ಮತ್ತೊಂದು ರೀತಿಯ ಮುಂಬೈ ಆಗಿರುವುದನ್ನೂ ಚಿತ್ರಿಸುತ್ತದೆ.

---

[೫] 'ಜಲಪಾತ'. ಮುನ್ನುಡಿ. ಎಸ್.ಎಲ್.ಭೈರಪ್ಪ. ಪ್ರಕಾಶನ ಸಾಹಿತ್ಯ ಭಂಡಾರ. ೧೯೬೭.

'ಜಲಪಾತ'ದ ನಿರೂಪಣೆಯಲ್ಲಿ ವಸು ಮತ್ತು ಶ್ರೀಪತಿ ತಮ್ಮ ಅನುಭವಗಳನ್ನು ತಾವೇ ಹೇಳಿಕೊಳ್ಳುವಂತಹ ಹೊಸ ವಿನ್ಯಾಸವನ್ನಳವಡಿಸಿದ್ದಾರೆ ಭೈರಪ್ಪನವರು. ಒಂದೊಂದು ಅಧ್ಯಾಯ ಆರಂಭವಾಗುವ ಮೊದಲು ಕುಂಚ ಮತ್ತು ತಂಬೂರಿಯ ಚಿತ್ರಗಳು ವಸು ಮತ್ತು ಶ್ರೀಪತಿಯ ದಾಂಪತ್ಯದ ಅನುಭವ, ಭಾವನಗಳ ಏರಿಳಿತಗಳನ್ನು ಸಂಗೀತದ ಆಲಾಪದ ಮೂಲಕ ಸೂಚ್ಯವಾಗಿ ತೆರೆದಿಡುತ್ತಾರೆ.

ಖಂಡಾಲದಲ್ಲಿ ಶ್ರೀಪತಿಯು ವಸುವಿನಲ್ಲಿ ಪ್ರಕೃತಿಯ ಎಲ್ಲ ಪೂರ್ಣ ಸೌಂದರ್ಯ, ಚೇತನವನ್ನು ಕಂಡುಕೊಳ್ಳುವುದು ಅರ್ಥಪೂರ್ಣವಾಗಿ ಮೂಡಿಬಂದಿದೆ. ವಸುಂಧರಾ ಪ್ರಕೃತಿಯ ವಿವಿಧ ಹಂತಗಳಿಗೆ ಪ್ರತೀಕವಾಗುತ್ತಾಳೆ. ವಸುಂಧರಾ ಮತ್ತು ಶ್ರೀಪತಿಯರ ಸಂಭೋಗ ಕ್ರಿಯೆಯನ್ನು ಸಮುದ್ರ-ಭೂಮಿಯ ಪ್ರತೀಕದಲ್ಲಿ ಬಳಕೆಯಾದರೆ, ಅದೇ ವಸುಂಧರಾ ಮತ್ತು ಶ್ರೀಪತಿಯರ ಬ್ರಹ್ಮಚರ್ಯೆಯನ್ನು ಮುಂಬಯಿಯ ಕಡು ಬೇಸಿಗೆಯ ಪ್ರತೀಕವಾಗಿಸಿದ್ದಾರೆ, ಶ್ರೀಪತಿಯ ಹಳ್ಳಿಯ ಬದುಕು ಅದನ್ನು ಚಿತ್ರಿಸುವ ಹಸುವಿನ ಪ್ರತೀಕದೊಂದಿಗೆ ತೋರಿಬಂದಿದೆ. ಹೀಗೆ ಜಲಪಾತದಲ್ಲಿ ಪ್ರತೀಕಗಳೇ ಕಥಾ ಹಂದರವನ್ನು ನಿರ್ಮಿಸುವ ಜಾಣ್ಮೆಯನ್ನು ಕಾದಂಬರಿಕಾರರು ತೋರಿದ್ದಾರೆ.

*****************

## 'ನಾಯಿನೆರಳು'-ಕಥನಕ್ರಿಯೆ.

ಪೂರ್ವ ಜನ್ಮದ ಕರ್ಮಸಿದ್ಧಾಂತಕ್ಕೆ ಸಂಬಂಧಪಟ್ಟಿರುವ ವಸ್ತುವನ್ನು ಒಳಗೊಂಡಿರುವ ಎಸ್.ಎಲ್.ಭೈರಪ್ಪನವರ ಕಾದಂಬರಿ 'ನಾಯಿನೆರಳು'. ಈ ಕಾದಂಬರಿಯು ಪೂರ್ವಜನ್ಮದ ಸ್ಮರಣೆಯಂತಹ ಒಂದು ಎಳೆಯನ್ನು ಹಿಡಿದು ವೈದಿಕ ಧರ್ಮದ ಕರ್ಮಸಿದ್ಧಾಂತದೊಂದಿಗೆ ಬೆಸೆಯುವ ಪ್ರಯತ್ನ ಪೂರ್ವಕ, ಬುದ್ಧಿ ಪೂರ್ವಕ ಚಮತ್ಕಾರದಿಂದ ರಚನೆಗೊಂಡಿದೆ. ಕಾದಂಬರಿಯಲ್ಲಿ ಬರುವ ಕತೆಯು ಪೂರ್ವಜನ್ಮದ ವಾಸನೆಯದು. ನಾಯಿಯು ಪೂರ್ವಕರ್ಮದ ಸಂಕೇತ. ಭಾರತೀಯ ಸಾಹಿತ್ಯ ಮತ್ತು ಪುರಾಣಗಳನ್ನು ಓದಿದವರಿಗೆ ಇದು ಸ್ಪಷ್ಟ ಎಂಬುದಾಗಿ ಕಾದಂಬರಿಯ ಬೆನ್ನುಡಿಯಲ್ಲಿ ಸ್ವತಃ ಕಾದಂಬರಿಕಾರರೇ ಅಭಿಪ್ರಾಯಪಟ್ಟಿರುತ್ತಾರೆ.

'ನಾಯಿನೆರಳು' ಕಾದಂಬರಿಯ ಕಥಾಹಂದರವು ಪ್ರಮುಖವಾಗಿ ಎರಡು ಎಳೆಗಳಿಂದ ನಿರ್ಮಿತವಾಗಿದೆ. ಮೊದಲ ಎಳೆಯಲ್ಲಿ ಬರುವ ಕಥಾಹಂದರ ಹೀಗೆ ಮೂಡಿಬಂದಿದೆ. ಗಂಗಾಪುರದ ತಿರುಮಲ ಜೋಯಿಸರ ಹೆಂಡತಿ ಮುಟ್ಟು ನಿಂತ ಎಷ್ಟೋ ದಿನಗಳ ನಂತರ ಮತ್ತೆ ಬಸುರಿಯಾಗಿ ಒಂದು ಗಂಡು ಮಗುವನ್ನು ಪಡೆದು ಸಾಯುತ್ತಾಳೆ. ಆ ಮಗು ತನಗೆ ಮಾತು ಬಂದಾಗಿನಿಂದ ನನಗೆ ಮದುವೆಯಾಗಿದೆ. ಹೆಂಡತಿ ಹೆಸರು ವೆಂಕಮ್ಮ. ಒಂದು ಗಂಡು ಮಗೂನೂ ಇದೆ ಎನ್ನುತ್ತಿರುತ್ತದೆ. ಜೋಯಿಸರು ಎಷ್ಟು ತಿಳಿ ಹೇಳಿದರೂ, ಆ ಮಗೂ ತಾನು ಹೇಳುವುದನ್ನು ಮಾತ್ರ ನಿಲ್ಲಿಸುವುದಿಲ್ಲ. ಕೊನೆಗೆ ದೈವ್ವ - ಪಿಶಾಚಿಗಳು ತಮ್ಮ ಮಗನ ಮೈ ಮೇಲೆ ಕವಿದಿರಬೇಕೆಂದು ಮಾಟ - ಮದ್ದುಗಳನ್ನೆಲ್ಲಾ ಮಾಡಿಸುತ್ತಾರೆ. ಆದರೆ ಏನೂ ಪ್ರಯೋಜನವಾಗಲಿಲ್ಲ.

ಈ ವಿಚಿತ್ರವಾದ ಸುದ್ದಿ ಹತ್ತೆಂಟು ಹಳ್ಳಿಗಳಿಗೆ ಹಬ್ಬಿ ಹರಡುತ್ತದೆ. ಅಷ್ಟರಲ್ಲಿ ಆ ಮಗು (ಕ್ಷೇತ್ರಪಾಲ) ಹದಿನೆಂಟು ವರ್ಷದವನಾಗುತ್ತಾನೆ. ಜೋಗಿ ಹಳ್ಳಿಯ ಅಚ್ಚಣ್ಣಯ್ಯನವರಿಗೂ ಈ ಸುದ್ದಿ ತಿಳಿಯುತ್ತದೆ. ಅವರ ಸೊಸೆ ವೆಂಕಮ್ಮ ಮಗ ವಿಶ್ವೇಶ್ವರ. ಈತ ಸು.೧೯ ವರ್ಷಗಳ ಹಿಂದೆ ಪ್ರಯಾಗದಲ್ಲಿ ಆಕಸ್ಮಿಕವಾಗಿ ಅಸು ನೀಗಿರುತ್ತಾನೆ. ಗಂಗಾಪುರದ ಜೋಯಿಸರು ತಮ್ಮ ಪತ್ನಿ, ಸೊಸೆ ಮತ್ತು ತಮ್ಮ ಮಗ ವಿಶ್ವೇಶ್ವರನ ಸ್ನೇಹಿತ – ಈ ಮೂವರನ್ನು ಕ್ಷೇತ್ರಪಾಲನ ಊರಿಗೆ ಕರೆತಂದು ಅವನನ್ನು ಪರೀಕ್ಷಿಸಿ ಸತ್ತ ತಮ್ಮ ಮಗನೇ ಇಲ್ಲಿ ಜನ್ಮ ತಾಳಿದ್ದಾನೆಂದು ತೀರ್ಮಾನಿಸುತ್ತಾರೆ. ಅವನನ್ನು ಜೋಗಿ ಹಳ್ಳಿಗೆ ಕರೆದುಕೊಂಡು ಹೋಗುತ್ತಾರೆ. ಆ ಹಳ್ಳಿಯ ಜನರು ಅವನನ್ನು ನಂಬುತ್ತಾರೆ. ಗಂಡ ಸತ್ತನೆಂದು ಮಡಿಯಾಗಿರುವ ವೆಂಕಮ್ಮನಿಗೆ ಈಗ ಮೂವತ್ತೈದು. ಕ್ಷೇತ್ರಪಾಲನಿಗೆ ಈ ಹದಿನೆಂಟು ವಿಶ್ವೇಶ್ವರ ಸತ್ತಾಗ ಅವಳಿಗೆ ಇಪ್ಪತ್ತು. ಅಪ್ಪನಿಗಲ್ಲದ ನಕ್ಷತ್ರದಲ್ಲಿ ಹುಟ್ಟಿದ ಅಚ್ಯುತನಿಗೆ ಒಂದು ವರ್ಷವಾಗುವಾಗ ಅವನ ಅಪ್ಪ ವಿಶ್ವೇಶ್ವರ ಸತ್ತು ಇಲ್ಲಿ ಈಗ ಕ್ಷೇತ್ರಪಾಲನಾಗಿ ಹುಟ್ಟಿದ. ತನಗಿಂತ ಹದಿನೈದು ವರ್ಷ ಚಿಕ್ಕವನಾದ ಗಂಡ ತನ್ನನ್ನು ಮತ್ತೆ ಹೆಂಡತಿಯಾಗಲು ಕರೆದಾಗ ಆದಾಗಲೇ ವೈಧವ್ಯಕ್ಕೆ ಹೊಂದಿಕೊಂಡಿದ್ದ ವೆಂಕಮ್ಮನ ಮನಸ್ಸು ಅಲ್ಲೋಲ ಕಲ್ಲೋಲವಾಗುತ್ತದೆ. ಆದರೆ ಶ್ರದ್ಧೆಯದೇ ಮೇಲುಗೈಯಾಗಿ ಆಕೆ ಆತನೊಂದಿಗೆ ಸಂಸಾರ ಮಾಡಲು ತೊಡಗುತ್ತಾಳೆ.

ಕಾದಂಬರಿಯ ಕಥಾ ಹಂದರದ ಇನ್ನೊಂದು ಎಳೆ ಅಚ್ಚಣ್ಣಯ್ಯನವರ ಮೊಮ್ಮಗ ಅಚ್ಯುತನ ಆಗಮನದಿಂದ ಪ್ರಾರಂಭವಾಗುತ್ತದೆ. ವಿಜ್ಞಾನದ ವಿದ್ಯಾರ್ಥಿಯಾಗಿ ಬೆಂಗಳೂರಿನ ಕಾಲೇಜೊಂದರಲ್ಲಿ ಓದುತ್ತಿರುವ ಆತ, ಇದು ಯಾವುದನ್ನೂ ನಂಬುವುದಿಲ್ಲ. ತನ್ನ ಅಜ್ಜ ಯಾರೋ ಒಬ್ಬನಿಗೆ ಮೋಸಹೋಗಿದ್ದಾನೆಂದು ತಿಳಿಯುತ್ತಾನೆ. ತಾಯಿಯನ್ನು ನಿಂದಿಸುತ್ತಾನೆ. ಕೊನೆಗೆ ಅಜ್ಜನಿಗೆ ತಿಳಿಯದಂತೆ ತಂತ್ರಮಾಡಿ ಕ್ಷೇತ್ರಪಾಲನನ್ನು ಆಸ್ತಿ ಲಪಟಾಯಿಸಲು ಬಂದ ಖದೀಮನೆಂದು

ಆರೋಪಿಸಿ ಜೈಲಿಗೆ ಕಳುಹಿಸುತ್ತಾನೆ. ತಮ್ಮ ಮೊಮ್ಮಗನಿಂದಲೇ ತಮ್ಮ ಮಗ ಜೈಲಿಗೆ ಹೋದನೆಂದು ಕೇಳಿದಾಕ್ಷಣ ನಂಜಮ್ಮ ಅಚ್ಚಣ್ಣಯ್ಯನವರ ಪತ್ನಿ ಎದೆಯೊಡೆದು ಸಾಯುತ್ತಾಳೆ. ತಮ್ಮ ಪಾಪದ ಫಲವಾಗಿ ಅಚ್ಚಣ್ಣಯ್ಯನವರಿಗೆ ನಾಲಿಗೆ ನಿಲ್ಲುತ್ತವೆ. ಅಷ್ಟರಲ್ಲಿ ಬಸುರಿಯಾಗಿದ್ದ ವೆಂಕಮ್ಮ ತನ್ನ ಮಗನ ಹಂಗಿನಲ್ಲಿ ಇರಲು ಇಷ್ಟಪಡದೆ ಮನೆಬಿಟ್ಟು ಹೋಗುತ್ತಾಳೆ. ಇಷ್ಟೆಲ್ಲಾ ದುರಂತಗಳು ನಡೆದರೂ ಅಚ್ಯುತನಿಗೆ ತನ್ನ ಊರಿನವರು ತನ್ನ ಅಪ್ಪನೆಂದು ನಂಬಿದ್ದ ಕ್ಷೇತ್ರಪಾಲನನ್ನು ತನ್ನ ತಂದೆಯೆಂದು ನಂಬಲಾಗುವುದೇ ಇಲ್ಲ. ಮದುವೆಯಾದರೂ ಕೂಡ ಅಜ್ಜ –ಅಜ್ಜಿಯರ ಶಾಪದಿಂದ ಮಕ್ಕಳೂ ಆಗುವುದಿಲ್ಲ. ಕೊನೆಗೆ ತನ್ನ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಮಗುವನ್ನೇ ದತ್ತು ತೆಗೆದುಕೊಳ್ಳಲು ಮುಂದಾಗುತ್ತಾನೆ. "ನಂಗೆ ಮಕ್ಳಾಗುಲ್ಲ ಅಂತ ನಂಗೂ ಅನ್ಸುತ್ತೆ. ಇನ್ನು ನನ್ ತಾಯೀ ಹೊಟ್ಟೇಲೇ ಹುಟ್ಟಿದ ಮಗು. ಅದೇ ಮುಂದೆ ಆಸ್ತೀನ ಅನುಭವಿಸಿಲಿ"[೧]. ಎಂದುಕೊಂಡರೆ ಆತ, ತಾಯಿ "ಮಕ್ಕಳಿಲ್ಲದೆ ಇದ್ರೆ ಅವನು ಯಾವುದಾದರೂ ಮಗೂನ ದತ್ತು ತೆಗೆದುಕೊಳ್ಳಲಿ ಆಸ್ತೀನ ಬೀದಿನಾಯಿ ತಿನ್ನಲಿ." ಎಂದು ಶಪಿಸುತ್ತಾಳೆ. ಇದರಿಂದ ಹತಾಶಗೊಂಡ ಅಚ್ಯುತ "ನಂಬಿಕೆ ಅನ್ನೋದು ನನಗೆ ಯಾಕೆ ಪೂರ್ತಿಯಾಗಿ ಬರೋಲ್ಲವೋ, ನನಗೇ ತಿಳಿಯುಲ್ಲ."- ಎನ್ನುವ ಮಾತಿನೊಂದಿಗೆ ಕಾದಂಬರಿ ಕೊನೆಗೊಳ್ಳುತ್ತದೆ.

ಕಾದಂಬರಿಯಲ್ಲಿನ ಈ ಎರಡು ಎಳೆಗಳಿಗೆ ಪೂರಕವಾಗಿ ಇನ್ನೆರಡು ಕಥಾಂಗಗಳು ಸೇರಿಕೊಂಡಿವೆ. ಅಂದರೆ ಮುಖ್ಯ ಕಥೆಯ ಒಳಗಡೆ ಕೆಲವು ಕಥಾಂಗಗಳು ಸೇರಿಕೊಂಡು ಕಾದಂಬರಿ ಒಂದು ರೀತಿಯಲ್ಲಿ ಓದುಗನಲ್ಲಿ ದ್ವಂದ್ವವನ್ನು ಸೃಷ್ಟಿಸುತ್ತದೆ.

ಮೂಲ ಕಥೆಗೆ ಹಿನ್ನಲೆಯಾಗಿ ಅಚ್ಚಣ್ಣಯ್ಯನವರ ಪೂರ್ವವೃತ್ತಾಂತ ಬರುತ್ತದೆ. ಮಕ್ಕಳಿಲ್ಲದೆ ಕೊರಗುತ್ತಿದ್ದ ಅಚ್ಚಣ್ಣಯ್ಯ ದಂಪತಿಗಳ ಮನೆಗೆ ಒಮ್ಮೆ ಒಬ್ಬ

---

[೧] 'ನಾಯಿ ನೆರಳು' ಪುಟ ೨೧೨. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೬೮.

ಸನ್ಯಾಸಿ ಭಿಕ್ಷೆಗಾಗಿ ಬರುತ್ತಾನೆ. ಆಗ ಅಚ್ಚಣ್ಣಯ್ಯನವರ ಮಡದಿ ಭಿಕ್ಷೆ ಹಾಕಲು ಬಂದಾಗ ಆತ ತನ್ನ ಭಿಕ್ಷಪಾತ್ರೇನ ಮುಂದಕ್ಕೆ ನೀಡಿದವನು ಒಮ್ಮಿಂದೊಮ್ಮೆ ಕೈನ ಹಿಂದಕ್ಕೆ ತೆಗದುಕೊಂಡು 'ತಾಯಿ, ಮನಸ್ಸಿಗೆ ಬೇಜಾರು ಮಾಡ್ಕಾಬ್ಯಾಡ, ನಾವು ಮಕ್ಕಳಿಲ್ಲದ ಹೆಂಗಸರ ಕೈಲಿ ಭಿಕ್ಷೆ ಸ್ವೀಕರಿಸೋದಿಲ್ಲ' ಅಂತ ಹೇಳಿ, ಹಿಂತಿರುಗಿಯೂ ನೋಡದೆ ಹೊರಟೇ ಹೋಗಿಬಿಡುತ್ತಾನೆ. ಮುಖ ನೋಡಿದ್‌ರಿಂದ್ಲೇ ಇವಳು ಬಂಜೆ ಅಂತ ಹೇಳೋ ಶಕ್ತಿ ಇರಬೇಕಾದ್ರೆ ಆ ಸನ್ಯಾಸಿಗೆ ಮಕ್ಕಳಿಲ್ಲದೋರ್‍ಗೆ ಮಕ್‌ಳನ್ನ ಅನುಗ್ರಹಿಸೋ ಶಕ್ತಿಯೂ ಇರಬಹುದು ಎಂದುಕೊಂಡ ಅಚ್ಚಣ್ಣಯ್ಯನವರು ಆ ಸನ್ಯಾಸಿಯನ್ನು ಹುಡುಕಾಡಿ 'ಸ್ವಾಮಿ, ನೀವು ದೊಡ್ಡ ಮನಸ್ಸು ಮಾಡಿ . ನಮಗೆ ಮಕ್‌ಳನ್ನ ಅನುಗ್ರಹಿಸಬೇಕು' ಅಂತ ಕೇಳಿಕೊಳ್ಳುತ್ತಾರೆ. ಆಗ ಆ ಸನ್ಯಾಸಿ "ಇವತ್ತಿಗೆ ಐದು ದಿನಕ್ಕೆ, ಅಂದ್ರೆ ಪಾಡ್ಯದ ದಿನ ಮಧ್ಯಾಹ್ನ ನಾನು ನಿನ್ನ ಮನೆಗೆ ಬರ್ತೀನಿ. ನೀವು ಗಂಡ ಹೆಂಡತಿ ಇಬ್ರೂ ಉಪವಾಸ ಇದ್ದು, ಮನೇನ ಸಾರಿಸಿ ಗುಡಿಸಿ ಎಲ್ಲಾ ಮಾಡ್ಕಂಡು ಹಣ್ಣು-ಹಂಪಲು ಇಟ್ಕಂಡ್ ಮಡೀಲಿ ಇರಿ"[೨]. ಎನ್ನುತ್ತಾನೆ. ಅದಕ್ಕೆ ಅಚ್ಚಣ್ಣಯ್ಯನವರು ನೀವು ನಮ್ಮ ಮನೆಗೆ ಬರುವಿರೆಂಬುದಕ್ಕೆ ಖಚಿತತೆ ಏನು ಎಂದು ಕೇಳಿದಾಗ ಅಚ್ಚಣ್ಣಯ್ಯನಿಗೆ ಖಾತ್ರಿಗಾಗಿ ತನ್ನ ದಂಡವನ್ನು ಕೊಡುತ್ತಾನೆ. ತುಂಬಾ ಭಾರವಾಗಿರುವ ಆ ದಂಡವನ್ನು ಕುತೂಹಲಕ್ಕಾಗಿ ಅದರ ಮುದ್ರೆಯನ್ನು ಒಡೆದು ನೋಡಿದ ಆತನಿಗೆ ಚಿನ್ನದ ಪೌನುಗಳು ಅದರಲ್ಲಿ ಸಿಗುತ್ತವೆ. ಅವಿಷ್ಟನ್ನೂ ತಾನೇ ಇಟ್ಟುಕೊಂಡು ಅದಕ್ಕೆ ಬದಲಾಗಿ ಕಬ್ಬಿಣದ ಪೌನುಗಳನ್ನು ಅಚ್ಚಣ್ಣಯ್ಯ ತುಂಬಿ ಬಿಡುತ್ತಾರೆ. ಸಂನ್ಯಾಸಿ ಮಾತಿನಂತೆ ಐದು ದಿನದ ನಂತರ ಇವರ ಮನೆಗೆ ಬರುತ್ತಾನೆ. ಅಚ್ಚಣ್ಣಯ್ಯ ದಂಪತಿಯವರಿಗೆ ಮಕ್ಕಳ ಭಾಗ್ಯವನ್ನು ಕರುಣಿಸಿ, ತನ್ನ ದಂಡವನ್ನು ತೆಗೆದುಕೊಂಡ ಆ ಸನ್ಯಾಸಿ ಇವರ ಮನೆಯಿಂದ ನೇರ ಪ್ರಯಾಗಕ್ಕೆ ಹೋಗಿ ತಾನು ಸಾಮಾನು ಕೊಂಡುಕೊಂಡ ಅಂಗಡಿಯಲ್ಲಿ ದಂಡದಿಂದ ಚಿನ್ನದ ಪೌನು ತೆಗೆಯಲು ಹೋದಾಗ ಕಬ್ಬಿಣದ ತುಂಡುಗಳು ಬಿದ್ದು ಆಘಾತಗೊಂಡ

---

[೨] 'ನಾಯಿ ನೆರಳು'. ಪುಟ ೧೧೩. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೬೮.

ಸನ್ಯಾಸಿ ಎದೆಗೆ ಗುದ್ದಿಕೊಂಡು ಅಲ್ಲೇ ಸಾಯುತ್ತಾನೆ. ಈತನೇ ಮುಂದೆ ಅಚ್ಚಣ್ಣಯ್ಯ ದಂಪತಿಗಳಿಗೆ ಮಗನಾಗಿ ಹುಟ್ಟುತ್ತಾನೆ. ಹೀಗೆ ಮಗನನ್ನು ಪಡೆಯಲು ಸನ್ಯಾಸಿಯೊಬ್ಬನ ವರ ಪಡೆದ ಅಚ್ಚಣ್ಣಯ್ಯ, ಆ ಸಂನ್ಯಾಸಿಯ ನಾಣ್ಯಗಳನ್ನು ಎತ್ತಿ ಹಾಕಿ ಮೋಸಮಾಡುವುದು ಮತ್ತು ಮುಂದೆ ಮಗ ವಿಶ್ವೇಶ್ವರ ಯಾವುದೋ ಪ್ರೇರಣೆಯಾದಂತಾಗಿ ಪ್ರಯಾಗಕ್ಕೆ ತೆರಳಿ ಈ ಮೋಸವನ್ನು ಸರಿಪಡಿಸುವಂತೆ ಸಲ್ಲಬೇಕಾದವರಿಗೆ ಅಷ್ಟೇ ನಾಣ್ಯಗಳನ್ನು ಸಲ್ಲಿಸಿ ಅವಸಾನವಾಗುವುದು, ಹಾಗೆ ಅವಸಾನಗೊಂಡವನೇ ತಿರುಮಲ ಜೋಯಿಸರ ಮಗ ಕ್ಷೇತ್ರಪಾಲನಾಗಿ ಜನಿಸುತ್ತಾನೆ. ಅಲ್ಲದೆ ಈ ಕಾದಂಬರಿಯಲ್ಲಿ ಜೋಗಿ ಹಳ್ಳಿಯ ಗುಡಿ ಮುಂದಿನ ಬೇವಿನಮರ ಸಿಹಿ ಹಾಲು ಕರೆಯುವ ಪವಾಡ ಇನ್ನೊಂದು ಕಥಾಂಗವಾಗಿ ಮೂಡಿಬಂದಿದೆ. ಹೀಗೆ ಗೋಜುಗೋಜಲಾದ ಕಥೆಯ ರೂಪರೇಷೆಗಳೊಂದಿಗೆ ಈ ಕಾದಂಬರಿ ಶಿಲ್ಪವು ರಚನೆಗೊಂಡಿದೆ. ಕ್ಷೇತ್ರಪಾಲ ಜೈಲಿಗೆ ಹೋದ ಮೇಲೆ ಕತೆ ಕುಂಟುತ್ತವೆ. ಘಟನೆಗಳೆಲ್ಲಾ ಆಕಸ್ಮಿಕವೆನ್ನುವಂತೆ ನಡೆಯುತ್ತವೆ. ಸ್ವಾಭಾವಿಕವಾಗಿ ರೂಪಗೊಳ್ಳುವುದಿಲ್ಲ.

"ನಮ್ ಮಗೂಗಾ? ಎಂಬ ಮಾತು ನಂಜಮ್ಮನ ಬಾಯಿಂದ ಹೊರ ಬಿದ್ದುದೆಷ್ಟೋ ಅಷ್ಟೇ ಮತ್ತೆ ಮಾತು ಹೊರಡಲೇ ಇಲ್ಲ. ಎದೆಯ ಮೇಲೆ ಕೈ ಇಟ್ಟುಕೊಂಡು ಒಸುಕಿಕೊಳ್ಳುತ್ತಾ ಆಕೆ ಕುಳಿತಲ್ಲಿಯೇ ಉರುಟಿಕೊಂಡರು. ----- ಅಚ್ಚಣ್ಣಯ್ಯ ಹೆಂಡತಿಯ ತಲೆಗೆ ತನ್ನೀರು ತಟ್ಟಿದರೂ ಅವರಿಗೆ ಪ್ರಜ್ಞೆ ಬರಲಿಲ್ಲ. ಶ್ವಾಸೋಚ್ಛಾಸದ ಚಿಹ್ನೆಯೂ ಕಾಣಲಿಲ್ಲ. ಅನುಮಾನ ಬಂದು ಆಕೆಯ ಮೂಗಿನ ಹತ್ತಿರ ತಮ್ಮ ಬೆರಳು ಹಿಡಿದು ನೋಡಿದರು. ಪ್ರಾಣವಾಯು ನಿಂತುಹೋಗಿತ್ತು"[೩].

"ನಿಮ್ಮದೂ ಸ್ವಲ್ಪ ತಪ್ಪು ಅನ್ನಿ ಆದದ್ದಾಯ್ತು ನೀವು ಮಂಕು ಹಿಡಿದೋರ ಹಾಗೆ ಕೂತು ಕರ್ಮ ಪ್ರಾಚೀನ ಅನ್ನೋ ಮಾತು ಶುರು ಮಾಡಿದ್ರಿ. ಅಲ್ದೆ

---

[೩] 'ನಾಯಿ ನೆರಳು' ಪುಟ ೧೨೫. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೬೮.

ಅವಳ ಹೊಟ್ಟೇಲಿದ್ದ ಮಗೂಗೆ ನೀವು ಏನಾದ್ರೂ ಆಸ್ತಿ ಅಡವಿನ ದಾರಿ ಮಾಡಿ ಅವಳಿಗೆ ಧೈರ್ಯ ಹೇಳಬೇಕಾಗಿತ್ತು. ಜೈಲಿನಲ್ಲಿರೋನು ನನ್ನ ಮಗ ಅನ್ನೋದು ಮಾಯೆ ಅನ್ನೂಥರ ನೀವು ಮಾತನ್ನಾಡಿದರೆ ಅವಳು ಏನಂತ ತಿಳ್ಕೋಬೇಕು. ಮಾವನೋರು ಕೊನೆಗೆ ತನ್ನ ಕೈಬಿಟ್ಟು ತನ್ನನ್ನೇ ಭ್ರಷ್ಟೆ ಮಾಡ್ತಾರೆ ಅಂತಲೇ ಅವಳು ಹೀಗೆ ಹೊರಟು ಹೋಗಿದ್ದಾಳೆ"[೬].

"ಆವತ್ತು ರಾತ್ರಿ ಮಲಕ್ಕಂಡಾಗ ನಂಗೆ ಆ ದಂಡದ ಜ್ಞಾಪಕ ಬಂತು. ಅದೊಳ್ಳೆ ದಪ್ಪಗೆ, ಉದ್ದವಾಗಿ, ಭಾರವಾಗಿತ್ತು ಇರ್ಲಿ ನೋಡಾಣ ಅಂತ ರಾತ್ರಿ ಇವಳಿಗೆ ಚೆನ್ನಾಗಿ ನಿದ್ದೆ ಬಂದ ಮೇಲೆ ನಾನೊಬ್ಬನೇ ಎದ್ದು ದೇವರ ಮನೆಗೆ ಹೋಗಿ ಅ–ಆ–ಅ–ಅ–ಅ" ಎಂದು ಮಾತನ್ನಾಡಲಾರದೆ ಅಚ್ಚಣ್ಣಯ್ಯ ತೊದಲಲು ಶುರು ಮಾಡಿದರು. ಜೋಯಿಸರು ಆಚ್ಚರ್ಯದಿಂದ ಅವರ ಬಾಯನ್ನು ನೋಡಿದರೆ ಮಾತನ್ನಾಡಲು ಅವರು ಯತ್ನ ಮಾಡುತ್ತಿದ್ದರಾದರೂ ಬಾಯೊಳಗಿನ ನಾಲಗೆಯೇ ಹೊರಳದೆ ಬರೀ ಅ–ಅ–ಅ–ಅ ಎಂಬ ಶಬ್ದವಷ್ಟೇ ಹೊರಕ್ಕೆ ಬರುತ್ತಿತ್ತು"[೭].

ಹೀಗೆ ಇಂತಹ ಅನೇಕ ಘಟನೆಗಳು ಕಾದಂಬರಿಯಲ್ಲಿ ಸಂಭವಿಸುತ್ತಾ ಹೋಗುತ್ತಲೇ. ಅಸ್ವಾಭಾವಿಕವಾಗಿ ರೂಪುಗೊಳ್ಳುತ್ತವೆ. ಕ್ಷೇತ್ರಪಾಲನು ಪುಟ್ಟಿಯೊಡನೆ ಓಡಿ ಹೋಗುವ ಘಟನೆ ಕಾಧಂಬರಿಗೆ ಹೊಸ ತಿರುವನ್ನು ಕೊಡುತ್ತದೆ.

ಈ ಕಾದಂಬರಿಯ ಚೌಕಟ್ಟು, ಶಿಲ್ಪಕ್ಕೆ ಸಂಬಂಧಿಸಿ ಸ್ವತಃ ಕಾದಂಬರಿಕಾರರೇ ಈ ರೀತಿಯಾಗಿ ಹೇಳಿರುತ್ತಾರೆ– "ಇತಿಹಾಸಕಾರನಿಗೆ ಸಮರ್ಪಕವೆನಿಸುವಂತಹ ಅತ್ಯಂತ ಸಂಯಮಪೂರ್ಣವೂ, ನಿರ್ದಿಷ್ಟವೂ ಆದ ಶೈಲಿಯು ಕಥೆಯನ್ನು ಸುಸಂಬದ್ಧವಾದ ಚೌಕಟ್ಟಿನಲ್ಲಿ ಬಿಡಿಸಿ ನಿಲ್ಲಿಸುತ್ತದೆ. ಆದರೆ ಅನುಭವದ

---

[೬] 'ನಾಯಿ ನೆರಳು' ಪುಟ ೧೨೭. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೬೮.
[೭] 'ನಾಯಿ ನೆರಳು' ಬೆನ್ನುಡಿ.– ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೬೮.

ಇಂದ್ರೀಯಗೋಚರ ಘುಖವನ್ನಷ್ಟೇ ಅಭಿವ್ಯಕ್ತಿಸುವ ಶಕ್ತಿಯುಳ್ಳ ವಾಸ್ತವ ಶೈಲಿಯೂ ಈ ಕಾದಂಬರಿಯಲ್ಲಿ ಅನುಭವವನ್ನು ಸುತ್ತುವರಿದ ನಿಗೂಢತೆ, ವಿಸ್ಮಯಗಳನ್ನು ಸೃಷ್ಟಿಸಿಕೊಂಡೇ ಸಾಗುತ್ತದೆ. ಲೌಕಿಕ ದೇಶ ಕಾಲಗಳಲ್ಲಿ ನಿಲ್ಲುವ ಗಟ್ಟಿಕಲ್ಲಿನಿಂದ ಕೊರೆಯಲ್ಪಟ್ಟಿರುವ ವಿಗ್ರಹವು ತನ್ನ ಅಂಗಾಗಗಳಲ್ಲಿಯೂ ಅಲೌಕಿಕ ಭಾವವನ್ನು ಪ್ರಕಟಿಸುವಂತೆ ಈ ಕಾದಂಬರಿಯ ಶಿಲ್ಪವು ರೂಪಗೊಂಡಿದೆ. ಇದರ ಕಥಾವಸ್ತುವು ಕನ್ನಡದ ಕಲ್ಪನಾ ಸಾಹಿತ್ಯಕ್ಕೆ ಹೊಸದಾಗಿರುವುದು . ಮಾತ್ರವಲ್ಲದೆ ಅದು ವಿನ್ಯಾಸಗೊಂಡಿರುವ ರೀತಿಯು ಈ ಬಗೆಯ ಶಿಲ್ಪವು ಪಡೆಯಬಹುದಾದ ಹೊಸ ಧ್ವನಿಯನ್ನೂ, ಹೊಸ ಸಾಧ್ಯತೆಗಳನ್ನು ಪ್ರಕಟಿಸುತ್ತದೆ"[೬].

ಜಿ.ಆರ್.ನಂಜುಂಡೇಗೌಡರು ಈ ಕಾದಂಬರಿಯ ರಚನೆಯ ಕುರಿತಾಗಿ ಹೇಳುತ್ತಾ "ವೈಜ್ಞಾನಿಕವಾಗಿ ಸಿದ್ಧವಾಗದ ಅಥವಾ ಜನಮನದಲ್ಲಿ ಸಂಪೂರ್ಣ ನಂಬಿಕೆ ಇಲ್ಲದ ತತ್ವವೊಂದರ ಆಧಾರದ ಮೇಲೆ ಈ ಕಾದಂಬರಿ ರಚಿತವಾಗಿದೆ"[೭] ಎಂದು ಅಭಿಪ್ರಾಯಪಟ್ಟಿರುತ್ತಾರೆ. ಅದರಂತೆ ಇಲ್ಲಿ ಬರುವ ಎಲ್ಲ ಪಾತ್ರಗಳು ಅಚ್ಯುತನನ್ನು ಬಿಟ್ಟು ಸಂಪ್ರದಾಯ, ಪರಂಪರೆ, ಪುನರ್ಜನ್ಮಗಳಲ್ಲಿ ನಂಬಿಕೆಯಿಟ್ಟು ನಡೆಯುವಂತಹವೇ ಆಗಿವೆ, ಅಚ್ಯುತನ ಪಾತ್ರದ ದ್ವಂದ್ವ ಅವನ ನಿಲುವು-ವಿಚಾರಗಳ ಕಾದಂಬರಿಯ ಕೊನೆಗೆ ಸಡಿಲಾಗಿ ಕಾದಂಬರಿ ದುರ್ಬಲಗೊಳ್ಳುತ್ತದೆ.

ಈ ದೌರ್ಬಲ್ಯಗಳ ನಡುವೆಯೂ 'ನಾಯಿ ನೆರಳು' ಕಾದಂಬರಿಯ ಕಥೆಯು ವಿಚಿತ್ರವನ್ನು ಶೋಧಿಸುವ ಪರಿಕ್ರಮದಲ್ಲಿಯೇ ಸಂಕೀರ್ಣವಾಗಿ ಬೆಳೆಯುತ್ತಾ ಹೋಗುತ್ತದೆ. ದೃಶ್ಯ ಜಗತ್ತಿನ ಒಂದು ವಾಸ್ತವ ಭಾಗವಾಗಿಯೂ ಕೂಡ ಇನ್ನೊಂದು ಮಟ್ಟದಲ್ಲಿ ಬೇರೊಂದು ಜಗತ್ತನ್ನೇ ದರ್ಶಿಸುವಂತೆ ಇಲ್ಲಿ ಮೂಡಿರುವ ಪ್ರತೀಕಗಳು

---

[೬] 'ನಾಯಿ ನೆರಳು' ಪುಟ ೧೨೭-ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು.೧೯೬೮.

[೭] 'ಆಸ್ವಾದನೆ' ಹಾಸನ ಜಿಲ್ಲೆಯ ಕಾದಂಬರಿ ಸಾಹಿತ್ಯ

ಅತ್ಯಂತ ಸಫಲವಾಗಿ ಅರ್ಥಸ್ತರಗಳ ಒಂದು ಸೌಧವನ್ನು ನಿರ್ಮಿಸುತ್ತವೆ. ವಾಸ್ತವ ಶೈಲಿಯ ನಿರ್ದಿಷ್ಟತೆಯಿಂದಲೇ ಪುರಾಣಕ್ಕೆ ಸಾಧ್ಯವಾದ ಅತೀತತೆಯನ್ನು ಆಧುನಿಕ ಯುಗದ ಲೇಖಕರು ಮುಟ್ಟಬಹುದೆಂಬುದನ್ನು ಭೈರಪ್ಪನವರು ಈ ಕಾದಂಬರಿಯ ಕಥನ ಕ್ರಿಯೆಯಲ್ಲಿ ಸಾಧಿಸಿ ತೋರಿಸಿದ್ದಾರೆ.

ಪ್ರತಿಯೊಬ್ಬ ಮನುಷ್ಯನ ಅಂತರಾಳದಲ್ಲಿ ಸುಪ್ತವಾಗಿ ಇರುವ ಕುತೂಹಲ ಹಾಗೂ ಪ್ರಶ್ನೆ ಎಂದರೆ ಹುಟ್ಟು-ಸಾವು ಮತ್ತು ನಂತರದ ಪ್ರಶ್ನಾರ್ತಕ ಚಿಹ್ನೆ. ಸನಾತನ ಧರ್ಮ-ಈ ದಿಶೆಯಲ್ಲಿ ಕಂಡು ಕೊಂಡಿರುವ ಚಿಂತನ-ಮಂಥನ 'ನಾಯಿನೆರಳು' ಕಾದಂಬರಿಯಲ್ಲಿ ಪುನರ್ಜನ್ಮದ ನೆಲೆಯಲ್ಲಿ ಮೂಡಿಬಂದಿದೆ. ಪ್ರತಿಯೊಬ್ಬ ಓದುಗನಿಗೂ ಇರುವ ಪುನರ್ಜನ್ಮದ ಕುರಿತಾದ ಕುತೂಹಲವೆ, ಕಾದಂಬರಿಯನ್ನು ಓದಿಸಿಕೊಂಡು ಹೋಗುತ್ತದೆ. ಈ ಕಾರಣದಿಂದಾಗಿ ನಾಯಿನೆರಳು ಕಾದಂಬರಿಯ ಶಿಲ್ಪ ಹೊರನೋಟಕ್ಕೆ ಜಾಳಾದಂತೆ ತೋರುತ್ತದೆ. ಆದರೆ ವಿಚಾರ-ವಿಮರ್ಶೆ-ಸಂಘರ್ಷ ಇವುಗಳ ಹೂರಣ ಕಾದಂಬರಿಯ ಈ ದೌರ್ಬಲ್ಯವನ್ನು ಮರೆಮಾಚುತ್ತದೆ.

*********

## 'ತಬ್ಬಲಿಯು ನೀನಾದೆ ಮಗನೇ'–ಕಥನಕ್ರಿಯೆ.

ಹಿಂದೂ ಸಂಸ್ಕೃತಿ ಹಾಗೂ ಪಾಶ್ಚಾತ್ಯ ಸಂಸ್ಕೃತಿಯ ನಡುವಿನ ಘರ್ಷಣೆಯೇ 'ತಬ್ಬಲಿಯು ನೀನಾದೆ ಮಗನೇ' ಕಾದಂಬರಿಯ ವಸ್ತು.

ಸಂಪ್ರದಾಯನಿಷ್ಠ ಪುರೋಹಿತ ಕುಟುಂಬದಲ್ಲಿ ಜನಿಸಿ, ಸಂಸ್ಕೃತ ಶಿಕ್ಷಣ ಹೊಂದಿದ ವೆಂಕಟರಮಣ, ಸಾಂಪ್ರದಾಯಿಕ ಕುಟುಂಬದಲ್ಲಿ ಜನಿಸಿದರೂ ಅಮೇರಿಕದಂತಹ ಕೈಗಾರೀಕರಣಗೊಂಡಿರುವ ದೇಶದಿಂದ ಉನ್ನತ ವ್ಯಾಸಂಗ ಮಾಡಿ ಬಂದಿರುವ ಕಾಳಿಂಗ, ಆತನ ಅಮೇರಿಕದ ಕೃಷಿವಿಜ್ಞಾನಿ ಹೆಂಡತಿ ಹಿಲ್ಡಾ ಇವರುಗಳ ನಡುವೆ ನಡೆಯುವ ಘರ್ಷಣೆಯೊಂದಿಗೇ ಈ ಎರಡೂ ಸಂಸ್ಕೃತಿಗಳ ತಿಕ್ಕಾಟವನ್ನು ಧ್ವನಿಸುವಂತೆ ಕಾದಂಬರಿಕಾರರು ಈ ಕಾದಂಬರಿಯ 'ಶಿಲ್ಪ'ವನ್ನು ತಂದಿರುತ್ತಾರೆ.

ಕಾದಂಬರಿಯ ವಸ್ತು ಪೂರ್ವಾರ್ಧ ಮತ್ತು ಉತ್ತರಾರ್ಧದಲ್ಲಿ ಹಂಚಿಕೆಯಾಗಿದೆ. ಗೋವು ಮಾತಾ ಸ್ವರೂಪಿ ಮತ್ತು ದೇವತಾ ಸ್ವರೂಪಿ. ಆತನ ಹಳ್ಳಿಯವರೆಲ್ಲರೂ ಈ ನಂಬಿಕೆಯಲ್ಲಿಯೇ ಬಾಳಿ ಬದುಕಿದ್ದಾರೆ. ಕಾಳಿಂಗಗೌಡ ಗೋವುಗಳನ್ನು ಪೂಜಿಸುತ್ತಾನೆ. ದಾನವಾಗಿ ಕೊಡುತ್ತಾನೆ. ಆದರೆ ಮಾರುವುದಿಲ್ಲ. ಗೋವುಗಳಿಗಾಗಿ ಗೋಮಾಳವನ್ನು ಧಾರಾಳವಾಗಿ ಬಿಡುತ್ತಾನೆ. ಬಿಸಿಲಿನಲ್ಲಿ ದನದ ಹಿಂದೆ ತಿರುಗುವುದು ಗೌಡಜ್ಜನಿಗೆ ಜೀವನ ಸಾಧನೆಯಾಗಿರಲಿಲ್ಲ ಅದೊಂದು ಆತನ ಜೀವನ ಧರ್ಮವಾಗಿದೆ.

ಕಾದಂಬರಿಯ ಉತ್ತರಾರ್ಧವು ಕಾಳಿಂಗಜ್ಜನ ಮೊಮ್ಮಗ ಕಾಳಿಂಗನಿಗೆ ಸಂಬಂಧಿಸಿರುವುದು. ಕಾಳಿಂಗ ಹುಟ್ಟಿದ್ದು ಹಿರಿಯ ತಲೆಮಾರಿನ ಆಶ್ರಯದಲ್ಲಾದರೂ ಈಗಿನ ಕಾಲದಲ್ಲಿ ವಿಜ್ಞಾನವನ್ನು ಓದಿ ಅಮೇರಿಕೆಯಲ್ಲಿ ಆಧುನಿಕ ವಿಧಾನದಲ್ಲಿ ಕೃಷಿ ಮತ್ತು ಪಶುಸಂಗೋಪನೆಯಲ್ಲಿ ತರಬೇತಿ ಪಡೆದವನು. ಅಲ್ಲಿಯೇ ತನ್ನ ಸಹಪಾಠಿ

ಪಿಲ್ಡಾಳಲ್ಲಿ ಅನುರಕ್ತನಾಗಿ ಅವಳನ್ನು ವಿವಾಹವಾಗಿ ತನ್ನ ಹಳ್ಳಿಗೆ ಕರೆತರುತ್ತಾನೆ. ತನ್ನ ದೇಶದ ಕೃಷಿಯನ್ನು ವೈಜ್ಞಾನೀಕರಣಗೊಳಿಸಿ, ಹೆಚ್ಚಿನ ಬೆಳೆ ತೆಗೆದು ಇಲ್ಲಿನ ಬಡತನವನ್ನು ನಿರ್ಮೂಲನಗೊಳಿಸುವ ಬಯಕೆ ಈ ಕಾಳಿಂಗನದು. ಇದಕ್ಕೆ ಆತನ ಹೆಂಡತಿಯ ಸಂಪೂರ್ಣ ಸಹಕಾರ ದೊರಕುವುದು. ಅಲ್ಲದೆ ಬದಲಾದ ಸರಕಾರಿ ಆಡಳಿತ ಯಂತ್ರವು ಈತನ ವಿಚಾರಗಳಿಗೆ ನೆರವಾಗುವುದು. ಇದರಿಂದಾಗಿ ಹಳ್ಳಿಯ ಗೋಧರ್ಮವು ವಾಣಿಜ್ಯಧರ್ಮವಾಗಿ ಪರಿವರ್ತನೆಯಾಗುತ್ತದೆ. ಯಂತ್ರದಿಂದ ಹಾಲು ಕರೆದು ಅದನ್ನು ಲಾಭಕ್ಕಾಗಿ ಮಾರುತ್ತಾನೆ. ಉಪಯೋಗಕ್ಕೆ ಬಾರದ ಹಸು–ಕರು–ಹೋರಿಗಳನ್ನು ಮಾರಾಟ ಮಾಡುತ್ತಾನೆ. ಗೋಮಾಳದಲ್ಲಿಯೂ ಬೇಸಾಯಮಾಡಿ ಲಾಭಗೊಳಿಸಲು ತೊಡಗಿದರು. ಪುಣ್ಯಕೋಟಿ ಹಸುವಿನ ಸಮಾಧಿಯ ಮೇಲೆ ರಸ್ತೆ ನಿರ್ಮಾಣವಾಯಿತು. ಹಳ್ಳಿಯ ಜೀವನ ಕ್ರಮದ ಬದಲಾವಣೆಗೆ ಹಳ್ಳಿಯವರ ಪ್ರತಿಭಟನೆ ಕಾಣಿಸಿಕೊಳ್ಳುತ್ತದೆ. ಕಾಳಿಂಗನ ತಾಯಿ ಮತ್ತು ಅವನ ಜೊತೆಯವನೇ ಆದ ವೆಂಕಟರಮಣ ಜೋಯಿಸರು ಪ್ರತಿಭಟನೆಯ ಮುಂಚೂಣಿಯಲ್ಲಿ ಕಾಣಿಸಿಕೊಳ್ಳುತ್ತಾರೆ. ವೆಂಕಟರಮಣ ಕೈಗಾರೀಕರಣಗೊಳ್ಳುತ್ತಿರುವ ಸಂಸ್ಕೃತಿಯಲ್ಲಿ ಎದ್ದು ಕಾಣುವ ಸ್ವಾರ್ಥ, ತೀವ್ರ ಹಣ ಮಾಡುವ ಬಯಕೆ, ಮನುಷ್ಯನ ಸ್ವಾರ್ಥಕ್ಕಾಗಿಯೇ ಪ್ರಾಣಿಗಳು ಎಂಬ ಭಾವನೆ. ಅದಕ್ಕಾಗಿ ಕರುಗಳಿಗೆ ತೊಟ್ಟು ಹಾಲನ್ನು ಬಿಡದೆ ಮೆಶಿನಿನಿಂದ ಎಲ್ಲ ಹಾಲನ್ನು ಕರೆದುಕೊಳ್ಳುವ ಪಾಶ್ಚಾತ್ಯರ (ಆಧುನಿಕತೆಯ) ಪದ್ಧತಿ, ಚರ್ಮಕ್ಕಾಗಿ ಕರುಗಳನ್ನು ಕೊಲ್ಲುವಂಥ ಅಮಾನವೀಯ ವ್ಯವಹಾರಗಳನ್ನು ಎತ್ತಿ ತೋರಿಸುತ್ತಾನೆ.

> ಹಾಲು ಕೊಡದ ಮುದಿ ಆಕಳನ್ನು ಮಾರುವುದು,
> ಗದ್ದೆಯಲ್ಲಿ ತಂಬಾಕು ಬೆಳೆಯುವುದು,
> ಪವಿತ್ರ ಕಲ್ಯಾಣಿಯಲ್ಲಿ ಈಜಾಡುವುದು,
> ಅದರ ನೀರನ್ನು ತನ್ನ ತೋಟಕ್ಕೆ ಬಳಸುವುದು–

ಇವು ಗ್ರಾಮಸ್ಥರಿಗೆ ಅಪರಾಧವಾಗಿ ತೋರುತ್ತದೆ. ಇದರಿಂದಾಗಿ ಹಳ್ಳಿಯ ಜನತೆಯೆಲ್ಲಾ ಕಾಳಿಂಗ ಹಾಗೂ ಹಿಲ್ಡಾಳ ವಿರುದ್ಧ ಧ್ವನಿ ಎತ್ತುತ್ತಾರೆ. ಇದರಿಂದ ಕುಪಿತಗೊಂಡ ಹಿಲ್ಡಾ 'ಪುಣ್ಯಕೋಟಿ' ತಳಿಯ ಹಸುವೊಂದನ್ನು ಕೊಂದು-ತಿಂದು ಊರವರ ಕೆಂಡ ದೃಷ್ಟಿಗೆ ಈಡಾಗುತ್ತಾಳೆ. ಈ ಕಾರಣದಿಂದಾಗಿ ಹಳ್ಳಿಯ ಜನ ಕಾಳಿಂಗನನ್ನು ಅವನ ಹೆಂಡಿರು-ಮಕ್ಕಳನ್ನೂ ಪೂರ್ತಿ ಉಪೇಕ್ಷಿಸುತ್ತಾರೆ. ಮುಂದೊಮ್ಮೆ ಕಾಳಿಂಗನ ಮಗುವಿಗೆ ಹಾಲಿಲ್ಲದೆ ಹೋದಾಗ ಪುಣ್ಯಕೋಟಿ ತಳಿಯ ಹಸುವಿನ ಹಾಲು ಕೊಡಲು ಜೋಯಿಸ ನಿರಾಕರಿಸುತ್ತಾನೆ. ಕಾಳಿಂಗನ ಮನಸ್ಸು ಇದೆಲ್ಲದರಿಂದ ಬೆಂದು ಹೋಗುತ್ತದೆ. ತಾನು ಮಾರಿದ ಹಸುಗಳು ಮುಂಬಯಿಯ ಕಸಾಯಿ ಖಾನೆಯಲ್ಲಿ ಇರಬಹುದೆ ಎಂದು ಅಲ್ಲಿಗೆ ಹುಡುಕಿಕೊಂಡು ಹೋಗುತ್ತಾನೆ. ಅಲ್ಲಿ ಸೇರಿರುವ ಸಾವಿರಾರು ದನಗಳಲ್ಲಿ ತನ್ನ ದನಗಳು ಯಾವುವು ಎಂದು ಗೊತ್ತಾಗದೆ ವಿಪ್ಪಲಗೊಳ್ಳುತ್ತಾನೆ. ಆ ಹಸುಗಳ ಮುಖದಲ್ಲಿ ತಾಯಿ ಸಾಯುವ ಮುನ್ನ ಅವಳ ಮುಖದಲ್ಲಿ ಇದ್ದ ಕಳೆಯನ್ನು ಕಾಣುತ್ತಾನೆ. ಈಗ ಕಾಳಿಂಗನಿಗೆ ತನ್ನ ತಾಯಿ ಬದುಕಿರಬೇಕಿತ್ತು ಅನ್ನಿಸುತ್ತದೆ. ಈಗ ಆತ ತಾಯಿಯಿಲ್ಲದ ತಬ್ಬಲಿಯಾಗಿ ಬಿಡುತ್ತಾನೆ.

ಭಾರತೀಯ ಸಂಸ್ಕೃತಿಯ, ವಿಶೇಷವಾಗಿ ಗ್ರಾಮಗಳಲ್ಲಿ ಜ್ವಲಂತವಾಗಿದ್ದ ಪಾರಂಪರಿಕ ಸಂಸ್ಕೃತಿಯ ಚಿತ್ರಣವು ಈ ಕಾದಂಬರಿಯ ಪ್ರಧಾನ ಶಿಲ್ಪ. ಕೇಳಿದ್ದನ್ನೇಲ್ಲಾ ಕೊಡುವಂತಹ ಕಾಮಧೇನು, ನಂದಿನಿ, ಸತ್ಯವಾಕ್ಯ ಪರಿಪಾಲನೆಗಾಗಿ ತನ್ನ ಪ್ರಾಣವನ್ನೇ ಬಿಡಲು ಸಿದ್ಧವಾಗಿದ್ದ ಪುಣ್ಯಕೋಟಿಯಂತಹ ಗೋವುಗಳ ಪರಂಪರೆಯಿರುವ ನಾಡಿನಲ್ಲಿ, ಗೋವಿಗಿರುವ ಪವಿತ್ರ ಹಾಗೂ ಶ್ರೇಷ್ಠ ಸ್ಥಾನವನ್ನು ಲೇಖಕರು ನೇರವಾಗಿ ಸರಳವಾಗಿ ನಿರೂಪಿಸುತ್ತಾರೆ. ಗೋವಿನ ದೇಹದಲ್ಲಿ ಮೂವತ್ತು ಮೂರು ಕೋಟಿ ದೇವತೆಗಳು ವಾಸವಾಗಿದ್ದಾರೆಂಬುದು ನಮ್ಮ ನಾಡಿನಲ್ಲಿ ಯುಗಯುಗಗಳಿಂದಲೂ ಬೆಳೆದು ಬಂದಿರುವ ನಂಬಿಕೆ, ಶ್ರದ್ಧೆ ಇಂಥದೊಂದು ಪರಂಪರೆ ಕರ್ನಾಟಕದ ಕಾಳೇನಹಳ್ಳಿಯಲ್ಲಿ

ಕಾಳಿಂಗಗೊಲ್ಲನ ವಂಶಜರೇ ಎಂದು ನಂಬಿರುವ ಕಾಳಿಂಗಗೌಡನ ಮನೆಯಲ್ಲಿ ಹೇಗೆ ಜೀವಂತವಾಗಿತ್ತೆಂಬುದನ್ನು ಲೇಖಕರು ವಿಸ್ತೃತವಾಗಿ ಚಿತ್ರಿಸುತ್ತಾರೆ.

ಗೋವಿನ ಬಗೆಗೆ ಭಾರತೀಯ ಮತ್ತು ಪಾಶ್ಚಾತ್ಯ ಪರಿಕಲ್ಪನೆಗಳ ಜೊತೆಗೇ, ಎರಡು ವಿಭಿನ್ನ ಸಂಸ್ಕೃತಿಗಳಿಗೆ ಸೇರಿದ ಗಂಡು ಹೆಣ್ಣು ಮದುವೆಯಾಗಿ ಆ ಹೆಣ್ಣು ತನ್ನ ದೇಶ ಬಿಟ್ಟು ಗಂಡನ ದೇಶವಾದ, ತನ್ನ ದೇಶಕ್ಕೆ ತೀರಾ ವಿಭಿನ್ನ ಸಂಸ್ಕೃತಿಯ ದೇಶಕ್ಕೆ ಬಂದಾಗ ಉಂಟಾಗುವ ಪರಿಣಾಮಗಳನ್ನೂ, ಈ ಪರಿಣಾಮಗಳಿಗೆ ಹಿನ್ನೆಲೆಯಾಗಿ ಪಾರಂಪರಿಕ ಭಾರತೀಯ ಸಂಸ್ಕೃತಿಯ ಚಿತ್ರಣವನ್ನು ಮನಮುಟ್ಟುವಂತೆ ಕಟ್ಟಿಕೊಟ್ಟಿದ್ದಾರೆ ಕಾದಂಬರಿಕಾರರು.

ಈ ಕಾದಂಬರಿಯ ಸಂರಚನೆಯನ್ನು ಎರಡುಭಾಗಗಳಾಗಿ ವಿಂಗಡಿಸಬಹುದು. ಎರಡು ಭಾಗಗಳನ್ನು ಒಳಗೊಂಡಿರುವ ಕಾದಂಬರಿಯ

ಅತ್ಯಂತ ಚಿಕ್ಕದಾದ ಕತೆಯನ್ನು ನಿರೂಪಿಸುವ ಈ ಕಾದಂಬರಿಯಲ್ಲಿ ವಿಸ್ತಾರವಾದ ಹರವನ್ನು ತಂದಿರುವುದು 'ಶಿಲ್ಪ'ದ ದೃಷ್ಟಿಯಿಂದ ವೈಚಿತ್ರ್ಯವಾಗಿದೆ. ಅಂದರೆ ಕಾದಂಬರಿಕಾರರು ವಿಸ್ತಾರವಾಗಿ ಹರವನ್ನು ತಂದಿರುವ ಈ ಕಾದಂಬರಿಯಲ್ಲಿ ೩ ಪ್ರಮುಖವಾದ ಘಟ್ಟಗಳನ್ನು ತರುತ್ತಾರೆ. ಮೊದಲನೆಯದು ಕಾಳಿಂಗಜ್ಜನದು. ಎರಡನೆಯದು ಕಾಳಿಂಗಜ್ಜನ ಮೊಮ್ಮಗನದು. ಕಾದಂಬರಿಯಲ್ಲಿ ಈ ಎರಡು ಘಟ್ಟಗಳು ಕೂಡ ಒಂದಕ್ಕೆ ಇನ್ನೊಂದು ವಿರುದ್ಧವಾಗಿ ಸಂಭವಿಸುತ್ತಾ ಹೋಗುತ್ತದೆ.

ಎರಡನೇ ಘಟ್ಟದ ಕೇಂದ್ರ ಪಾತ್ರದೊಡನೆ ಜೋಯಿಸರಾದ ವೆಂಕಟರಮಣ, ತಾಯವ್ವ ಹಿಲ್ಡಾ ಮುಂತಾದ ಪ್ರಮುಖ ಪಾತ್ರಗಳು ಹಾಗೂ ಇದರೊಂದಿಗೆ ಜಮಾಲ್ ಮುಂತಾದ ಆಗೀಗ ಬಂದು ಹೋಗುವ ಪಾತ್ರಗಳೂ

ಸೃಷ್ಟಿಗೊಂಡು ಕಥೆಯ ವೇಗಕ್ಕೆ ಹಾಗೂ ಅಪ್ರತಿಮ ಪರಿಣಾಮಕ್ಕೆ ಕಳೆಕಟ್ಟುವಂತೆ ಲೇಖಕರು ಸೃಷ್ಟಿಸಿ ಕತೆಯನ್ನು ಹೆಣೆದುಕೊಂಡು ಹೋಗಿದ್ದಾರೆ.

ಕಾದಂಬರಿಯ ಮೂರನೇ ಘಟ್ಟದಲ್ಲಿ ಲೇಖಕರು ನವ್ಯ-ಪರಂಪರೆಯನ್ನೂ ಪಾಶ್ಚಮಾತ್ಯ ಆಚಾರ ವಿಚಾರಗಳನ್ನು ಪಡೆದು ಬಂದ ಕಾಳಿಂಗ ತನ್ನ ಹೊಸ ಜೀವನವನ್ನು ತಾನೇ ರೂಪಿಸಿಕೊಳ್ಳುವುದನ್ನು ಚಿತ್ರಿಸಿದ್ದಾರೆ.

ಕನ್ನಡದ ಪ್ರಸಿದ್ಧ ಜನಪದ ಹಾಡಾದ ಗೋವಿನ ಹಾಡಿನ ಮಣ್ಯಕೋಟಿಯ ಶಾಶ್ವತ ಮೌಲ್ಯವನ್ನು ಸಾರುವ, ಭೈರಪ್ಪನವರ ತಬ್ಬಲಿ ನೀನಾದೇ ಮಗನೇ, ಕಾದಂಬರಿ ಓದುಗರು ತಾವೇ ಅನುಭವಿಸುತ್ತಿರುವ ತಬ್ಬಲಿತನಕ್ಕೆ ಹಿಡಿದ ಕನ್ನಡಿಯಂತೆ ಮೂಡಿಬಂದಿದೆ. ವಿಚಾರ-ವಿಮರ್ಶೆ-ಸಂಘರ್ಷ ಇವುಗಳ ನಡುವೆಯೂ ನಮ್ಮ ಬದುಕನ್ನು ಹಸನಾಗಿಸುವ ಗೋವಿನ ಬಗೆಗೆ ಭಾವನಾತ್ಮಕವಾದ ಸಂಬಂಧ ರೂಪುಗೊಳ್ಳುವ ರೀತಿಯಲ್ಲಿ ಈ ಕಾದಂಬರಿಯ ಕಥನದ ತಂತ್ರಗಾರಿಕೆ ಇದೆ.

ಕಥನವನ್ನು ಕಟ್ಟುವ, ಶಿಲ್ಪವನ್ನು ಕೆತ್ತುವ ಭೈರಪ್ಪನವರ ಈ ನಾಜೂಕುತನವೇ ಅವರಿಗೆ 'ಸನಾತನೀ' ಎಂಬ ಹಣೆಪಟ್ಟಿಯನ್ನು ಕಟ್ಟಲು ವಿರೋಧಿಗಳಿಗೆ ಆಹಾರವನ್ನು ಒದಗಿಸಿವೆ.

***************

## 'ಗೃಹಭಂಗ'–ಕಥನಕ್ರಿಯೆ.

ಎಸ್.ಎಲ್.ಭೈರಪ್ಪನವರ ಎಂಟನೆಯ ಕಾದಂಬರಿ 'ಗೃಹಭಂಗ' ಇವರ ಉಳಿದ ಎಲ್ಲ ಕಾದಂಬರಿಗಳಿಗಿಂತ ಒಂದು ದೃಷ್ಟಿಯಲ್ಲಿ ವಿಭಿನ್ನವಾದ ರಚನೆಯನ್ನು ಈ ಕಾದಂಬರಿಯಲ್ಲಿ ನಾವು ಕಾಣಬಹುದಾಗಿದೆ. ಕಾದಂಬರಿಯ ಶೀರ್ಷಿಕೆಯೇ ವ್ಯಕ್ತಪಡಿಸುವಂತೆ ಒಂದು ಗ್ರಾಮ್ಯ ಸಂಸಾರದ ದುರಂತ ಚಿತ್ರಣ ಇಲ್ಲಿಯ ಕಥಾವಸ್ತು. ಸ್ವತಃ ಕಾದಂಬರಿಕಾರರೇ 'ಗೃಹಭಂಗ' ಕಾದಂಬರಿ ಕೃತಿಗೆ ಮುನ್ನುಡಿಯನ್ನು ಬರೆಯುತ್ತಾ–"ಈ ಕಾದಂಬರಿ ಯಾವ ಸಮಸ್ಯೆಯನ್ನು ಕುರಿತದ್ದಲ್ಲ–ವಸ್ತು ನಿಷ್ಠವಾಗಿ ಜೀವನವನ್ನು ಕಾಣಿಸುವ ಪ್ರಯತ್ನ ಇದಾಗಿದೆ ಎಂದಿರುತ್ತಾರೆ. ಯಾವುದಾದರೊಂದು ಸಮಸ್ಯೆಯನ್ನು ಚಿತ್ರಿಸುವುದರಿಂದಲೇ ಒಂದು ಕಾದಂಬರಿ ಮಹಾಕೃತಿಯಾಗುವುದಿಲ್ಲ ಎನ್ನುವ ವಿಮರ್ಶಕರ ವಿಚಾರಗಳಿಗೆ ಇದೊಂದು ನಿದರ್ಶನ ಕೃತಿಯಾಗಿ ಹೊರಹೊಮ್ಮಿದೆ. ಭೈರಪ್ಪನವರ ಕಾದಂಬರಿಗಳಲ್ಲಿನ ತಾತ್ವಿಕ ಜಿಜ್ಞಾಸೆಗಿಂತ, ಅವರ ನಿರೂಪಣ ಸಾಮರ್ಥ್ಯ, ವಸ್ತು ವಿನ್ಯಾಸ, ಗಂಭೀರ ಚಿಂತನೆಗಳೇ ಓದುಗರನ್ನು ಹೆಚ್ಚಾಗಿ ಸೆಳೆಯುತ್ತವೆಂದರೆ ತಪ್ಪಲ್ಲ"[೧].

'ಗೃಹಭಂಗ'–ಪ್ರಮುಖವಾಗಿ ಮೂರು–ನಾಲ್ಕು ದಶಕಗಳ ಹಿಂದಿನ ಗ್ರಾಮ ಜೀವನದ ಚಿತ್ರಣವನ್ನು ನೀಡುತ್ತದೆ. ಹಳೆಯ ಮೈಸೂರಿನ ಬಯಲು ಸೀಮೆಯ ಮಧ್ಯಮ ವರ್ಗದ ಎರಡು ಬ್ರಾಹ್ಮಣ ಕುಟುಂಬಗಳ ಕಥೆ ಇಲ್ಲಿ ನಿರೂಪಿತಗೊಂಡಿದೆ. ರಾಮಸಂದ್ರದ ಶ್ಯಾನುಭೋಗ್ ರಾಮಣ್ಣನವರ ವಿಧವೆ ಗಂಗಮ್ಮ ಹಾಗೂ ಅವಳ ಇಬ್ಬರು ಘಟಿಂಗ ಮಕ್ಕಳನ್ನು ಕುರಿತ ಮುಖ್ಯ ಕಥೆಯೊಡನೆ, ನಾಗಲಾಪುರದ ಕಂಠೀಜೋಯಿಸರ ಮಗಳು ನಂಜಮ್ಮ ಮತ್ತು ಮಗ ಕಲ್ಲೇಶನ ಕಥೆಯನ್ನು ಕಾದಂಬರಿಕಾರ್ರರು ಕಾದಂಬರಿಯಲ್ಲಿ ಹೆಣೆದಿರುತ್ತಾರೆ.

---

[೧] 'ಗೃಹಭಂಗ' ಮುನ್ನುಡಿ ಎಸ್.ಎಲ್. ಭೈರಪ್ಪ ಸಾಹಿತ್ಯ ಭಂಡಾರ ೧೯೭೦.

ವಿಧವೆಯಾದ ಗಂಗಮ್ಮನ ಇಬ್ಬರು ಗಂಡು ಮಕ್ಕಳಾದ ಚನ್ನಿಗರಾಯ ಮತ್ತು ಅಪ್ಪಣ್ಣ ಅವರ ಅವಿವೇಕದ ಪರಮಾವಧಿಯು ಕಾದಂಬರಿಯ ಮೊದಲ ಪುಟದಿಂದಲೇ ಗಂಗಮ್ಮ ಮತ್ತು ಅವಳ ಸಂಸ್ಕಾರ ಸ್ಪಷ್ಟವಾಗಿ ಚಿತ್ರಣಗೊಂಡಿದೆ. ಮಾತೆತ್ತಿದರೆ ಅವರ ಬಾಯಲ್ಲಿ ಕತ್ತೆಮುಂಡೆ, ಸೂಳೆಮುಂಡೆ, ಬೋಳಿಮುಂಡೆ ಇವೇ. . . . ಇವಳ ಇಬ್ಬರು ಮಕ್ಕಳು ಸೇರಿಕೊಂಡು ಒಮ್ಮೆ ತಾಯಿಗೆ ಬೈದು ಹುಲ್ಲು ಮೆದೆಗೆ ಬೆಂಕಿ ಹಾಕಿ ಅದು ಇಡೀ ಊರಿನ ಕಬ್ಬಿನ ಗದ್ದೆಗೇ ಹಬ್ಬಿ ಊರವರೆಲ್ಲಾ ನ್ಯಾಯವಿದ್ದೋ ಇಲ್ಲದೆಯೋ ದಂಡ ಕೇಳುತ್ತಾರೆ. ಗಂಗಮ್ಮನ ಪೆದ್ದುತನದಿಂದಾಗಿ ತನ್ನ ಎಲ್ಲ ಜಮೀನನ್ನೂ ಪಟೇಲನಿಗೆ ಎರಡು ಸಾವಿರಕ್ಕೆ ಪತ್ರ ಬರೆದು ಕೊಡುವುದರ ಮೂಲಕ ದಂಡ ತೀರಿಸುತ್ತಾಳೆ. ಆದರೆ ಮುಂದೊಂದು ದಿನ ಸಾಲ ಒಂದಕ್ಕೆ ಹತ್ತಾಗಿ, ಬಡ್ಡಿ ಬೆಳೆದು ಗಂಗಮ್ಮ ತನ್ನ ಎಲ್ಲಾ ಆಸ್ತಿಯನ್ನು ಕಳೆದುಕೊಳ್ಳುತ್ತಾಳೆ.

ಕಾದಂಬರಿಯ ಕೇಂದ್ರ ಪಾತ್ರ ಚನ್ನಿಗರಾಯನ ಹೆಂಡತಿಯಾದ ನಂಜಮ್ಮನದು. ಆಕೆ ಕಂಠೀ ಜೋಯಿಸರ ಮಗಳು ಹಾಗೂ ಕಲ್ಲೇಶನ ಸಹೋದರಿ, ಕಾದಂಬರಿಕಾರರು ಎರಡು ಕುಟುಂಬಗಳ ಕಥೆಯನ್ನು ಹೆಣೆಯುವಾಗ ನಂಜಮ್ಮನ ಪಾತ್ರವನ್ನು ಎರಡೂ ಕಡೆಗಳಲ್ಲಿ ಪ್ರಧಾನವಾಗಿರಿಸಿಕೊಳ್ಳುತ್ತಾರೆ. ಯಾವುದೇ ಸಂಸ್ಕಾರದ ಅರಿವೇ ಇಲ್ಲದ ಅತ್ತೆ-ಗಂಡನ ಜೊತೆಗೆ ಬದುಕನ್ನು ಸಾಗಿಸುತ್ತಿರುವಾಗ ನಂಜಮ್ಮ ಜೀವನದಲ್ಲಿ ಅನೇಕ ನೋವನ್ನು ಅನುಭವಿಸುತ್ತಾಳೆ. ಕೈಹಿಡಿದ ಗಂಡನೇ ಅವಳನ್ನು ದನದಂತೆ ಬಡಿದಾಗ ತನ್ನ ಗಂಡನ ಸೋದರನೇ ತನ್ನನ್ನು ಒದೆದಾಗ, ಅವಳ ಮನಸ್ಸು ಕುದಿಯುತ್ತದೆ. ರಾವೇಗೌಡನ ಕಾರುಭಾರದಿಂದಾಗಿ ಮನೆ ಹೊಲ ಎಲ್ಲವೂ ಅವನ ಕೈ ಸೇರುವಂತೆ ಆದಾಗ, ಕಲ್ಲೇಶನ ಮೂಲಕ ಶ್ಯಾಮಭಟ್ಟರ ಮೂಲಕ ಮಾದೇವಯ್ಯನವರ ಮೂಲಕ ಗಂಗಮ್ಮ ಚನ್ನಿಗರಾಯ ಹಾಗೂ ಅಣ್ಣಪ್ಪಯ್ಯನಿಗೆ ತಿಳುವಳಿಕೆಯನ್ನು ಹೇಳಿ ಮನೆಯನ್ನು ಉಳಿಸುವ ಯತ್ನ ಮಾಡಿದಳು. ಗಂಗಮ್ಮನ ದುಡುಕುತನದಿಂದ

ನಂಜಮ್ಮನ ಪ್ರಯುತ್ನಗಳೆಲ್ಲ ಫಲಿಸದೇ ಮನೆ-ಜಮೀನುಗಳೆಲ್ಲವನ್ನೂ ಕಳೆದುಕೊಳ್ಳಬೇಕಾಯಿತು.

ಹೀಗೆ ನಿರ್ಗತಿಕರಾದ ಸಂಸಾರದ ಪೋಷಣೆಯ ಭಾರವನ್ನು ನಂಜಮ್ಮ ವಹಿಸಿದಳು. ಗಂಡ ಹೆಸರಿಗೆ ಮಾತ್ರ ಶ್ಯಾನುಭೋಗ, ಲೆಕ್ಕ ಬರೆಯುವುದು, ಕಂದಾಯ ವಸೂಲಿ, ಎಲ್ಲ ಕೆಲಸವೂ ನಂಜಮ್ಮನದೇ. ಮುಂದೆ ಜೀವನೋಪಾಯಕ್ಕೆ ಊಟದ ಎಲೆ ಹಚ್ಚಿ ಮಾರುವ ಕೆಲಸವನ್ನು ಅವಲಂಬಿಸುತ್ತಾಳೆ. ವಯಸ್ಕ ಹೆಂಗಳೆಯರಿಗೆ, ರಾತ್ರಿ ಶಾಲೆಯಲ್ಲಿ ಪಾಠವನ್ನು ಹೇಳಿದಳು. ಹೀಗೆ ನಂಜಮ್ಮ ತನ್ನ ಸಂಸಾರ ನಿರ್ವಹಣೆಗೆ ತನ್ನ ಶಕ್ತಿ ಮೀರಿ ಕೆಲಸಮಾಡಿದಳು. ಬರಗಾಲ ಬಂದು ಅನ್ನಕ್ಕಾಗಿ ತಹತಹಿಸುತ್ತಿರುವಾಗ ಶೆತ್ತೆಗೆಡ್ಡೆ, ಕಿತ್ತಾಳೆ ಗಿಣ್ಣುಗಳನ್ನು ತಂದು ಜೀವಿಸಬೇಕಾದ ನಂಜಮ್ಮನ ಸ್ಥಿತಿ ಶೋಚನೀಯವಾದುದು. ಮಗಳು ಪಾರ್ವತಿಯ ಮದುವೆಯ ವಿಷಯದಲ್ಲಿ ತಂದೆಯ ಕೋಪವನ್ನೂ ಸಹಿಸಬೇಕಾಯಿತು. ಆದರೂ ಮಗಳ ಮದುವೆ ಮಾಡಿ ಸಂತಸದಿಂದಿರುವಾಗ ಕೆಲವೇ ದಿನಗಳಲ್ಲಿ, ಮಕ್ಕಳಾದ ಪಾರ್ವತಿ ಹಾಗೂ ರಾಮಣ್ಣನನ್ನು ಕಳೆದುಕೊಳ್ಳಬೇಕಾಯಿತು. ದೇವರಲ್ಲಿದ್ದ ನಂಬಿಕೆಯನ್ನು ಇದರಿಂದ ಕಳೆದುಕೊಂಡಳು. ಆತ್ಮೀಯರ ಸಲಹೆಯ ಮೇರೆಗೆ ಶೃಂಗೇರಿ ಯಾತ್ರೆಯನ್ನು ಕೈಗೊಂಡಳು. ಮೈದುನ ಅಣ್ಣಪ್ಪ ಮತ್ತು ಮಗ ವಿಶ್ವನೊಂದಿಗೆ ಅವಳು ಕಾಲು ನಡಿಗೆಯಲ್ಲೇ ಪವಿತ್ರವಾದ ಶೃಂಗೇರಿ ಯಾತ್ರೆಮಾಡಿ ಬಂದಳು. ಶೃಂಗೇರಿ ಯಾತ್ರೆಯಿಂದ ಬಂದ ಮೇಲೆ ಅವಳ ಗಮನವೆಲ್ಲ ವಿಶ್ವನ ವಿದ್ಯಾಭ್ಯಾಸದ ಮೇಲೆ. ಅವನನ್ನು ಒಬ್ಬ ಶೇಕದಾರನಾದರೂ ಆಗುವಷ್ಟು ಓದಿಸಬೇಕೆಂಬ ಆಸೆ ಆಕೆಗೆ. ಇದರಿಂದಾಗಿ ಅಣ್ಣನ ಮನೆಗೆ ವಿಶ್ವನನ್ನು ಮಿಡ್ಲ್ ಸ್ಕೂಲ್ ವ್ಯಾಸಂಗಕ್ಕೆ ಕಳಿಸುತ್ತಾಳೆ. ನಂತರ ಸ್ವಂತ ಮನೆ ಕಟ್ಟಿಸಬೇಕೆಂಬ ಹಂಬಲದಿಂದ ಆ ಉದ್ಯೋಗದಲ್ಲಿ ನಿರತಳಾಗುತ್ತಾಳೆ. ನೂತನ ಗೃಹ ನಿರ್ಮಾಣವಾಯಿತು ಎನ್ನುವಷ್ಟರಲ್ಲಿ ಪ್ಲೇಗ್ ಮಾರಿಗೆ ತುತ್ತಾಗಿ ನಂಜಮ್ಮ ಸಾವನ್ನಪ್ಪುತ್ತಾಳೆ.

'ಗೃಹಭಂಗ' ಕಾದಂಬರಿಯ 'ಕಥನ ಶಿಲ್ಪ' ಪ್ರಮುಖವಾಗಿ ನಂಜಮ್ಮನ ಪಾತ್ರವನ್ನೇ ಕೇಂದ್ರೀಕೃತಗೊಳಿಸಿದೆ. ಅವಳ ಬದುಕಿನ ಹೋರಾಟ ಅನುಭವಿಸಿದ ಶೋಷಣೆ, ನೆಲದ ಮಣ್ಣಿನಿಂದ ಹುಟ್ಟಿದ ನಿಷ್ಠುರತನ, ಕಠೋರತೆ, ಅದರೊಂದಿಗೆ ದೂತ್ ಎಂದು ಎದುರಾಗುವ ಕಷ್ಟಗಳನ್ನು ಎದುರಿಸುವ ಸಹನೆ, ಹೆಣ್ಣಿನ ಛಲ–ಇವುಗಳೇ 'ಗೃಹಭಂಗ' ಕಾದಂಬರಿಯ 'ಶಿಲ್ಪ'ವನ್ನು ಕಟ್ಟುತ್ತಾ ಹೋಗುತ್ತದೆ.

'ಗೃಹಭಂಗ' ಕಾದಂಬರಿಯ ಕಥನ ಶಿಲ್ಪದಲ್ಲಿ ನಾವು ಗಮನಿಸಬೇಕಾದ ಅತ್ಯಂತ ಪ್ರಮುಖ ಅಂಶವೆಂದರೆ ಇಲ್ಲಿ ಕಾದಂಬರಿಕಾರರು ಶಿಲ್ಪವನ್ನು ಕೆತ್ತುವುದಲ್ಲ ಆ ಕಾದಂಬರಿಯ ಒಳಗೆ ಮೂಡಿ ಬಂದ ಕೇಂದ್ರ ಪಾತ್ರವೊಂದು ಕಥನ ಶಿಲ್ಪವನ್ನು ಕಟ್ಟುತ್ತಾ ಹೋಗುತ್ತದೆ. ಈ ಕಥನ ಕ್ರಿಯೆ ಮತ್ತು ಹಂದರ ಕನ್ನಡ ಕಾದಂಬರಿಗಳಲ್ಲಿಯೇ ಗಮನಿಸಬಹುದಾದ ಪ್ರತ್ಯೇಕವಾಗಿ ನಿಲ್ಲುವ ಒಂದು ವಿಶಿಷ್ಟ ತಂತ್ರವಾಗಿದೆ.

ಹೀಗೆ 'ಗೃಹಭಂಗ' ಕಾದಂಬರಿಯಲ್ಲಿ ನಂಜಮ್ಮನ ಪಾತ್ರವನ್ನು ಕಾದಂಬರಿಕಾರರು ಆದರ್ಶ ಸೊಸೆಯಾಗಿ, ಅತ್ತಿಗೆಯಾಗಿ, ಸುಗುಣೆ ಹೆಂಡತಿಯಾಗಿ ಹಾಗೂ ಅಕ್ಕರೆಯ ತಾಯಿಯಾಗಿ ಚಿತ್ರಿಸಿರುವುದನ್ನು ಕಾಣಬಹುದು.

ಗಂಗಮ್ಮ ಯಾವ ಜನ್ಮದ ಸಂಸ್ಕೃತಿಯ ಪುಣ್ಯವೂ ಇಲ್ಲದೆ ಬೆಳೆದು ಕಠಿಣಗಳ ಮಂಜಿನಲ್ಲಿ ಹಣ್ಣಾಗದೆ, ಕಾಯಾಗಿಯೇ ಉಳಿದ ವ್ಯಕ್ತಿ. ಅವಳದು ಕಠಿಣವಾದ ಸ್ವಭಾವ ಕಲ್ಲುಮೊರಡಿಯಂತಹ ಪರಿಸರದ ಹಿನ್ನೆಲೆಯಲ್ಲಿ ಬೆಳೆದ ಅವಳಿಗೆ ತನ್ನ ಅಂತರಂಗದ ವಿವೇಚನೆ ನಡೆಸುವಷ್ಟು ಅರಿವು ಇಲ್ಲದ ಪೆದ್ದುತನ. ಆದ್ದರಿಂದಾಗಿ ಕಾದಂಬರಿಕಾರರು ಅವಳ ಪಾತ್ರವನ್ನು ಕಾದಂಬರಿಯಲ್ಲಿ ಕೇವಲ ಒಂದು ಚಿತ್ರಣವಾಗಿ ಬೆಳೆಸಿಕೊಂಡು ಸಾಗುತ್ತಾರೆ.

ಚನ್ನಿಗರಾಯ ಮತ್ತು ಅಪ್ಪಣ್ಣಯ್ಯ- ಇವರಿಬ್ಬರೂ ಗಂಗಮ್ಮನ ಮಕ್ಕಳು. ಅಮ್ಮನ ಚಾಳಿಯನ್ನೇ ಅರೆದು ಹೊಯ್ದುಕೊಂಡು ಬೆಳೆದವರು. ಮುಳ್ಳುಗಿಡದಂತೆ ಬೆಳೆದು ಬದುಕಿದ, ಯಾವ ಪುರುಷಾರ್ಥವನ್ನು ಕಾಣದೆ, ಕಾಣಬೇಕೆಂಬ ಅರಿವಿಲ್ಲದೆ ಬದುಕುವ ಮನುಷ್ಯರು ಇವರು. ಈ ಮೂರು ಪಾತ್ರಗಳ ಮೂಲಕ ಕಾದಂಬರಿಕಾರರು ನಮ್ಮ ಹಳ್ಳಿಯ ಇಂಥ ಹಲವಾರು ಕುಟುಂಬಗಳು ಎಷ್ಟೊಂದು ವ್ಯಗ್ರ ಮತ್ತು ಕ್ರೂರ ಜೀವನಕ್ಕೆ ಅಂಟಿಕೊಂಡು ಬದುಕುತ್ತವೆ. ಎಂಬುದನ್ನು ತುಂಬಾ ವಾಸ್ತವಿಕವಾಗಿ ಚಿತ್ರಿಸಿಕೊಂಡು ಹೋಗುತ್ತಾರೆ.

ಚನ್ನಿಗರಾಯನ ಹೊಟ್ಟೆಬಾಕತನ, ಗಂಗಮ್ಮನ ಒಡಕುಬಾಯಿ, ಅಪ್ಪಣ್ಣಯ್ಯನ ಒರಟುತನ, ತಲೆಹೋಕ ಕಂಠೀ ಜೋಯಿಸನ ವಕ್ರತೆ- ಇವುಗಳ ಜೊತೆಗೆ ನಂಜಮ್ಮನ ಸಹನೆ, ಛಲ, ಮಾದೇವಯ್ಯನವರ ಅಸ್ವಾದೃಶ ಮಾನವೀಯತೆಗಳ ವೈದೃಶ್ಯವನ್ನು ಚಿತ್ರಿಸಿ ಕಾದಂಬರಿಕಾರರು ಕಥೆಯನ್ನು ಬೆಳೆಸಿದ್ದಾರೆ. ಗಂಗಮ್ಮ ಮತ್ತು ಅವಳ ಮಕ್ಕಳಾಗಲಿ, ಕಂಠೀ ಜೋಯಿಸ ಅಥವಾ ಅವನ ಮಗ ಸೊಸೆಯರಾಗಲಿ, ತಮ್ಮ ದುರಂತತೆಯ ಅರಿವೇ ಇಲ್ಲದೆ ಬಾಳುವ ವ್ಯಕ್ತಿಗಳಾಗಿರುವುದರಿಂದ ಇಡೀ ಕಾದಂಬರಿಯೇ ಒಂದು ವ್ಯಥೆಯ ಕಥೆಯಾಗಿ ನಿರ್ಮಿತಿಕೊಂಡಿದೆ.

ಗೃಹಭಂಗದ ಪಾತ್ರಗಳು ಎದುರಿಸಬೇಕಾಗಿರುವುದು ಯಾವುದೇ ಬೌದ್ಧಿಕ/ತಾತ್ವಿಕ ಸಮಸ್ಯೆಗಳನ್ನಲ್ಲ, ವೇದಾಂತ ಆಧ್ಯಾತ್ಮಗಳ ಗೊಂದಲವನ್ನಲ್ಲ, ಅದಮ್ಯ ಕಾಮದ ಸೆಳೆತವನ್ನಲ್ಲ, ಬದಲಿಗೆ ಅವುಗಳನ್ನೂ ಹಗಲಿರುಳೂ ಕಾಡುವುದು ಇರವಿನ ಪ್ರಶ್ನೆ, ಉಳಿವಿನ ಪ್ರಶ್ನೆ, ಹಸುವಿನ ಪ್ರಶ್ನೆ. ಅದರಲ್ಲಿಯೂ ಮುಖ್ಯ ಸ್ತ್ರೀಪಾತ್ರ ನಂಜಮ್ಮನನ್ನು ಹಗಲಿರುಳೂ ಬಾಧಿಸುವುದು ತನ್ನ ಮಕ್ಕಳ ಹೊಟ್ಟೆಯ ಚಿಂತೆ. ಯಾವುದೇ ಸಾಮಾಜಿಕ ಅಥವಾ ಭಾವನಾತ್ಮಕ ರಕ್ಷಣೆಯಿರದೇ ಆರ್ಥಿಕ ಒತ್ತಾಸೆಯೂ

ಇರದೆ, ಕಡುಬಡತನ, ಗಂಡನ ದಿವ್ಯನಿರ್ಲಕ್ಷ್ಯ ಸ್ವಾರ್ಥಗಳ ನಡುವೆ ತನ್ನ ಮತ್ತು ಮಕ್ಕಳ ಇರವಿಗಾಗಿ, ಅಸ್ಥಿತ್ವಕ್ಕಾಗಿ ನಿರಂತರ ಹೋರಾಟ ನಂಜಮ್ಮನದು.

ಕಾಲಾನುಕ್ರಮ ನಿರೂಪಣೆಯ ರೀತಿಯಲ್ಲಿ ನಿರೂಪಿಸಲ್ಪಟ್ಟಿರುವ 'ಗೃಹಭಂಗ'ದಲ್ಲಿ ತಾಂತ್ರಿಕ ವಿನ್ಯಾಸ ಗುಪ್ತಗಾಮಿನಿಯಂತೆ ಹರಿಯುತ್ತದೆ. ಘಟನೆಗಳ ವಿವರಣೆಯ ಮೂಲಕ ಪಾತ್ರಗಳ ಗುಣ, ನಡತೆ, ತಮಗೆ ತಾವೇ ತೆರೆದುಕೊಳ್ಳುತ್ತ ಹೋಗುವುದು. ಮೇಲ್ನೋಟಕ್ಕೆ ಅತಿ ಸರಳವಾಗಿ ತೋರುವ ರಚನಾಬಂಧ ತನ್ನದೇ ಆದ ಸೂತ್ರಗಳನ್ನು ಹೊಂದಿದೆ. ಕೃತಿಯ ಮೊದಲಿನಿಂದಲೂ ನಡೆಯುವ ಘಟನೆಗಳು ಒಂದಕ್ಕೊಂದು ಬೆಸೆದುಕೊಳ್ಳುತ್ತಾ ಹೋಗುವ ಪರಿಯಿಂದಾಗಿ ಇಡೀ ಕೃತಿಗೆ ಸಮರಸದ 'ಬಂಧ' ಬಂದಿದೆ. ಅತಿ ಸಮರ್ಥ ಹಾಗೂ ಮನಮುಟ್ಟುವ ನಿರೂಪಣೆಯಿಂದಾಗಿ ಹಲವು ವ್ಯಕ್ತಿಗಳು, ಘಟನೆಗಳು, ಪ್ರಸಂಗಗಳು ಮನಸ್ಸಿನಲ್ಲಿ ಅಚ್ಚೊತ್ತಿಕೊಂಡುಬಿಡುತ್ತವೆ.

ಈ ಕಾದಂಬರಿಯಲ್ಲಿ ಮನುಷ್ಯ ಪಾತ್ರಗಳನ್ನಲ್ಲದೆ, ನೈಸರ್ಗಿಕ ವಿಕೋಪಗಳಾದ ಪ್ಲೇಗು, ಕ್ಷಾಮ ಇವುಗಳೂ ಕೂಡ ಪಾತ್ರಗಳಂತೆ ಕಾರ್ಯ ನಿರ್ವಹಿಸುತ್ತವೆ. ಯಾವುದೇ ಬೌದ್ಧಿಕ ಜಿಜ್ಞಾಸೆಯ, ತಾತ್ವಿಕ, ವೈಚಾರಿಕ ವಿಶ್ಲೇಷಣೆಗಳ ಹಂಗಿಲ್ಲದೆ ಬದುಕನ್ನು ಕೇವಲ ಬದುಕಾಗಿ ನೋಡುವ ಸಾಕ್ಷಿ ಪ್ರಜ್ಞೆಯ ಕೃತಿ 'ಗೃಹಭಂಗ', ಯಾವುದೇ ಸಿದ್ಧಾಂತದ ವ್ಯಾಖ್ಯೆಗೂ ನಿಲುಕದ, ಬದುಕಿನ ಒಳನೋಟಗಳ, ಸಂಕೀರ್ಣ ವಿನ್ಯಾಸಗಳ ದರ್ಶನ ಮಾಡಿಸುವ ಈ ಕಾದಂಬರಿ ಬದುಕಿಗೆ ಬದುಕೇ ಬರೆದ ಭಾಷ್ಯದಂತೆ ರಚನೆಗೊಂಡಿದೆ.

ಹೀಗೆ ಕಾದಂಬರಿಕಾರರು ನಿರಾತಂಕವಾಗಿ ಕಥೆ ಹೇಳಿ ಮುಗಿಸುವ ಕಥನಕಲೆಯಿಂದಾಗಿ ಕಾದಂಬರಿಯು ಎಲ್ಲಿಯೂ ಕುಂಟುವುದಿಲ್ಲ. ಇದೇ ಈ ಕಾದಂಬರಿಯ ಮತ್ತು ಕಾದಂಬರಿಕಾರರ ಜನಪ್ರಿಯತೆಯ ಗುಟ್ಟು.

## 'ನಿರಾಕರಣ'–ಕಥನಕ್ರಿಯೆ.

ಮಾನವ ಸಂಬಂಧ ಹಾಗೂ ನಿರ್ಲಿಪ್ತತೆಯ ಬಗ್ಗೆ ಎಸ್.ಎಲ್. ಭೈರಪ್ಪನವರು ಬರೆದ ಕಾದಂಬರಿ ನಿರಾಕರಣ. ಕಥಾನಾಯಕನಾದ ನರಹರಿ ತನ್ನ ಹೆಂಡತಿಯ ನಿಧನದ ನಂತರ, ಮಕ್ಕಳನ್ನೆಲ್ಲ ದತ್ತುಕೊಟ್ಟು ನಿರ್ಲಿಪ್ತನಾಗಿ ಶಾಂತಿಯನ್ನರಸಿ ಹೋಗುವುದೇ ಈ ಕಾದಂಬರಿಯ ಕಥಾವಸ್ತು.

ಕಾದಂಬರಿಯ ಭಿತ್ತಿಯಲ್ಲಿ ಕಾದಂಬರಿಕಾರರು ಸ್ಮರಣ ತಂತ್ರವನ್ನು ಬಳಸಿಕೊಂಡು ಕತೆಯನ್ನು ನಿರ್ವಹಿಸುತ್ತಾರೆ. ಕಥಾನಾಯಕನಾದ ನರಹರಿಯ ಸನ್ಯಾಸಾಶ್ರಮದ ಪೂರ್ವಾಶ್ರಮದ ನೆನಪುಗಳನ್ನು ಅನ್ವೇಷಿಸುವ ಮತ್ತು ಅನಾಥಾಶ್ರಮದಲ್ಲಿ ಪೂರ್ವಾಶ್ರಮ ಮತ್ತು ಸನ್ಯಾಸಾಶ್ರಮಗಳೆರಡರ ಅನುಭವಗಳನ್ನೂ ಸ್ಮರಿಸಿಕೊಳ್ಳುವಂತೆ ಕಾದಂಬರಿಯ ಭಿತ್ತಿ ನಿರ್ಮಾಣವಾಗಿದೆ.

ಚಿಕ್ಕಂದಿನಿಂದಲೇ ತಬ್ಬಲಿಯಾದ ನರಹರಿ ಮುಂಬಯಿಯಲ್ಲಿ ಪಗಾರದ ಟೈಪಿಸ್ಟ್ ಹುದ್ದೆಯಲ್ಲಿ ತನ್ನ ಇತಿಮಿತಿಗಳನ್ನು ಕಂಡವನು. ವೇದಾಂತ ಸಂಬಂಧವಾದ ಪುಸ್ತಕಗಳನ್ನು ಓದಿಕೊಂಡ ಈತನಿಗೆ ಒಂಟಿತನದ ಬಯಕೆಯಿದೆ. ಆದರೂ ಗೆಳೆಯನ ಮಾತಿನಂತೆ ಆತನ ತಂಗಿ ಲಲಿತೆಯನ್ನು ಮದುವೆಯಾಗುತ್ತಾನೆ. ಆಕೆ ಮೂರು ಮಕ್ಕಳನ್ನು ಹಡೆದು ತೀರಿಕೊಳ್ಳುತ್ತಾಳೆ. ಮತ್ತೆ ಸನ್ನಿವೇಶದ ಒತ್ತಾಯಕ್ಕೆ ಮಣಿದು ಅವಳ ತಂಗಿ ವೈದೇಹಿಯನ್ನು ಮದುವೆಯಾಗುತ್ತಾನೆ. ಆಕೆಯೂ ಕೂಡಾ ಅವಳೆ ಮಕ್ಕಳನ್ನ ಹಡೆದು ತೀರಿಕೊಳ್ಳುತ್ತಾಳೆ. ಐವರು ಮಕ್ಕಳನ್ನು ಸಾಕಲು ಶಿಕ್ಷಣ ಕೊಡಿಸಲು ಮತ್ತು ಆರೋಗ್ಯವಂತರನ್ನಾಗಿ ಮಾಡಲು ನರಹರಿಗೆ ಸಮಯವೂ ಇಲ್ಲ, ವ್ಯವಧಾನವೂ ಇಲ್ಲ. ಮೇಲಾಗಿ ಹಣವೂ ಇಲ್ಲ. ಇಂಥ ಪರಿಸ್ಥಿತಿಯಲ್ಲಿ ಆತ ತನ್ನ ಮಕ್ಕಳನ್ನೆಲ್ಲ ಬೇರೆ ಬೇರೆ

ಸಂಸಾರಗಳಿಗೆ ದತ್ತುಕೊಟ್ಟು ತನ್ನ ಹುದ್ದೆಯನ್ನೂ ಊರನ್ನೂ ಬಿಟ್ಟು ಒಂಟಿತನದ ಬಯಕೆಯನ್ನು ಪೂರೈಸಲು ಹಿಮಾಲಯ ಪ್ರದೇಶದ ಕಡೆ ಹೊರಟು ಹೋಗುತ್ತಾನೆ.

ಹಿಮಾಲಯದ ಆ ಪ್ರದೇಶದಲ್ಲಿ ಬೇರೆ ಬೇರೆ ಗುರುಸ್ವರೂಪಿ, ಸಾಧು-ಸಂತರು ಸನ್ಯಾಸಿಗಳು ಜೊತೆಯಾಗುತ್ತಾರೆ. ಆಲೂಗಡ್ಡೆಯನ್ನು ಮಿತವಾಗಿ ತಿಂದು ಜೀವಿಸುತ್ತಾನೆ. ನಿಸ್ಸಂಗಾನಂದನೆಂದು ಹೆಸರಿಟ್ಟುಕೊಳ್ಳುತ್ತಾನೆ. ಜೀವನದ ಮೂಲ ಸ್ಥಿತಿಯೇ ಒಂಟಿತನ ಎಂದು ಕೊಂಡಿದ್ದವನು ಹಿಮದ ಬರೇ ಬಿಳಿ ಬಣ್ಣವನ್ನು ದಿನಗಟ್ಟಲೆ ನೋಡುನೋಡುತ್ತ ಬಿಳುಪು ಎಲ್ಲ ಬಣ್ಣಗಳ ಸಮಷ್ಟಿಯಂತೆ; ಆದರೆ ಈ ಸಮಷ್ಟಿಯನ್ನು ಎಷ್ಟು ದಿನವೆಂದು ಅನುಭವಿಸುವದು ಎಂದು ಜುಗುಪ್ಸೆ ಪಡುತ್ತಾನೆ. ಇದರಿಂದಾಗಿ ಭಿನ್ನ-ಭಿನ್ನ ಬಣ್ಣಗಳನ್ನು ನೋಡಲು ಆತನ ಮನಸ್ಸು ಹಾತೊರೆಯುತ್ತದೆ. ಒಡೆದ ಜೀವನ ಮತ್ತೇ ಬೇಕೆನಿಸಿತು. ಇಂಥ ಸಂದರ್ಭದಲ್ಲಿ ಕಾಶಿಯಲ್ಲಿ ಸನ್ಯಾಸಿಗಳ ಸಂಗ ದೊರೆಯುತ್ತದೆ. ಕಾಶಿಯ ಸನ್ಯಾಸಿಗಳಲ್ಲಿ ಕೆಲವರಿಗೆ ವೇಶ್ಯೆಯರ ಸಂಗವೂ ಉಂಟು. ನಿಸ್ಸಂಗಾನಂದನಾದ ನರಹರಿಗೂ ಈ ರುಚಿಯ ಅನುಭವವಾಗುತ್ತದೆ.

ಸ್ತ್ರೀಯರ ಸಂಗವನ್ನು ಬಯಸಿದ ನಂತರ ಈತನಿಂದ ಯಾವ ಸಾಧನೆಯೂ ನೆರವೇರಲಿಲ್ಲ. ಯಾವ ಎತ್ತರಕ್ಕೂ ಏರಲಾರದೆ, ಯಾವ ಪ್ರವಾಹದಲ್ಲೂ ಈಜಲಾರದೆ ತೊಳಲಾಡುವ ನರಹರಿ ಮತ್ತೆ ಮುಂಬಯಿಗೆ ಹಿಂತಿರುಗುತ್ತಾನೆ. ಅಲ್ಲಿಯ ಒಂದು ಅನಾಥಾಶ್ರಮದಲ್ಲಿ ಮಕ್ಕಳನ್ನು ನೋಡಿಕೊಳ್ಳುವ ಕೆಲಸವನ್ನು ಹೊಂದುತ್ತಾನೆ. ತನಗೆ ಹುಟ್ಟಿದ ಮಕ್ಕಳನ್ನು ಅನಾಥರನ್ನಾಗಿ ಮಾಡಿದ ಈತ, ಇತರ ಅನಾಥಮಕ್ಕಳನ್ನು ನೋಡಿಕೊಳ್ಳುವ ಕೆಲಸದಲ್ಲಿ ತೊಡಗಿರುವಾಗ ಇದು ತನ್ನ ಜೀವನದ ವ್ಯಂಗ್ಯವೆಂದು ಪರಿಭಾವಿಸಿ, ದುಃಖಿಸುತ್ತಾನೆ, ಅಳುತ್ತಾನೆ. ಇದನ್ನು ಗಮನಿಸಿದ ಆತನ ಸಹೋದ್ಯೋಗಿಯೊಬ್ಬನು ನರಹರಿಯು ದತ್ತುಕೊಟ್ಟ ಮಕ್ಕಳನ್ನು ಪತ್ತೆ ಹಚ್ಚಲು ಹೋಗಿ ಕೊನೆಯಲ್ಲಿ ಇಬ್ಬರನ್ನಾದರೂ ತಂದೆಯೊಂದಿಗೆ ಕೂಡಿಸಲು ನೆರವಾಗುತ್ತಾನೆ. ಮಗಳು

ಭವಾನಿ ಆಶ್ರಮದಲ್ಲಿ ತಂದೆ ಕೆಲಸಕ್ಕಿರುವ ಸುದ್ಧಿ ತಿಳಿದು ಅಲ್ಲಿಗೆ ಬರುತ್ತಾಳೆ. ತನ್ನ ತಮ್ಮನಾದ ರಾಮ ಆಶ್ರಮವಾಸಿಯಾಗಿರುವುದರ ಬಗ್ಗೆ ನೊಂದುಕೊಂಡು ಅಪ್ಪನಾದ ನರಹರಿಯನ್ನು ಈ ರೀತಿಯಾಗಿ ನಿಂದಿಸುತ್ತಾಳೆ.-"ಸನ್ಯಾಸ, ಮೋಕ್ಷ, ಎಲ್ಲ ನಿಮ್ಮೊಬ್ಬರಿಗೆಯೇ?... ಅಮ್ಮ, ಚಿಕ್ಕಮ್ಮ ಬದುಕಿದ್ದರೆ ಮಕ್ಕಳನ್ನು ಕೂಲಿ ಕೆಲಸ ಮಾಡಿ ಸಾಕುತ್ತಿದ್ದರು. ಹೀಗೆ ಮಾಡುತ್ತಿದ್ದರೇ?"[೧] ಎಂದು ನಿರ್ದಾಕ್ಷಿಣ್ಯವಾಗಿ ಕೇಳುತ್ತಾಳೆ. ಕೆಲಸದ ಇಂಟರ್‌ವ್ಯೂಗೆಂದು ಮುಂಬಯಿಗೆ ಬಂದವಳು ನಾನು. ಕೆಲಸ ಸಿಕ್ಕಿದರೆ ತಾನೇ ರಾಮನನ್ನು ಸಾಕುತ್ತೇನೆ. ನೀವು ಬನ್ನಿ ಎಂದು ಆಹ್ವಾನ ನೀಡುತ್ತಾಳೆ. ಇಷ್ಟಾದ ಮೇಲೂ ನರಹರಿಯು ಈ ಮಗ ಈ ಮಗಳ ಬಂಧನದಿಂದ ತಪ್ಪಿಸಿಕೊಂಡು ಹೊರಟು ಹೋಗುವ ಪ್ರಯತ್ನವನ್ನು ಮಾಡುತ್ತಾನೆ ಹಾಗೆಯೇ ವಿಫಲನಾಗುತ್ತಾನೆ. ಕೊನೆಯಲ್ಲಿ ಕಥಾನಾಯಕನಾದ ನರಹರಿ ವೈರಾಗ್ಯವನ್ನೇ ನಿರಾಕರಿಸತೊಡಗುತ್ತಾನೆ. ಅನಾಥಾಶ್ರಮದ ಕೆಲಸವನ್ನು ಉಳಿಸಿಕೊಂಡು ಮಗ-ಮಗಳ ಜೊತೆ ಇರುವುದು. ಇದಕ್ಕೆ ಅನಾಥಾಶ್ರಮದವರು ಒಪ್ಪದಿದ್ದರೆ ಈ ಕೆಲಸ ಬಿಟ್ಟುಬಿಡುವುದು. ಬೇರೆ ಕೆಲಸ ಹುಡುಕುವುದು ಎಂಬ ನರಹರಿಯ ತೀರ್ಮಾನದೊಂದಿಗೆ ಕಾದಂಬರಿ ಮುಗಿಯುತ್ತದೆ.

'ನಿರಾಕರಣ'ದ ಕಥನ ಕ್ರಿಯೆ, ಮುಂಬೈನ ಟೈಮ್ಸ್ ಪತ್ರಿಕೆಯಲ್ಲಿ ಪತ್ರಿಕಾ ಜಾಹಿರಾತಿನೊಡನೆ ಆರಂಭವಾಗುತ್ತದೆ. ಪತ್ರಿಕಾ ಜಾಹಿರಾತಿನ ಮೂಲಕ ಕಥೆಯ ವಸ್ತು ಮತ್ತು ಕಥೆಯ ಪಾತ್ರಗಳನ್ನು ಪರಿಚಯ ಮಾಡುವ ತಂತ್ರವಿನ್ಯಾಸವನ್ನು ಇಲ್ಲಿ ಕಾಣುತ್ತೇವೆ. 'ನಿರಾಕರಣ'ದ ಕಥನಕ್ರಿಯೆ ನಡೆಯುವ ಸ್ಥಳ ಮುಂಬೈನ ಗದ್ದಲ ಯಾಂತ್ರಿಕತೆಗಳಿಂದ, ದೂರವಾಗಿ ಹೃಷೀಕೇಶ, ಎತ್ತರದ ಹಿಮಾಚ್ಛಾದಿತ ಬಿಳುಪಿನ ಪರ್ವತಗಳು ಹೆಪ್ಪುಗಟ್ಟಿದ ನದಿಗಳು, ಹಸಿರು ಕಾಡು, ಹೀಗೆ ಪ್ರಕೃತಿಯ ಸುಂದರ ಪ್ರದೇಶಗಳಿಗೆ ಏರಿ, ಮತ್ತೆ ಇಳಿದು ಕಾಶಿಯಲ್ಲಿ ತಂಗಿ ಮತ್ತೆ ಮುಂಬೈಗೇ

---

[೧] 'ನಿರಾರಕರಣ' ಪುಟ ೫೮. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ೧೯೭೧.

ವರ್ಗಾಯಿಸಲ್ಪಟ್ಟು ಅಲ್ಲಿಯೇ ಸ್ಥಿರಗೊಳ್ಳುತ್ತದೆ. ಪ್ರಾಕೃತಿಕ ದೃಶ್ಯಗಳು, ಕಾದಂಬರಿಯ ಪಾತ್ರ ನರಹರಿಯ ದೃಷ್ಟಿಯಿಂದಲೇ ವರ್ಣಿಸಲ್ಪಟ್ಟು ಕಥಾನಕದ ಅವಿಭಾಜ್ಯ ಅಂಗಗಳಾಗುತ್ತವೆ. ಪರ್ವತವನ್ನೇರುವಾಗ ಉಸಿರುಗಟ್ಟುವಿಕೆ, ಏರುಬ್ಬಸಗಳು ಸಹ ನರಹರಿಯ ಅನುಭವವಾಗಿ ಕೃತಿಯ ರಚನಾ ಬಂಧದಲ್ಲಿ ಒಂದಾಗುತ್ತವೆ. ಜೀವನದ ಮೂಲಭೂತ ಸಮಸ್ಯೆಗಳನ್ನೂ ಕಲಾತ್ಮಕವಾಗಿ ಬಿಚ್ಚಿಡುವ ಪರಿಯಿಂದಾಗಿ 'ನಿರಾಕರಣ' ಭೈರಪ್ಪವನರ ಕಾದಂಬರೀ ಪ್ರಪಂಚದಲ್ಲಿ ವಿಶಿಷ್ಟ ಕೃತಿಯಾಗಿ ನಿಲ್ಲುತ್ತದೆ.

ಯಾವುದೇ ಸಾಧು-ಸಂತರ ಜೀವನದ ಹಿನ್ನೆಲೆಯನ್ನು ಹುಡುಕ ಹೊರಟರು, ಸಾಂಸಾರಿಕ ಸುಖದಿಂದ ವಂಚಿತವಾಗಿರುವ ಸತ್ಯಸಂಗತಿ ಹೊರಬರುತ್ತದೆ. ತಂದೆ-ತಾಯಿಯಿಂದ ಬೇರ್ಪಟ್ಟ, ಅನಾಥ ಮಕ್ಕಳು ವಿವಾಹದ ಯೋಗವಿಲ್ಲದೇ ಅವಿವಾಹಿತರಾಗಿ ಸುಖದಿಂದ ವಂಚಿತರಾದವರು, ಸಂಸಾರ ಬಂಧನ ಎಂಬ ಭಾವನೆ ಬೇರೂರಿ, ಯಾವ ಜಂಜಡವೂ ಇಲ್ಲದೆ ಹಕ್ಕಿಯಂತೆ ಓಡಾಡುವ ಅಲೆಮಾರಿ ಸಾಧು-ಸಂತರ ಪ್ರಭಾವಕ್ಕೆ ಒಳಗಾಗಿ, ಅವರ ಹಿಂದೆ ಹೋಗಿ ಅವರಂತೆ ಆಗುವರು, ಇವು ಸಾಮಾನ್ಯವಾಗಿ ತೋರುವ ಸಂಗತಿಗಳು.

ಇಂಥ ತಬ್ಬಲಿ ಬದುಕಿನ ಸನ್ಯಾಸಿಗಳಿಂದ ಇತರರಿಗೆ ತೊಂದರೆಯಾಗಿತೇ ಹೊರತು ನೆಚ್ಚಿದ ಕುಟುಂಬಕ್ಕೆ ಹೆಚ್ಚಿನ ನಷ್ಟವಿಲ್ಲ. ಆದರೆ ಸಂಸಾರಕ್ಕೆ ಅಂಟಿಕೊಂಡ ವ್ಯಕ್ತಿ ವೈವಾಹಿಕ ಜೀವನದಲ್ಲಿ ಬರುವ ಕಷ್ಟಗಳನ್ನು ಎದುರಿಸುವ ಸ್ಥೈರ್ಯವನ್ನು ಮೈಗೂಡಿಸಿಕೊಳ್ಳದೇ ಹೇಡಿಯಂತೆ ಬಂಧನವನ್ನು ಕಳಚಿಕೊಂಡು ಅಲೆಮಾರಿಯಾಗಿ ಹೊರಟಾಗ ಕುಟುಂಬ ಅತಂತ್ರವಾಗುತ್ತದೆ. ಬದುಕನ್ನು ನಿರಾಕರಿಸಿದ ನರಹರಿ ಅಲೆಮಾರಿತನದಲ್ಲಿ ಅರ್ಥಕಾಣದೇ ಮತ್ತೇ ಬದುಕಿಗೆ ವಾಪಾಸು ಬರುವುದೇ ನಿರಾಕರಣದ ಮುಖ್ಯ ಕಥಾಭಿತ್ತಿ.

ಕಾಮ-ಪ್ರೇಮ-ಸಾಂಸಾರಿಕ ಬದುಕು;-ಸಾಂಸಾರಿಕ ಬದುಕಿನಲ್ಲಿ ಮಡುಗಟ್ಟಿದ ದುಃಖ ಅದರ ಬಿಡುಗಡೆಗಾಗಿ ಪಲಾಯನವಾದ-ಅದಕ್ಕೊಂದು ಸನ್ಯಾಸದ ಹೆಸರು ಸಾಂಸಾರಿಕ ಸುಖದ ರುಚಿಯನ್ನು ಕಂಡ ಮನಸ್ಸು ವೈರಾಗ್ಯದಲ್ಲಿ ಮಾಗದೇ ಮತ್ತೇ ನಿನ್ನೆಡೆಗೆ ಜೋತು ಬೀಳುವುದು ಈ ಮುಂತಾದ ಸಂಗತಿಗಳೆಲ್ಲ ನಿರಾಕರಣ ಕಥಾ ಭಿತ್ತಿಯಲ್ಲಿ ಸೂಕ್ಷ್ಮವಾಗಿ ಚಿತ್ರಿತವಾಗಿದೆ.

ಭೈರಪ್ಪನವರ ಉಳಿದ ಕಾದಂಬರಿಗಳ ಕಥನ ಕಟ್ಟುವಿಕೆಗೂ ನಿರಾಕರಣದ 'ಕಥನಶಿಲ್ಪ'ಕ್ಕೂ ಇರುವ ಮುಖ್ಯ ವ್ಯತ್ಯಾಸವೇ ಮೇಲೆ ಹೇಳಿದ ವಿವೇಚನೆಯಾಗಿರುತ್ತದೆ.

ವಿಶೇಷವಾದ ತರ್ಕವಾಗಲಿ, ನಿರ್ದಿಷ್ಟ ಚಿಂತನಕ್ಕೆ ಪಟ್ಟು ಹಿಡಿದ ಹಿಡಿತವಾಗಲಿ ಇಲ್ಲದಿರುವುದೇ ನಿರಾಕರಣದ 'ಕಥನಶಿಲ್ಪ'ದ ನಿರಾಭರಣ ಸೌಂದರ್ಯವಾಗಿದೆ. ಕೂತ ಮಟ್ಟಿನಲ್ಲಿಯೇ ಓದಿಸಿಕೊಂಡು ಹೋಗುವ 'ಕಥನಕ್ರಿಯೇ' ನಿರಾಕರಣದ 'ಕಥನಶಿಲ್ಪ'ದಲ್ಲಿ ಗಮನಿಸಬೇಕಾದ ಮತ್ತೊಂದು ಮುಖ್ಯವಾದ ಅಂಶವಾಗಿರುತ್ತದೆ.

ಕಥಾನಾಯಕ ನರಹರಿ ತನ್ನ ಪತ್ನಿಯರನ್ನು ಕಳೆದುಕೊಂಡು ಬದುಕಿಗೆ ಬೆನ್ನುತೋರಿ ಅಲೆಮಾರಿಯಾಗಿ ಹೊರಟಾಗ ಅವನ ಮಕ್ಕಳು ಅನಾಥವಾಗುತ್ತವೆ, ಇನ್ನೊಬ್ಬರ ಬಳಿಯಲ್ಲಿ ಆಶ್ರಯಪಡುವ ಸಂದರ್ಭ ಒದಗಿ ಬರುತ್ತದೆ. ಈ ಕಥನಕ್ರಿಯೆ ಕಾದಂಬರಿಯ 'ಕಥನಶಿಲ್ಪ'ದ ಇನ್ನೊಂದು ಅಂಶ.

ಸಾಮಾನ್ಯವಾಗಿ ಗಂಡು ಸಂಸಾರದಲ್ಲಿ ಪಲಾಯನವಾದಾಗ, ಮಕ್ಕಳ ಬದುಕನ್ನು ಗಟ್ಟಿಗೊಳಿಸುವಲ್ಲಿ ಹೆಣ್ಣು ಬೆಂಬಲವಾಗಿ ನಿಲ್ಲುವುದು ಅನೇಕ ಕಾದಂಬರಿಗಳಲ್ಲಿ ಬರುವ ಸಂಗತಿ. ಆದರೆ ಇಲ್ಲಿ ಅಂತಹ ಹೆಣ್ಣಿನ ಬೆಂಬಲವಿಲ್ಲದೇ ಇರುವುದರಿಂದ ಮಕ್ಕಳು ಅತಂತ್ರರಾಗಬೇಕಾಗುತ್ತದೆ. ಕಥಾನಾಯಕ ನರಹರಿ ಸನ್ಯಾಸದಲ್ಲಿ

ಅರ್ಥ ತೋರದೇ ಅನಾಥಶ್ರಮದ ಮಕ್ಕಳನ್ನು ಕಂಡು ಪುನಃ ತನ್ನ ಸಂಸಾರಕ್ಕೆ ಮಿಡಿಯುವ ಕ್ರಿಯೆ ಕಾದಂಬರಿಯ ಕಥನ ಭಿತ್ತಿಯಲ್ಲಿ ಗಮನಿಸಬಹುದಾದ ಪ್ರಮುಖವಾದ ಗಮನಾರ್ಹ ಸಂಗತಿಯಾಗುತ್ತದೆ.

**************

## 'ಗ್ರಹಣ'–ಕಥನಕ್ರಿಯೆ.

ಕಲ್ಪಿತ ಚಿತ್ರಗಳನ್ನು ಇದಿರಿಟ್ಟು, ಗಂಭೀರವಾಗಿ ವಿವರಿಸಿ, ಅಲ್ಲಿನ ಪೊಳ್ಳುತನದ ಕಡೆಗೆ ಅದರಿಂದ ಸಂಭವಿಸುವ ಅನಾಹುತದ ಕಡೆಗೆ ಬೆರಳು ಮಾಡಿ ತೋರಿಸುವ ಸಲುವಾಗಿಯೇ, ಹುಟ್ಟಿಕೊಂಡ ಭೈರಪ್ಪನವರ ಕೆಲವೊಂದು ಕಾದಂಬರಿಗಳಲ್ಲಿ 'ಗ್ರಹಣ'ವು ಒಂದು.

ಈ ಕಾದಂಬರಿಯ ವಸ್ತು ಯಾವುದೋ ಮೂಢನಂಬಿಕೆಯನ್ನು ಬಿತ್ತುತ್ತಿದೆ ಎಂಬ ಭಾವನೆಯನ್ನುಂಟು ಮಾಡಿದರೂ, ಕಾದಂಬರಿಯ ನಾಯಕ ಮತ್ತು ನಾಯಕಿ ಎಂದು ಕರೆಯಬಹುದಾದ ಸ್ವಾಮಿ ಮತ್ತು ಡಾ॥ ಸರೋಜಳ ಕಾರ್ಯಾಚರಣೆಯಿಂದಾಗಿ ಮೂಢನಂಬಿಕೆ ಎಂಬ ಗ್ರಹಣದಿಂದ ಹೇಗೆ ಬಿಡುಗಡೆ ಹೊಂದಬಹುದು ಎನ್ನುವ ಮಾರ್ಗೋಪಾಯವನ್ನು ಸೂಚಿಸುತ್ತಾರೆ. ಆ ಮೂಲಕವಾಗಿ ಕಾದಂಬರಿಕಾರರು 'ಗ್ರಹಣ' ಎನ್ನುವ ಶೀರ್ಷಿಕೆಯನ್ನು ಮೂಢನಂಬಿಕೆಯಿಂದ ಹೊರಬರುವುದು ಎಂಬ ಅರ್ಥದಲ್ಲಿ ಬಳಸಿಕೊಂಡಿದ್ದಾರೆ.

'ಗ್ರಹಣ' ಕಾದಂಬರಿಯ ಹಂದರ ಹೀಗಿದೆ: ಹಿಮವತೀ ನದಿಯ ದಡದಲ್ಲಿರುವ ಹಿಮಗಿರಿ ಎಂಬ ಊರು ಒಂದು ಪುಣ್ಯಕ್ಷೇತ್ರವಾಗಿತ್ತು. ಅಲ್ಲಿನ ಮಠಾಧೀಶರು ಸು.೫ ತಲೆಮಾರಿನ ಹಿಂದೆಯೇ ಮಠವನ್ನು ತೊರೆದು ಯಾವ ಉತ್ತರಾಧಿಕಾರಿಯನ್ನು ನೇಮಿಸದೆಯೇ ಹಿಮಾಲಯದ ಕಡೆಗೆ ಹೋಗುತ್ತಾರೆ. ಅದೇ ಹಿಮಾಲಯದಿಂದ ಬಂದಿರುವ ಈಗಿನ ಸ್ವಾಮಿಗಳು ಈ ೫ ತಲೆಮಾರಿನಿಂದ ಹಾಳು ಬಿದ್ದಿದ್ದ ಮಠವನ್ನು ಬೇರೆ ರೀತಿಯಲ್ಲಿ ಜೀರ್ಣೋದ್ಧಾರ ಮಾಡಿದರು. ಮಠವನ್ನು ಕಟ್ಟದೇ ಗದ್ದುಗೆಯನ್ನು ಏರದೇ ಜನಹಿತಕ್ಕಾಗಿ ಕಲ್ಯಾಣ ಸಮಿತಿಯನ್ನು ಸ್ಥಾಪಿಸಿದರು. ಊರಿನವರ ನೆರವಿನಿಂದ ಹೈಸ್ಕೂಲು, ಕಾಲೇಜು, ಆಸ್ಪತ್ರೆಗಳ ನಿರ್ಮಿತಿಗೆ ಕಾರಣರಾದರು.

ಸ್ವಾಮಿಗಳು ಎಂಬ ಗೌರವ ಪದವಿಯನ್ನು ಹೆಸರಿಗೆ ಮಾತ್ರ ಸ್ವೀಕರಿಸಿ, ತಾನು ಕಲ್ಯಾಣ ಕಾಯಕದಲ್ಲಿ ನಿರತರಾದರು. ಆ ಊರಿನ ಪ್ರತಿನಿಧಿಗಳು ಎನಿಸಿಕೊಂಡಿರುವ ಅಪ್ಪೇಗೌಡರು, ಶಾಸ್ತ್ರಿಗಳು, ಕಾಲೇಜು ಪ್ರಿನ್ಸಿಪಾಲರು ಮತ್ತು ಎಂ.ಎಲ್.ಎ ಚಂದ್ರಪ್ಪ ಇವರುಗಳು ತಂತಮ್ಮ ರೀತಿಯಲ್ಲಿ ವರ್ಚಸ್ಸನ್ನು ಬೆಳೆಸಿಕೊಳ್ಳುತ್ತಿರುವ ಆ ಪರಿಸ್ಥಿತಿಯಲ್ಲಿ ಹಠಾತ್ತನೆ ಬಂದ ಸುದ್ದಿಯೊಂದು ಆಘಾತದಂತೆ ಎರಗುತ್ತದೆ. ಅದೇನೆಂದರೆ ಈಗಾಗಲೇ ೫೦ ವರ್ಷ ವಯಸ್ಸಿನವರಾಗಿರುವ ಸ್ವಾಮಿಗಳು ಆಸ್ಪತ್ರೆಯ ಡಾ॥ ಸರೋಜಳೊಂದಿಗೆ ಮದುವೆಯಾಗುವ ಆಶಯವನ್ನು ಪ್ರಕಟಿಸುತ್ತಾರೆ. ಗೌಡರು ಮುಂತಾಗಿ ಊರಿನವರಿಗೆಲ್ಲಾ ಇದು ಆಗ ತಾನೆ ಸಂಭವಿಸಿದ ಕ್ರೂರ ಸೂರ್ಯಗ್ರಹಣದ ದುಷ್ಫಲವಾಗಿ ತೋರಿ ಸ್ವಾಮಿಗಳಿಗೆ ಬುದ್ಧಿ ಭ್ರಮಣೆಯಾಗಿದೆ ಎಂದು ತೀರ್ಮಾನಿಸುತ್ತಾರೆ. ಸ್ವಾಮಿಗಳು ಸನ್ಯಾಸದಿಂದ ಗೃಹಸ್ಥಾಶ್ರಮಕ್ಕೆ ತಿರುಗ ಬಯಸುವ ವಿಚಾರ ಧರ್ಮಕ್ಕೆ ವಿರೋಧವಾದುದು ಅಷ್ಟೇ ಅಲ್ಲ, ಮಠದ ಪಾವಿತ್ರ್ಯವನ್ನು ಕೆಡಿಸುತ್ತದೆ. ಇಂತಹವರ ನೇತೃತ್ವದಲ್ಲಿ ತಾವು ಮಠಕ್ಕೆ ಕಾಲೇಜಿಗೆ ಮತ್ತು ಆಸ್ಪತ್ರೆಗೆ ವಂತಿಗೆಯನ್ನು ಎತ್ತುವುದು ಸಾಧ್ಯವಾಗುವದಿಲ್ಲ ಎಂಬುದು ಊರ ಪ್ರತಿನಿಧಿಗಳ ವಾದ. ಇದಕ್ಕೆ ಪ್ರತಿಯಾಗಿ ಸ್ವಾಮಿಯವರು ತಾನು ಮಠದ ಸ್ವಾಮಿಯೇನಲ್ಲ. ವೇದ ಮತ್ತು ಉಪನಿಷತ್ತುಗಳ ಕಾಲದಲ್ಲಿಯೂ ಋಷಿಗಳು ಸಂಸಾರಿಗಳಾಗಿದ್ದರು. ಊರಿನ ಉದ್ಧಾರಕ್ಕೆ ಸ್ವಾಮಿಗಳ ಅಗತ್ಯವೇನಿಲ್ಲ, ಅದಕ್ಕೆ ಕಾರ್ಯಕರ್ತರು ಬೇಕು, ಅಷ್ಟೇ ಎನ್ನುತ್ತಾರೆ. ಮುಂದೊಂದು ದಿನ ಸ್ವಾಮಿಯವರು ಕಾವಿ ಬಟ್ಟೆಯನ್ನು ತೊರೆದು ಬಿಳಿ ಬಟ್ಟೆ ತೊಟ್ಟು ಗುಡಿಸಲನ್ನು ತೊರೆದು ಸರೋಜಳ ಮನೆಯನ್ನು ಸೇರುತ್ತಾರೆ. ಆಗ ಕಾಲೇಜು ವಿದ್ಯಾರ್ಥಿಗಳು ಸೇರಿದಂತೆ ಊರಿನವರೆಲ್ಲ ಆ ಮನೆಯ ಮುಂದೆ ಗದ್ದಲವುಂಟಾಗುತ್ತದೆ. ಪರಿಸ್ಥಿತಿಯು ಪ್ರಕೋಪಕ್ಕೆ ಹೋದಾಗ ಸ್ವಾಮಿಗಳು ಸರೋಜಳ ಜೊತೆಗೂಡಿ ಅವರನ್ನು ಎದುರಿಸುತ್ತಲೇ ತಮ್ಮ ಮದುವೆಯನ್ನು ಬಹಿರಂಗವಾಗಿ ಘೋಷಿಸಿ, ಸರೋಜಳಿಗೆ ನೀನೂ ಅದನ್ನು ಜನರೆದುರು ಒಪ್ಪಿಕೋ ಎಂದು ಆಗ್ರಹಿಸುತ್ತಾರೆ. ಅವಳು ಮೌನದಿಂದಿರುತ್ತಾಳೆ. ಆಗ

ಸ್ವಾಮಿಗಳು ಅವಳನ್ನು ಜರಿದು, ತಿರುಗಿ ನೋಡದೆ ಹೊರಟು ಬಿಡುತ್ತಾರೆ. ಉದ್ರಿಕ್ತ ಜನರ ಕಲ್ಲಿನೇಟಿನಿಂದ ಅವರಿಗೆ ಪೆಟ್ಟು ತಗಲುತ್ತದೆ. ಅತ್ತ ತಾವು ಯಾವ ಸ್ವಾಮಿಯೂ ಅಲ್ಲ, ತಪಸ್ವಿಯೂ ಅಲ್ಲ ಎಂದು ಊರೂರು ಸುತ್ತಿ ಆಯಾಯ ಜನರನ್ನು ನಂಬಿಸಲು ಸ್ವಾಮಿಗಳು ಪ್ರಯತ್ನಿಸುತ್ತಿದ್ದರೆ, ಇತ್ತ ಸರೋಜ ತನ್ನ ಕಾರ್ಯದಲ್ಲಿ ಮಗ್ನಳಾಗುತ್ತಾಳೆ. ಇದರ ನಡುವೆ ಪ್ರಿನ್ಸಿಪಾಲರ ಹೆಂಡತಿಗೆ ಉಂಟಾದ ಸುಳ್ಳು ಬಸಿರು, ಊರಿನ ಅಮಾಯಕ ಬಾಲಿಕೆಗಾದ ಕಳ್ಳ ಬಸಿರು ಮತ್ತು ತನಗೇ ಬಂದೊದಗಿದ ಸ್ವಂತ ಬಸಿರು, ಕಾಲೇಜು ವಿದ್ಯಾರ್ಥಿಗಳೊಡನೆ ಆದ ಮುಖಾಮುಖಿ–ಈ ಘಟನೆಗಳಿಂದ ಕೆಲವು ಕಾಲ ತತ್ತರಿಸಿ ಹೋಗುತ್ತಾಳೆ. ಕಾದಂಬರಿಯ ಕೊನೆಯಲ್ಲಿ ಚೇತರಿಸಿಕೊಳ್ಳುತ್ತ ತಾನು ಬಸಿರನ್ನು ಕಳೆದುಕೊಳ್ಳಬೇಕೆಂದು ನಿರ್ಧಾರ ಮಾಡುತ್ತಾಳೆ. ತನಗೆ ಸ್ವಾಮಿಗಳೊಂದಿಗೆ ನಿಷೇಕವಾದ ಸಂಗತಿಯನ್ನು ಬಹಿರಂಗಪಡಿಸುತ್ತಾಳೆ. ಅಲ್ಲದೆ ಈಗ ತಾನು ಗರ್ಭಿಣಿಯಾಗಿರುವ ವಿಷಯವನ್ನು ಬಹಿರಂಗ ಪಡಿಸುತ್ತಾಳೆ.

ಇವಿಷ್ಟು ಕಥಾ ಹಂದರವನ್ನು ಹೊಂದಿರುವ 'ಗ್ರಹಣ'ಕಾದಂಬರಿಯು ಸಾಕಷ್ಟು ವಿಶಾಲವಾದ ಕಥಾ ಭಿತ್ತಿಯನ್ನು ಹೊಂದಿದೆ.

ಕಾಲೇಜಿನ ಉಪನ್ಯಾಸಕರು 'ಗ್ರಹಣ'ವನ್ನು ಕುರಿತು ಮಾತನ್ನಾಡುವಲ್ಲಿಂದ ಈ ಕಾದಂಬರಿಯ ಪ್ರಾರಂಭವಾಗುತ್ತದೆ. ಇದೇ ಸಂದರ್ಭದಲ್ಲಿ ಕಥಾ ನಾಯಕಿಯನ್ನು ಕಾದಂಬರಿಕಾರರು ನಮಗೆ ಪರಿಚಯಿಸಿರುವುದು ಕಾದಂಬರಿಯ ಶಿಲ್ಪವನ್ನು ಗುರುತಿಸುವಂತಾಗಿ ಕಂಡುಬರುತ್ತದೆ. ಡಾ॥ ಸರೋಜಮ್ಮ ಎದ್ದು ನಿಂತು ಕೇಳಿದರು "ಎಕ್ಲಿಪ್ಸ್ ಅನ್ನುವುದೇನಿದ್ದರೂ ಭೂಮಿಯ ದೃಷ್ಟಿಯಿಂದ, ಈ ಭೂಮಿಯ ಮೇಲೆ ವಾಸಿಸುವ ನಮ್ಮ ದೃಷ್ಟಿಯಿಂದ ಆಗುವುದು. ಮರೆಯಾಗುವ ಸೂರ್ಯನಿಗೂ ಮರೆ ಮಾಡುವ ಚಂದ್ರನಿಗೂ ಯಾವ ಸಂಬಂಧವೂ ಇಲ್ಲ ಪರಿಣಾಮವೂ ಇಲ್ಲ ಬೇರೆ ಒಂದು ಗ್ರಹದ ಮೇಲೆ ನಿಂತು ನೋಡುತ್ತಿದ್ದರೆ ಅಲ್ಲೂ ಇದೇ ಥರ ಎಕ್ಲಿಪ್ಸ್

ಆಗುತ್ತೆಯೆ?"[೧]. ಡಾ॥ ಸರೋಜಳ ಈ ಪ್ರಶ್ನೆ ಇಡೀ ಕಾದಂಬರಿಯ ವಿಚಾರಗಳಿಗೆ ಸಂಬಂಧಿಸಿರುವುದು. ನಂಬಿಕೆಗಳನ್ನು ಬುಡಮೇಲು ಮಾಡುವ ಪ್ರಕ್ರಿಯೆಗಳಿಗೆ ಸಂಬಂಧಿಸಿರುವುದು. ಪರಂಪರೆ ಮತ್ತು ಪ್ರಗತಿಯ ಸಂಘರ್ಷಗಳನ್ನು ಸೂಚಿಸಿರುವುದು.

ಕಾದಂಬರಿಯ ಮುಂದಿನ ಎಳೆ ಪ್ರಿನ್ಸಿಪಾಲ್ ಮತ್ತು ಸಹೋದ್ಯೋಗಿ ಲಲಿತಾ ಮದುವೆಯಾದ ಬಗ್ಗೆ ಅವಳು ಮೂವತ್ತು ದಾಟಿದ ಮೇಲೆ ಬಸಿರಾದ ಬಗೆಗೆ ಸಂಬಂಧಿಸಿರುವುದು ಎಂ.ಎಸ್ಸಿ. ಓದಿ ಕಾಲೇಜಿನಲ್ಲಿ ಉಪನ್ಯಾಸಕಿಯೂ ಆಗಿದ್ದ ಲಲಿತಾ ಗ್ರಹಣ ಹಿಡಿಯುತ್ತೆ ಎಂದು ಅಡುಗೆ ಮಾಡದೇ ಪಾತ್ರೆ ತೊಳೆದಿಟ್ಟಿರುವ ವಿಪರ್ಯಾಸವನ್ನು ಪರಿಚಯಿಸುತ್ತಾರೆ. "ನೀವು ಹೀಗೆ ಕೇಳೀರ ಅಂತ ನನಗೆ ಗೊತ್ತಿತ್ತು. ಎಷ್ಟೋ ಸಲ ಬರೀ ಸೈನ್ಸ್ ಎಲ್ಲತಕ್ಕೂ ಉತ್ತರ ಹೇಳಲ್ಲ: ಗ್ರಹಣ ಹಿಡಿದ ವರ್ಷ ಮಾವಿನ ಹಣ್ಣುಗಳೆಲ್ಲ ಕೊಳೆತು ಹೋಗುತ್ತೆ, ಯಾಕೆ ಹೇಳಿ? ಅಜ್ಜಮ್ಮನೋರು ಅದೇ ಕೇಳಿದರು; ಮರದ ಹಣ್ಣುಗಳೇ ಕೊಳೆತು ಬೀಳುತ್ತವೆ ತುಂಬಿದ ಬಸುರಿ ನೀವು ಎಚ್ಚರವಾಗಿರಿ. ಬಿಡುಗಡೆಯಾಗಿ ಸ್ನಾನ ಮಾಡೂತನಕ ಏನೂ ತಿನ್ನಬ್ಯಾಡಿ. ಗ್ರಹಣ ಹಿಡಿದಾಗ ಮೈಮೇಲೆ ಆ ಮೈಲಿಗೆಯ ಬಿಸಿಲು ಬೀಳಿಸಬ್ಯಾಡಿ ಆ ಬಿಸಿಲನ್ನ ಕಣ್ಣಿನಲ್ಲೂ ನೋಡಬ್ಯಾಡಿ. ಒಳಗಿರೂ ಮಗೂಗೆ ಏನಾದರೂ ಆದೀತು-ಅಂದ್ರು, ಇವತ್ತು ರಾತ್ರಿ ಮನೇಲಿ ಅಡಿಗೆ ಮಾಡಬ್ಯಾಡಿ, ಗಂಡ-ಹೆಂಡತಿ ಇಬ್ಬರೂ ನಮ್ಮ ಮನೆಗೆ ಊಟಕ್ಕೆ ಬರಬೇಕು ಅಂದಿದ್ದಾರೆ"[೨]. 'ಗ್ರಹಣ'ದ ಕುರಿತಂತೆ ಪುರಾಣ, ವಿಜ್ಞಾನ, ವೈಜ್ಞಾನಿಕತೆಯ ಅರಿವನ್ನು ತಿಳಿದಿದ್ದರೂ ಕೂಡ ಈ ಪ್ರಿನ್ಸಿಪಾಲ ದಂಪತಿಗಳು ಗರ್ಭದಲ್ಲಿರುವ ಮಗುವಿಗೆ ಗ್ರಹಣ ಬಡಿದೀತು ಎಂಬ ವಿಚಾರಕ್ಕೆ ವಿಚಲಿತರಾಗುವುದನ್ನು ಅವರಿಬ್ಬರೂ ಮುಂದೆ ಗ್ರಹಣ ಬಿಟ್ಟಾಕ್ಷಣ ಶಾಸ್ತ್ರಿಗಳ ಮನೆಗೆ ಊಟಕ್ಕೆಂದು ಹೋಗುವುದರಲ್ಲಿ ಕಾದಂಬರಿಕಾರರು ತಿಳಿಸುತ್ತಾರೆ.

---

[೧] 'ಗ್ರಹಣ' ಪುಟ ೪. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು.೧೯೭೨.
[೨] 'ಗ್ರಹಣ'.ಪುಟ ೮. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು .೧೯೭೨.

ಬ್ರಹ್ಮಚಾರಿಯಾಗಿದ್ದ ಪ್ರಿನ್ಸಿಪಾಲರು ಗೃಹಸ್ಥರಾಗುವುದನ್ನು ಕಟುವಾಗಿ ವಿರೋಧಿಸಿದ್ದ ಯಜ್ಞೇಶ್ವರ ಶಾಸ್ತ್ರಿ-ಇವರ ಪಾತ್ರ ಎನ್ನುವ ಇನ್ನೊಂದು ಎಳೆಯನ್ನು ಕಾದಂಬರಿಯ ಕತೆಯಲ್ಲಿ ಹೆಣೆದಿರುತ್ತಾರೆ. ಇವರು ಕಾದಂಬರಿಕಾರರ ಪ್ರಕಾರ ಪೌರೋಹಿತ್ಯದ ಪ್ರತಿನಿಧಿಗಳು. ಹಿಮಗಿರಿಯ ಕಲ್ಯಾಣ ಸಮಿತಿಯ ಸ್ಥಾಪಕ ಸದಸ್ಯರು. "ಶಾಸ್ತ್ರಿಗಳು ಪ್ರಿನ್ಸಿಪಾಲ ಆಕ್ರಮ-ಬದಲಾವಣೆಯನ್ನು ವಿರೋಧಿಸಿದಾಗ ಸಮಿತಿಯ ಕಾಲೇಜಿನ ಅಭ್ಯುದಯವೊಂದೇ ಅವರ ದೃಷ್ಟಿಯಲ್ಲಿರಲಿಲ್ಲ. ಪ್ರಿನ್ಸಿಪಾಲರೂ ಒಂದು ತೆರನಾದ ಸನ್ಯಾಸ ಜೀವನದಲ್ಲಿದವರೆಂದೇ ಅವರ ಭಾವನೆಯಾಗಿತ್ತು. ಪ್ರಿನ್ಸಿಪಾಲರು ಸಹ ಹಲವೊಮ್ಮೆ ಮಾತಿನಿಂದ ಕೆಲವೊಮ್ಮೆ ಮೌನದಿಂದ, ಈ ಭಾವನೆಗೆ ಪುಷ್ಟಿಕೊಟ್ಟಿದ್ದರು ಅಂಥವರು ಮದುವೆಯಾಗುವುದೆಂದರೆ ಧರ್ಮನಿಷಿದ್ಧವೆಂದು ಶಾಸ್ತ್ರಿಗಳ ಅಚಲಿತ ವಿಶ್ವಾಸವಾಗಿತ್ತು. ಸ್ವತಃ ಸ್ವಾಮಿಗಳೇ ಪ್ರವೇಶಿಸಿ-ಇವರು ಮದುವೆಯಾಗಬಹುದು ಇವರ ಮದುವೆಯಿಂದ ಕಾಲೇಜಿಗೆ ಯಾವ ತೊಂದರೆಯೂ ಇಲ್ಲವೆಂದು ಸ್ಪಷ್ಟವಾಗಿ ಅಪ್ಪಣೆ ಕೊಡಿಸಿದ ಮೇಲೆ ಶಾಸ್ತ್ರಿಗಳು ತಮ್ಮ ವಿರೋಧವನ್ನು ಉಪಶಮನಗೊಳಿಸಿದರು"[೩]. ಹೀಗೆ ಶಾಸ್ತ್ರಿಗಳು ಪ್ರಿನ್ಸಿಪಾಲರು ಬ್ರಹ್ಮಚರ್ಯದಿಂದ ಗೃಹಸ್ಥಾಶ್ರಮಕ್ಕೆ ಸಾಗಲು ನೆರವಾಗುವುದರ ಮೂಲಕ ಜ್ಞಾನ ಮತ್ತು ಪೌರೋಹಿತ್ಯದ ಪ್ರತಿನಿಧಿಗಳನ್ನು ಕತೆಯಲ್ಲಿ ಒಂದೆಡೆ ಒಂದುಗೂಡಿಸಿಕೊಂಡು ಸಾಗುತ್ತಾರೆ.

ಶಾಸ್ತ್ರಿಗಳು ಮತ್ತು ಪ್ರಿನ್ಸಿಪಾಲರನ್ನು ಒಂದೆಡೆ ಸೇರಿಸುತ್ತಿರುವಾಗಲೇ ಯಜಮಾನಿಕೆಯ ಪ್ರತಿನಿಧಿಯಾದ ಅಪ್ಪೇಗೌಡರನ್ನು ಪರಿಚಯಿಸುತ್ತಾರೆ. ಡಾ॥ ಸರೋಜ ಮತ್ತು ಸ್ವಾಮಿಯ ಮದುವೆಯಾಗುವ ಸುದ್ದಿ ಹೇಳಿ ಕುಸಿದು ಬೀಳುವ ಕಥಾನಕದ ಎಳೆಯನ್ನು ತರುವ ಮೂಲಕ ಯಜಮಾನನಾದ ಅಪ್ಪೇಗೌಡ ಪಾತ್ರವನ್ನು ಕಾದಂಬರಿಯಲ್ಲಿ ಪರಿಚಯಿಸುತ್ತಾರೆ. "ಅಪ್ಪೇಗೌಡರು ಬರೀ ಈ ಊರಿಗೆ

---

[೩] 'ಗ್ರಹಣ' ಪುಟ ೪೫. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೧೯೭೨.

ಯಜಮಾನರಲ್ಲ ಅವರ ಮಾತೆಂದರೆ ಸುತ್ತ ಮೂವತ್ತು ಮೈಲಿಯಲ್ಲೂ ಗೌರವವಿದೆ. ಹಿಮಗಿರೀಶ್ವರ ಕಲ್ಯಾಣ ಸಮಿತಿಯ ಹೈಸ್ಕೂಲುಗಳು ಇರುವ ಊರುಗಳಲ್ಲಂತೂ ಅವರನ್ನು ದಾನಪ್ಪ ಎಂದೇ ಕರೆಯುತ್ತಾರೆ. ಅವರಷ್ಟು ಶ್ರೀಮಂತರಿರಬಹುದು ಆದರೆ ಅವರ ದಾನ ಬುದ್ಧಿ ಇರುವವರು ವಿರಳ; ಆ ಸುತ್ತಿನಲ್ಲಿ ಯಾರೂ ಇಲ್ಲ. ಆದರೂ ಅಷ್ಟು ಸರಳ ವ್ಯಕ್ತಿ ಎಪ್ಪತ್ತೈದು ವರ್ಷದ ಈತ ಇಂದಿಗೂ ಸಾಮಾನ್ಯ ರೈತರಂತೆಯೇ ಇರುತ್ತಾರೆ. ಅವರ ದಾನವಿಲ್ಲದಿದ್ದರೆ ಹಿಮಗಿರೀಶ್ವರ ಕಲ್ಯಾಣ ಸಮಿತಿ ಆಗುತ್ತಿರಲಿಲ್ಲ' ಹೈಸ್ಕೂಲು ಬರುತ್ತಿರಲಿಲ್ಲ; ಕಾಲೇಜು ತೆರೆಯುತ್ತಿರಲಿಲ್ಲ; ಆಸ್ಪತ್ರೆ ಸ್ಥಾಪನೆಯಾಗುತ್ತಿರಲಿಲ್ಲ"[೪]. ಇಂಥಹ ಅಪ್ಪೇಗೌಡರಿಗೆ ಸ್ವಾಮಿಗಳು ಮದುವೆ ಮಾಡಿಕೊಳ್ಳುವ ವಿಚಾರ ಆಘಾತವನ್ನುಂಟು ಮಾಡುವಂತೆ ಕತೆಯನ್ನು ಹೆಣೆದು ಹಳ್ಳಿಯ ಜನತೆ ನಂಬಿಕೆ ಧರ್ಮವನ್ನು ಕಳೆದುಕೊಂಡು ಶಕ್ತಿವಂತರಾಗಿ ಬದುಕಲಾರರು. ಅದೇ ಅವರ ಜೀವ ಎನ್ನುವಂತೆ ಈ ಘಟನೆಯನ್ನು ಕಾದಂಬರಿಕಾರರು ಕಥನ ಕ್ರಿಯೆಯನ್ನು ನೇಯ್ದಿರುತ್ತಾರೆ. "ಈ ನ್ಯಾಲಿಗೇಲಿ ಹ್ಯಂಗೆ ಆಡ್ತಿ? 'ಸ್ವಾಮಿಗೋಳು ಮದುವೆ ಮಾಡ್ಕ್ಯಂತಾರಂತೆ" ಯಾರು ಹೇಳಿದರು? ಶಾಸ್ತ್ರಿಗಳು ತಕ್ಷಣ ಕೇಳಿದರು. ಅವರೇ ಅಂದ್ರು, ಹ್ವಳೆ ತಾವಿಕ್ ಹ್ವಾಗಿದ್ದೆ. ಅಲ್ಲಿ ಸಿಕ್ಕಿದ್ರು ಅಪ್ಪೇಗೌಡರೇ ಅಲ್ಲಿ ಇಲ್ಲಿ ಅಂತ ಮಟದ ಮನಿಗೆ ಕರ್ಕಂಡ್ಹೋಗಿ ಕುಂಡ್ರಿಸ್ಕಂಡ್ ಆಮ್ಯಾಲೆ ಹಂಗಂದ್ರು' ಇನ್ನೊಂದು ವಿಳೆಯ ದಿನದಾಗೆ ಈ ಜಾಗ ಬುಟ್ಬುಡ್ತೀನಿ. ಆ ಡಾಕುಟ್ರಮ್ಮನ ಮನೇಲೆ ಇರ್ತೀನಿ ಅಂದ್ರು'– ಎಂದು ಕೊನೆಯ ವಾಕ್ಯವನ್ನು ನುಡಿಯುವಾಗ ವೃದ್ಧ ಯಜಮಾನ ಅಪ್ಪೇಗೌಡರ ಧ್ವನಿಯು ಒಡೆದು ಒಡೆದು ಬರುತ್ತಿತ್ತು. ಕೊನೆಯ ಶಬ್ದವಂತೂ ಸರಿಯಾಗಿ ಹೊರಬರಲೇ ಇಲ್ಲ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದರು"[೫].

---

[೪] 'ಗ್ರಹಣ' ಪುಟ ೧೮. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೧೯೭೨.
[೫] 'ಗ್ರಹಣ' ಪುಟ ೧೯. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೧೯೭೨.

ಊರಿಗೊಂದು ಮಠ, ಮಠಗೊಬ್ಬ ಮಠಾದೀಶರು ಇರಲೇಬೇಕು. ಆಗ ಮಾತ್ರ ಊರು ಉದ್ಧಾರವಾಗುವುದು, ಎಂಬ ನಂಬಿಕೆಯಲ್ಲಿದ್ದ ಹಿಮಗಿರಿಯ ಯಜಮಾನನಿಗೆ ಐದು ತಲೆಮಾರುಗಳ ಹಿಂದೆ ಇದ್ದ ಸ್ವಾಮಿಗಳು ತಮ್ಮ ಉತ್ತರಾಧಿಕಾರಿಯನ್ನು ನೇಮಿಸದೇ ಊರುಬಿಟ್ಟು ಹೋದುದರಿಂದ ಜಲಪ್ರಳಯವಾಯಿತು. ಐದು ತಲೆಗಳ ನಂತರ ತಾನೇ ಮತ್ತೇ ಬರುವುದಾಗಿ ಅವರು ಹೇಳಿದ್ದರು. ಊರಿಗೊಬ್ಬ ತೇಜಸ್ವಿ ತರುಣ ಬಂದುದನ್ನು ಕಂಡು ನೋಡಿ ಬಂದ ಅಪ್ಪೇಗೌಡರಿಗೆ ತನ್ನ ವಂಶದ ಐದು ತಲೆಯ ಹಿಂದಿನವರು ಕನಸಿನಲ್ಲಿ ಬಂದು ಇವರೇ ಸ್ವಾಮಿಗಳು ಎಂದು ಹೇಳಿದಂತಾಗಿ ಅಪ್ಪೇಗೌಡ ಮತ್ತು ಶಾಸ್ತ್ರಿಗಳು ಕೇಳಿಕೊಂಡರೂ ನಿಲ್ಲದೇ ಹೊರಟುಹೋದ ಸ್ವಾಮಿ ಎರಡು ತಿಂಗಳ ನಂತರ ಹಿಂದಿರುಗಿದ್ದು– ಇವಿಷ್ಟು ಕತೆಯನ್ನು ಅಪ್ಪೇಗೌಡ ಪಾತ್ರದಲ್ಲಿ ಬಿಚ್ಚಿಕೊಳ್ಳುವ ಧೀರ್ಘವಾದ ಸ್ಮರಣ ತಂತ್ರದ ಮೂಲಕ ತಂದಿರುತ್ತಾರೆ.

ಇಷ್ಟೆಲ್ಲ ಪರಿಕರಗಳನ್ನು ಇಟ್ಟುಕೊಂಡು ಪ್ರಾರಂಭಿಸಿದ ಕಾದಂಬರಿಗೆ ಆಕರವಾಗಿ ಸ್ವಾಮಿಯ ಪಾತ್ರದ ಪ್ರವೇಶ ಮಾಡಿಸುತ್ತಾರೆ. ಜಾಳು–ಜಾಳಾಗಿರುವ ಕತೆಯು ಇಲ್ಲಿಗೆ ಒಟ್ಟಿಗೆ ಸೇರಿಕೊಂಡು ಗಾಢವಾಗಿ ಬೆಳೆಯತೊಡಗುತ್ತದೆ.

ಈಗ ಬಂದಿರುವ ಹೊಸ ಸ್ವಾಮಿ ಆನೆ, ಕುದುರೆ, ರಥ, ಪಲ್ಲಕ್ಕಿ, ಪೂಜೆ ಬೇಡೆನ್ನುವ, ಅದರ ಬದಲು ಸ್ಕೂಲು, ಕಾಲೇಜು, ಆಸ್ಪತ್ರೆ ಕಟ್ಟಿಸಬೇಕು ಕೆಲಸಮಾಡಿ ತಿನ್ನಬೇಕು ಎನ್ನುವರು, ತೋಟದಲ್ಲಿ ಕೆಲಸ ಮಾಡಿ ಗುಡಿಸಲು ಕಟ್ಟಿಕೊಂಡು ಅಡುಗೆ ಮಾಡಿ ತಿನ್ನುತ್ತಾರೆ. ಹಿಮಗಿರಿಯ ಸುತ್ತಮುತ್ತಲ ಹತ್ತಾರು ಹಳ್ಳಿಗಳಿಗೆ ಅವರೆಂದರೆ ಭಯ–ಭಕ್ತಿ ಅವರ ಗುಡಿಸಲೇ ಹಳ್ಳಿಯ ಜನರಿಗೆ ಮಠವಾಗಿತ್ತು.

ಹನ್ನೆರಡು ವರ್ಷಗಳಲ್ಲಿ ಸುತ್ತಲ ೮ ಊರುಗಳಲ್ಲಿ ಹೈಸ್ಕೂಲು, ನಂತರ ಹಿಮಗಿರಿಯಲ್ಲಿ ಒಂದು ಕಾಲೇಜು, ಕಾಲೇಜಿಗೆ ಕಟ್ಟಡ–ಪ್ರಸೂತಿಗೃಹ, ಮಹಿಳಾ ಆಸ್ಪತ್ರೆ, ವೈದ್ಯರಿಗೆ ಮನೆ ಎಲ್ಲಾ ಆಯಿತು. ಸ್ವಾಮಿಗಳಿಗೆ ಅರಿವಿಲ್ಲದೆ ಅವರ ತಪಸ್ಸಿನ ಮಹಿಮೆ ಹರಡಿತು. ನಂತರ ಒಂದು ದಿನ ಸ್ವಾಮಿಗಳು ಸಮಿತಿಯ ಅಧ್ಯಕ್ಷಸ್ಥಾನವನ್ನು ತೊರೆದು "ನಾನಿಲ್ಲದೆ ಸಮಿತಿ ನಡೆಯಬೇಕು ಅಂತ ನನ್ನ ಆಸೆ ಹದಿನಾರು ವರ್ಷಗಳಲ್ಲಿ ಈ ಸಮಿತಿ ಸಾಧಿಸಿರುವುದಕ್ಕೆ ಯಾವ ಪೀಠದ ಬಲವೂ ಬೇಕಿರಲಿಲ್ಲ. ನೀವು ನೀವೇ ಕೂಡಿ ಇಷ್ಟು ಮಾಡಬಹುದಿತ್ತು. ಇದಕ್ಕಿಂತ ಹೆಚ್ಚೂ ಮಾಡಬಹುದಿತ್ತು. ಪೀಠದ ಹೆಸರಿಲ್ಲದೆ ಕೆಲಸ ನಡೆಯುವುದ್ದನ್ನು ನಾನು ನೋಡಬೇಕು"[೬]. ಇಂತಹ ಸ್ವಾಮಿ ಡಾ॥ಸರೋಜಳೊಂದಿಗೆ ಬೆಳೆದ ಆತ್ಮೀಯತೆಯಿಂದ ವಿವಾಹವಾಗುವ ಹಂತಕ್ಕೆ ಬಂದು ತಲುಪುತ್ತಾರೆ. ತಾವು ಸನ್ಯಾಸಾಶ್ರಮದಲ್ಲಿದ್ದೇವೆ ಎಂದು ಸ್ವಾಮಿ ಭಾವಿಸಿರದ ಕಾರಣ ಗೃಹಸ್ಥಾಶ್ರಮ ಸ್ವೀಕರಿಸಲೂ ಅವರ ಅಡ್ಡಿ ಇರಲಿಲ್ಲ. ಆದರೆ ಊರವರ ಅಡ್ಡಿ ಇತ್ತು. ಅದಕ್ಕೆ ಕಾರಣ ಸ್ವಾಮಿ ಎಂಬ ಭಯಭಕ್ತಿಯಿಂದ ಬರುತ್ತಿದ್ದ ಹತ್ತಾರು ಹಳ್ಳಿಗಳ ಕಾಣಿಕೆ ನಿಂತುಹೋದರೆ ಊರಿನ ಅಭಿವೃದ್ಧಿ ಕಾರ್ಯ ತಮ್ಮ ಮುಂದಾಳತ್ವ ನಿಂತು ಹೋಗುತ್ತದೆ ಎಂಬುದೇ ಆಗಿತ್ತು. ಇದರಿಂದ ಶಾಸ್ತ್ರಿಗಳು, ಅಪ್ಪೇಗೌಡರು, ಪಕ್ಕದೂರಿನ ಎಂ.ಎಲ್.ಎ.ಚಂದ್ರಪ್ಪ ಇವರೆಲ್ಲಾ ಮುಂದಾಗಿ ವಿವಾಹವನ್ನು ವಿರೋಧಿಸುತ್ತಾರೆ. ಸಮಿತಿಯ ಅಧ್ಯಕ್ಷರಾಗಿ ಎಂ.ಎಲ್.ಎ.ಚಂದ್ರಪ್ಪನವರು ನೇಮಕಗೊಳ್ಳುತ್ತಾರೆ. ಅವರಿಂದ ಹಣ ಎತ್ತಬೇಕಾದ ಪ್ರಸಂಗ ಬಂದಾಗ, ಅಧ್ಯಕ್ಷ ಪೀಠದ ಮೇಲೆ ಚಂದ್ರಪ್ಪನೋರು ಕೂರೋದಿಲ್ಲ. ಅಲ್ಲಿ ಸ್ವಾಮಿಗಳ ಪಾದರಕ್ಷೆ ಇಡುತ್ತಿದ್ದರಿಂದ ಕಾಣಿಕೆ ಮತ್ತೆ ಹುಟ್ಟುತ್ತಿತ್ತು. ಇಲ್ಲಿಗೆ ಕಾದಂಬರಿಕಾರರ ಸ್ಮರಣ ತಂತ್ರದ ಕಥನ ಕ್ರಿಯೆಯ ನೇಪಥ್ಯ ಸೃಷ್ಟಿಕಾರ್ಯ ಮುಗಿಯುತ್ತದೆ. ಮುಂದಿನ ಘಟನೆಗಳೆಲ್ಲವೂ ಆ ಕ್ಷಣವೇ ಸಂಭವಿಸುವಂತೆ

---

[೬] 'ಗ್ರಹಣ' ಪುಟ ೩೦. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೧೯೭೨.

ಕಾದಂಬರಿಯ ತಂತ್ರವನ್ನು ರೂಪಿಸಿರುವುದು ಕಾದಂಬರಿಕಾರರ ರಚನಾ ಕೌಶಲ್ಯವನ್ನು ಎತ್ತಿ ತೋರಿಸುವಂತಿದೆ.

ಪ್ರಿನ್ಸಿಪಾಲರು ಮಾಡುವ ಭಾಷಣದ ವಿಷಯವಾಗಿ ಪ್ರಾರಂಭಿಸಿ ಹಿಮಗಿರಿನದಿಯು ಮೂಲದಲ್ಲಿ ಜಿನುಗಿ-ಜಿನುಗಿ ಅಕ್ಕ ಪಕ್ಕದ ತೊರೆಗಳನ್ನು ಕೂಡಿಕೊಂಡು ಕಾರ್ಗಾಲದಲ್ಲಿ ಭೋರ್ಗರೆವ ನದಿಯಾಗಿ ಊರನ್ನೇ ಕೊಚ್ಚಿಕೊಂಡು ಹೋಗುವಂತೆ ಕಾದಂಬರಿಯ ಉದ್ದಕ್ಕೂ ವ್ಯವಹಾರ, ಶಾಸ್ತ್ರ, ಧರ್ಮದ ಗ್ರಹಣವಾಗಿ ಸ್ವಲ್ಪ ಸ್ವಲ್ಪವಾಗಿ ಹರಡಿ, ಊರೇ ಎದ್ದು ನಿಲ್ಲುವ ಮಟ್ಟಕ್ಕೆ ಬಂದು ನಿಲ್ಲುತ್ತದೆ. ಸಮಸ್ಯೆಯೇ ಅಲ್ಲದ ಸಮಸ್ಯೆಯನ್ನು ಜನರು ತಾನೇ ಸೃಷ್ಟಿಸಿ ಅದರ ಜೊತೆ ಹೇಗೆ ಹೋರಾಡುತ್ತಾರೆ-ಹೋರಾಡಬಹುದು ಎಂಬ ವಿಚಾರ. ಸರೋಜ ತನ್ನ ಮತ್ತು ಸ್ವಾಮಿಗಳ ಮದುವೆಯಾದುದ್ದನ್ನು ಕಿರಿಚಿಕೊಂಡು ಒಪ್ಪಿಕೊಳ್ಳುವುದು ಕಾದಂಬರಿಯ ಮುಕ್ತಾಯಕ್ಕೆ ಘನತ್ವ ತಂದಿದೆ.

ಒಟ್ಟಿನಲ್ಲಿ ಹತ್ತಾರು ವರ್ಷಗಳ ಕೆಳಗೆ ಜನರು ಹೇಗೆ ಧರ್ಮಶಾಸ್ತ್ರ ಮತ್ತು ವ್ಯವಹಾರಗಳ ನಿಜವಾದ ಅರ್ಥವನ್ನು ತಿಳಿಯದೇ ಇವುಗಳ ದುರ್ಮಿಶ್ರಣ ಮಾಡಿ ತಪ್ಪು ಅರ್ಥ ಕಲ್ಪಿಸಿ ತಲೆಕೆಡಿಸಿಕೊಳ್ಳುತ್ತಿದ್ದರು. ಯಥಾರ್ಥ ಜ್ಞಾನದ ಸೋಲು ಹೇಗೆ ಸಂಭವಿಸುತ್ತಿತ್ತು ಈಗಲೂ ಸಂಭವಿಸುತ್ತದೆ ಎಂಬ ಸಂಗತಿಗಳು ಈ ಕಾದಂಬರಿಯ ಮೂಲಕ ವ್ಯಕ್ತವಾಗುವ ಪ್ರಮುಖ ಆಶಯಗಳಾಗಿವೆ.

ಸೃಷ್ಟಿಯ ನಿರಂತರ ಕ್ರಿಯೆಯ ನೆಳಲು-ಬೆಳಕಿನ ಆಟದ ಗ್ರಹಣದ ಸುತ್ತ ಹೆಣೆದುಕೊಂಡಿರುವ ಶ್ರದ್ಧೆ, ನಂಬಿಕೆ, ಮೌಢ್ಯ, ಒಂದು ವಿಸ್ತಾರವಾದ ಕಾದಂಬರಿಗೆ ಅಸ್ತಿಭಾರವಾಗಿರುವ ಸಂಗತಿ 'ಕಥನಶಿಲ್ಪದ' ದೃಷ್ಟಿಯಿಂದ ಗಮನಿಸಬೇಕಾದ ಮಹತ್ವ ಪೂರ್ಣ ಸಂಗತಿಯಾಗಿದೆ.

## 'ದಾಟು'–ಕಥನಕ್ರಿಯೆ.

'ದಾಟು' ಭೈರಪ್ಪನವರ ಮೊದಲನೆಯ ಘಟ್ಟದ ಮಹತ್ವದ ಕಾದಂಬರಿ ಎನ್ನಬಹುದು. ಜಾತಿಯಲ್ಲಿ ಗೌಡನಾದ ಶ್ರೀನಿವಾಸನನ್ನು ಬ್ರಾಹ್ಮಣಳಾದ ತಾನು ಮದುವೆಯಾಗುತ್ತೇನೆ. ತಾನು ಜಾತಿಯನ್ನು ನಂಬುವುದಿಲ್ಲ ಎಂಬ ಸತ್ಯಳ ಪತ್ರದೊಂದಿಗೆ ಪ್ರಾರಂಭಗೊಳ್ಳುವ ಈ ಕಾದಂಬರಿಯ ಕೇಂದ್ರ ಸ್ಥಾನ ತಿರುಮಲಾಪುರ.

ಸತ್ಯಳ ಮದುವೆಯ ಕಾರಣದಿಂದ ತಿರುಮಲಾಪುರದಲ್ಲಿ ಬಿರುಗಾಳಿಯೆಬ್ಬಿಸಿದ ಜಾತಿಯ ಸಮಸ್ಯೆ ವಿವಿಧ ಹಂತಗಳಲ್ಲಿ ಇಡಿಯ ಊರನ್ನೇ ಎಷ್ಟು ವಿಕೃತರೂಪಗಳಿಂದ ಹೇಗೆ ಆವರಿಸಿ ಕಬಳಿಸಿ ನಿಂತಿದೆ ಎನ್ನುವುದೇ ಇಲ್ಲಿಯ ಕಥಾವಸ್ತು.

ಆಳ–ಹರವೂ ಎರಡು ಇರುವ ಈ ಕಾದಂಬರಿಯ ಕೇಂದ್ರಬಿಂದು ಸತ್ಯಭಾಮೆ. ಇಲ್ಲಿಯ ಎಲ್ಲ ಘಟನೆಗಳೂ ಎಲ್ಲ ಪಾತ್ರಗಳೂ ಆಕೆಯ ವ್ಯಕ್ತಿತ್ವದ ಅಭಿವ್ಯಕ್ತಿಯ ಹಿನ್ನೆಲೆಯಲ್ಲಿಯೇ ಬರುವುದರಿಂದ ಆಕೆ ಕೇಂದ್ರಬಿಂದುವಾಗಿ ನಿಲ್ಲುತ್ತಾಳೆ. ಈ ಕಾದಂಬರಿಯಲ್ಲಿ ಸಮಸ್ಯೆ ಹತ್ತು ಕಡೆಗಳಲ್ಲಿ ಹರಡಿಕೊಂಡಿರುವಂತೆ ಕಂಡುಬಂದರೂ, ಭೈರಪ್ಪನವರ ಎಲ್ಲ ಗಮನ ಸತ್ಯಭಾಮೆಯಲ್ಲಿದೆ. ಕಾದಂಬರಿಯ ಎಲ್ಲ ಪಾತ್ರಗಳೂ ಸನ್ನಿವೇಶಗಳೂ ಸತ್ಯಭಾಮೆಯೊಡನೆ ನೇರ ಸಂಬಂಧ ಪಡೆದುಕೊಂಡಿದೆ.

ಕಾದಂಬರಿಯ ಮೊದಲನೆಯ ಅಧ್ಯಾಯದಲ್ಲಿ ಬರುವ ತಿರುಮಲಾಪುರದ ಊರಿನ ಭೌಗೋಳಿಕ ಮತ್ತು ಚಾರಿತ್ರಿಕ ವಿವರಗಳು ಕತೆಯ ತಿರುಳಾದ ಜಾತಿ ಸಮಸ್ಯೆಯನ್ನು ಸಮರ್ಥವಾಗಿ ಸ್ಥಾಪಿಸಿ ಬಿಡುತ್ತವೆ.

ಭೈರಪ್ಪನವರ ಹಿಂದಿನ ಕಾದಂಬರಿಗಳಲ್ಲಿ ಧರ್ಮಪಾಲನೆಯ ಮಾತು ಬರುತ್ತದೆಯೇ ಹೊರತು ಪ್ರತಿಷ್ಠೆ ಬರುವುದಿಲ್ಲ. ಈ ಕಾದಂಬರಿಯಲ್ಲಿ ಜಾತಿಯ ಪ್ರತಿಷ್ಠೆಯು ಪ್ರತಿ ಪಾತ್ರದಲ್ಲಿಯೂ ಎದ್ದು ಕಾಣುವುದು. ಕಾದಂಬರಿಯಲ್ಲಿ ಪಾತ್ರಗಳು ಪುಷ್ಟಿಯಾಗಿ ಸೃಷ್ಟಿಗೊಂಡು ಕಥನವನ್ನು ನಡೆಸಿಕೊಂಡು ಹೋಗುತ್ತದೆ.

ಕಾದಂಬರಿಯ ಎರಡನೆಯ ಅಧ್ಯಾಯದಲ್ಲಿ ಗಂಡಾಂತರವನ್ನು ಕಾಣುತ್ತೇವೆ. ಸತ್ಯಭಾಮೆ ದೇವಸ್ಥಾನದ ಅರ್ಚಕನ ಮಗಳು. ಹಟಮಾರಿ ಹಾಗೂ ಧೈರ್ಯಶಾಲಿಯಾದ ಈಕೆ ಇತಿಹಾಸದಲ್ಲಿ ಎಂ.ಎ.ಯನ್ನು ಪಡೆದಿದ್ದಾಳೆ. ಕಾಲೇಜೊಂದರಲ್ಲಿ ಕೆಲಸವನ್ನು ಹೊಂದಿರುವ ಈಕೆ ಮಂತ್ರಿ ಮೇಲುಗಿರಿಗೌಡರ ಮಗ ಶ್ರೀನಿವಾಸನನ್ನು ಮದುವೆಯಾಗಲು ನಿರ್ಧರಿಸುತ್ತಾಳೆ . ಈತ ಓದಿನಲ್ಲಿ ಮುಂದೆ ಬಂದವನಲ್ಲ ಕಷ್ಟಪಟ್ಟು ಬಿ.ಎ. ಮುಗಿಸಿ, ಬಿ.ಎಲ್‌ನಲ್ಲಿ ನಿಂತವನು. ಶ್ರೀನಿವಾಸ ಸತ್ಯಭಾಮೆ ಜೊತೆಯಾಗಿ ಓದಿದವರು ಏಕವಚನದ ಸಲಿಗೆಯಲ್ಲಿ ಮಾತನ್ನಾಡುವ ಗೆಳೆತನವನ್ನು ರೂಢಿಸಿಕೊಂಡಿರುತ್ತಾರೆ. ಮುಂದೆ ಒಂದು ದಿನ ಇವರಿಬ್ಬರ ಗಾಢವಾದ ಸ್ನೇಹ ಮದುವೆಯ ಹಂತಕ್ಕೆ ಬಂದು ನಿಲ್ಲುತ್ತದೆ. ಶ್ರೀನಿವಾಸನ ಮನೆಯಲ್ಲಿ ಮೊದಮೊದಲು ಇವರಿಬ್ಬರ ಮದುವೆಗೆ ಅಷ್ಟೇನೂ ವಿರೋಧವಿರಲಿಲ್ಲ. ಆದರೆ ಸತ್ಯಳ ಮನೆಯಲ್ಲಿ ವಿರೋಧವಿತ್ತು. ಕ್ರಮೇಣ ಶ್ರೀನಿವಾಸನ ಮನೆಯಲ್ಲಿಯೂ ವಿರೋಧಕಾಣಿಸತೊಡಗಿತು. ಇದಕ್ಕೆ ಮೂಲ ಕಾರಣ ಮಂಡ್ಯದ ಎಂ.ಎಲ್.ಎ ಕೆಂಪಣ್ಣನವರು ತಮ್ಮ ಮಗಳು ಕುಮುದಿನಿಯನ್ನು ಶ್ರೀನಿವಾಸನಿಗೆ ತಂದುಕೊಳ್ಳಿ ಎಂದು ಪ್ರಸ್ತಾಪಿಸಿರುವುದು. ಇವರಿಬ್ಬರ ಮದುವೆಗೆ ಹೀಗೆ ಅಡ್ಡಿ ಬಂದಾಗ ಇವರಿಬ್ಬರೂ ರಿಜಿಸ್ಟರ್ಡ್ ಮದುವೆಯಾಗಲು ಮುಂದಾಗುತ್ತಾರೆ. ಆದರೆ ಮಂತ್ರಿಯ ಪ್ರಭಾವದಿಂದಾಗಿ ಇದು ಸಾಧ್ಯವಾಗುವುದಿಲ್ಲ. ಶ್ರೀನಿವಾಸ ಮನೆಯವರ ಒತ್ತಾಯಕ್ಕೆ ಸಿಕ್ಕಿ ಕೆಂಪಣ್ಣನವರ ಮಗಳು ಕುಮುದಿನಿಯನ್ನು ಮದುವೆಯಾಗುತ್ತಾನೆ. ಸತ್ಯ ಮಾತ್ರ ಹಾಗೆಯೇ ಉಳಿಯುತ್ತಾಳೆ. ಈ

ನಡುವೆ ಸತ್ಯಳ ಉದ್ಯೋಗವು ತಪ್ಪಿ ಹೋಗಿ ಆಕೆ ಬಟ್ಟೆ ಅಂಗಡಿಯೊಂದರಲ್ಲಿ ಸೇಲ್ಸ್ ಗರ್ಲ್ ಆಗಿ ಕೆಲಸಕ್ಕೆ ಸೇರಿಕೊಳ್ಳುತ್ತಾಳೆ.

ಕಾದಂಬರಿಯ ಕಥನ ಕ್ರಿಯೆಯಲ್ಲಿ ಮುಂದೆ ಕಾಣಿಸಿಕೊಳ್ಳುವುದು ಈ ಗಂಡಾಂತರವು ಹುಟ್ಟಿ ಹಾಕಿದ ಪ್ರಮಾದಗಳು.

ದೇವಸ್ಥಾನದ ಅರ್ಚಕನಾದ ನನ್ನ ಮಗಳು, ಕೆಳಜಾತೀಯ ಒಬ್ಬನೊಂದಿಗೆ ಮದುವೆಯಾಗಲು ತಯಾರಿ ಮಾಡಿಕೊಂಡಿರುವುದಕ್ಕೆ ವೆಂಕಟರಮಣಯ್ಯನವರು ಮಗಳನ್ನು ಎಕ್ಕಡದಿಂದ ಹೊಡೆದಿರುತ್ತಾರೆ. ಇದರಿಂದ ಒಂದೆಡೆ ಮಾನಸಿಕ ಸ್ಥಿಮಿತ ಕಳೆದುಕೊಂಡರೆ ಇನ್ನೊಂದೆಡೆ ತಾನು ಹಿಂದೆ ಸಹವಾಸ ಮಾಡಿದ್ದ ಮಾತಂಗಿಯ ನೆನಪು ಅವರ ಮನಸ್ಸನ್ನು ಹದಗೆಡಿಸಿರುತ್ತದೆ. ಚಿಕ್ಕ ಪ್ರಾಯದಲ್ಲಿ ವಿಧುರರಾದ ವೆಂಕಟರಮಣಯ್ಯನವರು ದೇಹದ ಬಯಕೆಯನ್ನು ಹತ್ತಿಕ್ಕಲಾರದೆಯೆ ಮಾದಿಗರ ಕೇರಿಯ ಮಾತಂಗಿಯ ಸಹವಾಸವನ್ನು ಮಾಡಿದರು. ಇದನ್ನು ಕಾದಂಬರಿಯಲ್ಲಿ ಕಾದಂಬರಿಕಾರರು ಭೌತಿಕವಾಗಿ ವರ್ಣಿಸುವುದಿಲ್ಲ. ರಾತ್ರಿ ಮಲಗಿದಾಗ ಬರುವ ಯೋಚನೆಯಲ್ಲಿ ಮನಸ್ಸಿನ ತುಮುಲದೊಂದಿಗೆ ಇದರ ಪ್ರಸ್ತಾಪ ಕಾದಂಬರಿಯಲ್ಲಿ ಈ ರೀತಿಯಾಗಿ ಬಂದಿದೆ.- "ಹೀಗಾಗುತ್ತದೆಂಬ ಕಲ್ಪನೆ ಬರುವುದು ಸಾಧ್ಯವಿರಲಿಲ್ಲ. ಅಷ್ಟು ಅನಿರೀಕ್ಷಿತವಾಗಿ, ಅಷ್ಟು ಬೇಗ ಎಲ್ಲವೂ ನೆರವೇರಿ ಹೋಯಿತು. ಯುಗ-ಯುಗಾಂತರವಾಗಿತ್ತೇನೋ ಜನ್ಮ-ಜನ್ಮಾಂತರಗಳು ಸಂದಿತ್ತೇನೋ ಆ ಸುಖ ಕಂಡು ಎನಿಸಿತು. ಕತ್ತಲಿನಲ್ಲಿ ಏನನ್ನೋ ತಡಕಾಡುತ್ತಿದ್ದಾಗ ಆಕಸ್ಮಾತ್ ಸುಖವೇ ಮೈತಳೆದು ಕೈಗೆ ಸಿಕ್ಕಿದಂತೆ ಆಗಿತ್ತು ಇವತ್ತು. ಆದರೆ ಎಲ್ಲ ಬಿಟ್ಟು ತಾನು ಮಾದಿಗಿತ್ತಿಯನ್ನು ಮುಟ್ಟಿದೆನಲ್ಲ;.................... ಬ್ರಹ್ಮರಥೋತ್ಸವ ನಡೆಸುವ ಬ್ರಾಹ್ಮಣ ದೇವರ ಅರ್ಚನೆ ಮಾಡುವ ತಾನು, ಹೀಗೆ ಮಾಡಿದುದು ನ್ಯಾಯವೆ? ಎಂಬ ಯೋಚನೆ

ಮನಸ್ಸನ್ನು ಕೊರೆಯುತ್ತಲೇ ಇತ್ತು[೧]. ಹೀಗೆ ವೆಂಕಟರಮಣಯ್ಯನವರು ಮಾತಂಗಿಯ ಸಹವಾಸವನ್ನು ಅನಿವಾರ್ಯವೆಂಬಂತೆ ಮಾಡಿದರು. ಅವರಿಗೆ ಆಕೆಯೊಂದಿಗೆ ದೇಹದ ಬಯಕೆಯ ತೃಪ್ತಿ ಹೊರತುಪಡಿಸಿ ಈ ಸಂಬಂಧಕ್ಕೆ ಬೇರೆ ಅರ್ಥವನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಅವರಿಬ್ಬರ ಈ ಅನೈತಿಕ ಸಂಬಂಧ ಫಲಿತವಾಗುವ ಹೊತ್ತಿಗೆ ಮಾತಂಗಿ ಅವರಿಂದ ದೂರವಾಗಿ ಬೇರೆ ಹಳ್ಳಿಯಲ್ಲಿದ್ದ ತಮ್ಮ ಜಾತಿಯ ವಿಧುರನೊಬ್ಬನನ್ನು ಕೂಡಿಕೆ ಮಾಡಿಕೊಂಡು ಬಸುರನ್ನು ಅಧಿಕೃತ ಗೊಳಿಸಿಕೊಳ್ಳುತ್ತಾಳೆ. ಒಂದೊಮ್ಮೆ ಮಾತಂಗಿ ತಾನು ಕೊಡಿಕೆ ಮಾಡಿಕೊಂಡಿದ್ದ ಗಂಡನ ಕುಡುಕತನವನ್ನು ಸಹಿಸಲಾರದೆ ಹಳ್ಳಿಗೆ ಹಿಂತಿರುಗಿದ್ದಳು. ಆಗ ಮತ್ತೆ ವೆಂಕಟರಮಣಯ್ಯನವರು ಮತ್ತೆ ಅವಳ ಸಹವಾಸ ಬಯಸುತ್ತಾರೆ. ಆದರೆ ಮಾತಂಗಿ ಅದನ್ನು ನಿರಾಕರಿಸುತ್ತಾಳೆ. ಒಂದು ರಾತ್ರಿ ಹೊಲಗೇರಿ ಹುಡುಕಿಕೊಂಡು ಹೋದಾಗ ಅಲ್ಲಿಯ ಜನ ಸಗಣಿಯ ತೊಪ್ಪೆಗಳನ್ನು ಇವರ ಮೇಲೆಸೆದು ನಾಯಿಗಳನ್ನು ಛೂಬಿಟ್ಟರು. ಇದನ್ನು ತಿಳಿದ ಮಾತಂಗಿ ಅವರನ್ನು ಸಂಧಿಸಿ ಜಾತಿ ಸಂಬಂಧವಾದ ಮಾರ್ಮಿಕ ಪ್ರಶ್ನೆಗಳನ್ನು ಕೇಳಿ ತಬ್ಬಿಬ್ಬುಗೊಳಿಸುತ್ತಾಳೆ.

ಸತ್ಯಳ ಮದುವೆ ಮಾತು ವಿಫಲವಾದ ಮೇಲೆ ಅವಳು ಸೀರೆ ಅಂಗಡಿಯಲ್ಲಿ ಕೆಲಸ ಮಾಡುತ್ತಿರುವುದನ್ನು, ಬೆಟ್ಟಯ್ಯನವರಿಂದ ತಿಳಿದು ಬಂದು ಪರಿತಪಿಸಿದ ವೆಂಕಟರಮಣಯ್ಯನವರು ತಮ್ಮ ಹಳೆಯ ಎಕ್ಕಡಗಳಿಂದ ತಾವೇ ಹೊಡೆದುಕೊಂಡರು. ಶ್ರೀನಿವಾಸನಿಗೆ ಬದುಕಲು ಬೇರೆ ದಾರಿಗಳಿವೆ. ಸತ್ಯಳಿಗೆ ಆ ದಾರಿಗಳು ಮುಚ್ಚಿ ಹೋಗಿವೆ. ದೇವಾಲಯದಲ್ಲಿ ಮಾಡುವ ಪೂಜೆಯು ವ್ಯರ್ಥ ಎಂದು ಅವರಿಗೆ ಅನಿಸಿ ಮನೆಯನ್ನೂ ದೇವಾಲಯವನ್ನೂ ಬಿಟ್ಟು ತಮ್ಮ ತೋಟದಲ್ಲಿಯೇ ಗುಡಿಸಲು ಕಟ್ಟಿಸಿಕೊಂಡು ಅಲ್ಲಿಯೇ ವಾಸಿಸಲಾರಂಭಿಸಿದರು. ತಂದೆಯವರ ಈ ಸ್ಥಿತಿಯನ್ನು ತಿಳಿದು ಸತ್ಯ ಊರಿಗೆ ಮರಳಿ, ಗುಡಿಸಲಿನಲ್ಲಿ ತಂದೆ ತಾನು ವಸಿಷ್ಠನ ಹಾಗೆ

---

[೧] 'ದಾಟು' ಪುಟ ೧೨೪. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೭೩.

ಆಡುತ್ತಿರುವುದನ್ನೂ ಆರುಂಧತಿ, ಇಂದ್ರ, ಯಾಗ, ಹೀಗೆಲ್ಲ ಬಡಬಡಿಸುತ್ತಿರುವುದನ್ನು ಕಂಡು ಕಂಗಾಲಾಗುವ ಬದಲು ಅವರ ಕೈಯಲ್ಲಿ ಯಜ್ಞೋಪವೀತ ಧಾರಣೆ ಮಾಡಿಸಿಕೊಳ್ಳುತ್ತಾಳೆ. ಹವನ-ಹೋಮಗಳಲ್ಲಿ ಭಾಗವಹಿಸುತ್ತಾಳೆ. ಕ್ರಮೇಣ ಆರುಂಧತಿ ಆರುಂಧತಿ ಎಂದು ಬಡಬಡಿಸುತ್ತಿದ್ದ ವೆಂಕಟರಮಣಯ್ಯನವರ ಬುದ್ಧಿಭ್ರಮಣೆಯು ಪರಾಕಾಷ್ಠೆಯನ್ನು ಮುಟ್ಟಿ, ನೀರು, ಜಲ, ಸಮುದ್ರ, ಪ್ರಳಯ, ಹೀಗೆ ದಿನವೆಲ್ಲ ಬಡಬಡಿಸಿ ರಾತ್ರಿಯ ಹೊತ್ತಿಗೆ ಕೆರೆಗೆ ಬಿದ್ದು ಪ್ರಾಣಕಳೆದುಕೊಂಡರು.- ಇವಿಷ್ಟು ಕತೆಯಿಂದ ಕಾದಂಬರಿಯ ಪೂರ್ವಾರ್ಧವು ನಿರೂಪಿತಗೊಂಡಿದೆ.

ಕಾದಂಬರಿಯ ಉತ್ತರಾರ್ಧವು ಕಥಾನಾಯಕಿಯಾದ ಸತ್ಯಭಾಮಳ ಪ್ರಭಾವಕ್ಕೆ ಸಂಬಂಧಿಸಿ ನಿರೂಪಿತಗೊಂಡಿದೆ. ತನ್ನ ತಂದೆಯವರ ಆತ್ಮಹತ್ಯೆಗೆ ಮೋಹನದಾಸನೇ ಕಾರಣ ಎಂಬ ಆರೋಪ ಹಳ್ಳಿಯವರಲ್ಲಿ ದೃಢವಾದಾಗ ಅದನ್ನು ತಪ್ಪಿಸುವಂಥ ಹೇಳಿಕೆಯಿತ್ತು ಅವನನ್ನು ಪಾರುಮಾಡಿದಳು. ತೋಟದ ಗುಡಿಸಲಿನಲ್ಲಿ ವಾಸಮಾಡುತ್ತ ತಂದೆಯ ಸ್ಥಾನವನ್ನು ಆಕ್ರಮಿಸಿದಳು. ಹವನಕುಂಡವನ್ನು ಹೊತ್ತಿಸಿದಳು. ಬೆಟ್ಟಯ್ಯನವರ ಮಗಳು ಮೀರಳನ್ನು ಮೇಡಮ್ ಕೆಲಸದಿಂದ ಬಿಡಿಸಿ ಕಾಲೇಜು ಸೇರಲು ಪ್ರೇರೇಪಿಸಿದಳು.

ಕಾದಂಬರಿಯಲ್ಲಿನ ಘಟನೆಗಳು ಒಂದಲ್ಲ ಒಂದು ವಿಧದಿಂದ ಸತ್ಯಳ ಕೇಂದ್ರದ ಸುತ್ತೇ ಸುಳಿಯುವುದರಿಂದ ಎಲ್ಲವೂ ಸತ್ಯಳ ವ್ಯಕ್ತಿತ್ವದ ಹಿನ್ನಲೆಯಾಗಿಯೇ ಬರುತ್ತದೆ. ಕಾದಂಬರಿಯಲ್ಲಿ ಘಟಿಸುವ ಹುಚ್ಚುಗಳು, ಸಾವುಗಳು ಎಲ್ಲಕ್ಕೂ ಒಂದೊಂದು ಬಗೆಯಿಂದ ಸತ್ಯಳ ನಡತೆ ನಿರ್ಧಾರಗಳೇ ಕಾರಣವಾಗುತ್ತದೆ. ವೆಂಕಟರಮಣಯ್ಯನವರಿಗೆ ಹುಚ್ಚು ನಂತರ ಸಾವು, ಹಾಗೆಯೇ ಶ್ರೀನಿವಾಸನ ಹುಚ್ಚು, ಕುಮುದಿನಿ ಹಾಗೂ ಮೀರಾಳ ಸಾವು. ಹೀಗೆ ಕಾದಂಬರಿಯು ಉದ್ದಕ್ಕೂ ಮಾನಸಿಕ ಅಸ್ವಸ್ಥತೆ ಹಾಗೂ ಸಾವುಗಳ ಸರಮಾಲೆಯಿಂದ ನಿರ್ಮಿತಗೊಳ್ಳುತ್ತವೆ.

ಶ್ರೀನಿವಾಸನಿಂದ ನಿರಾಕರಿಸಲ್ಪಟ್ಟು ತನ್ನ ಪ್ರೇಮವು ಭಗ್ನವಾದರೂ ಮಾನಸಿಕವಾಗಿ ಕುಗ್ಗದೇ ಅಗಾಧವಾದ ಮನೋದಾರ್ಢ್ಯವನ್ನೂ, ಆತ್ಮವಿಶ್ವಾಸವನ್ನು ಜೀವನ ಪ್ರೀತಿಯನ್ನೂ ಕಾದಂಬರಿಯುದ್ದಕ್ಕೂ ಉಳಿಸಿಕೊಳ್ಳುವ ಸತ್ಯಭಾಮೆಯ ಪಾತ್ರ ಚಿತ್ರಣ ಇಡೀ ಕಾದಂಬರಿಯ ಕೇಂದ್ರಬಿಂದುವಾಗುತ್ತದೆ. ಅಸ್ಥಿರತೆಗೂ, ಮನೋದೌರ್ಬಲ್ಯಕ್ಕೂ, ಭಾವನಾತ್ಮಕ ಸುಳಿಗಳಿಂದ ಬಿಡಿಸಿಕೊಳ್ಳುವ ಶಕ್ತಿಯಿಲ್ಲದೆ, ಜೀವನ ಪ್ರೀತಿಯನ್ನು ಕಳೆದುಕೊಂಡು, ಸ್ಥಿಮಿತತೆಯನ್ನು ಕಳೆದುಕೊಂಡು ಶ್ರೀನಿವಾಸ ಸಂಪೂರ್ಣ ವೈಫಲ್ಯವನ್ನು ಅನುಭವಿಸುತ್ತಾನೆ. ಪ್ರೇಮದ ಮೂಲಶಕ್ತಿಯ ಮೇಲೆ ಪರೋಕ್ಷವಾಗಿ ತನ್ನ ಗಾಢವಾದ, ಪ್ರಬಲವಾದ ಪರಿಣಾಮ ಬೀರುವ ಹೊರಗಿನ ಶಕ್ತಿಗಳಾದ ರಾಜಕೀಯ, ಮತೀಯ, ಭಾವನಾತ್ಮಕ, ಸಾಮಾಜಿಕ ಧೋರಣೆಗಳನ್ನೂ ಕೃತಿಯು ವಿಸ್ತಾರವಾದ ರೂಪದಲ್ಲಿ ಹಿಡಿದಿಡುತ್ತದೆ. ಬಂಡಾಯ ಮನೋಧರ್ಮದ ಮೋಹನದಾಸನ ಪಾತ್ರವು ಅಶಕ್ತವಾದದ ಪ್ರತೀಕವಾಗಿ ಕಂಡು ಬರುತ್ತದೆ. ಯಾವುದೇ ಜಾತಿಯನ್ನು ನಿಕೃಷ್ಟಗೊಳಿಸದೆ, ಯಾವುದೇ ಜಾತಿಯನ್ನು ಉತ್ಕೃಷ್ಟಗೊಳಿಸದೇ ಸಂಪೂರ್ಣ ನಿಷ್ಪಕ್ಷ, ನಿರ್ಲಿಪ್ತ ದೃಷ್ಟಿಯು ಇಡೀ ಕಾದಂಬರಿಯ ಪಾತ್ರಗಳನ್ನು ನಿರ್ದೇಶಿಸಿ ಬೆಳೆಸುತ್ತದೆ.

ಕಾದಂಬರಿಯಲ್ಲಿ ಸು. ೨೦೦ ಪುಟಗಳ ತನಕ ತುಂಬ ಸಹಜವಾಗಿ ಹರಿದು ಬಂದ ಕಥೆ ಅಲ್ಲಿಂದ ಮುಂದಕ್ಕೆ ಹೊಸ ತಿರುವು ಪಡೆಯುತ್ತದೆ. ಇಲ್ಲಿಯ ತನಕದ ಕತೆಗಳು ಸಹಜವಾಗಿ ಸಂಭವಿಸುತ್ತವೆ. ಆದರೆ ಮುಂದಿನ ಘಟನೆಗಳನ್ನು ಕಾದಂಬರಿಕಾರರು ನಿರ್ಮಿಸುತ್ತಾರೆ. ನಮ್ಮ ನೆರೆ ಕೆರೆಯಲ್ಲಿ, ನಮ್ಮ ಅಕ್ಕ ಪಕ್ಕದಲ್ಲಿ ನಿತ್ಯವು ನಡೆಯುವ ಘಟನೆಗಳನ್ನೇ ಓದುತ್ತಿದ್ದೇವೆ ಎಂದೆನಿಸುತ್ತಿದ್ದ ನಮಗೆ ಇಲ್ಲಿಂದ ಮುಂದಕ್ಕೆ ದೃಶ್ಯದಿಂದ ದೃಶ್ಯಕ್ಕೆ ಕುತೂಹಲವನ್ನು ಕೆರಳಿಸುವ ಒಂದು ಒಳ್ಳೆಯ ನಾಟಕವನ್ನು ನೋಡುತ್ತಿರುವಂತೆ ಭಾಸವಾಗುವ ರೀತಿಯಲ್ಲಿ ಕಥನಕ್ರಿಯೆ ಕಂಡುಬರುತ್ತದೆ.

ವಾಸ್ತವ ಮಾರ್ಗದ ಎಲ್ಲ ಕಾದಂಬರಿಕಾರರು ತಮ್ಮ ಕಾದಂಬರಿಗಳಲ್ಲಿ ಸಮಾಜದ ಅನೇಕ ಸಮಸ್ಯೆಗಳನ್ನು ಎತ್ತಿಕೊಂಡು ಬರೆದಿರುತ್ತಾರೆ[೨]. ಆದರೆ ದಾಟು ಕಾದಂಬರಿಯಲ್ಲಿ ಸಮಸ್ಯೆಯು ಸಮಗ್ರವಾದ ಸ್ವರೂಪವನ್ನು ತಳೆದುಬಿಟ್ಟಿದೆ. ಈ ಕಾದಂಬರಿಯ ಕಥನದ ಪುಟಪುಟದಲ್ಲೂ ಜಾತಿಗಳ, ಉಪಜಾತಿಗಳ ಮತ್ತು ಅವು ಆಡುವ ರಾಜಕೀಯ/ಸಾಮಾಜಿಕ ಆಟಗಳ ವರ್ಣನೆ ತುಂಬಿ ಹೋಗಿದೆ. ಆ ಆಟಗಳಲ್ಲಿ ಜಗಳ, ಕುಹುಕ ಮತ್ತು ಅಸೂಯೆಗಳಿವೆ. ಜಾತಿಗಳನ್ನು ಪರಸ್ಪರ ಹೀಯಾಳಿಸುವಂಥ ಜಾನಪದ ಕತೆಗಳು ಕಾದಂಬರಿಯ ಪಾತ್ರಗಳ ಮಾತಿನಲ್ಲಿ ಉಪಕತೆಗಳ ರೂಪದಲ್ಲಿ ಸಂದರ್ಭಾನುಸಾರವಾಗಿ ಬರುತ್ತವೆ.

ಉದಾ: ಬೂದುಗುಂಬಳ ಕಾಯ ಕತೆ, ಮಾರಮ್ಮನ ಕತೆ, ಲಕ್ಷ್ಮೀಯ ಕತೆ ಮತ್ತು ಜಮದಗ್ನಿ-ರೇಣುಕ ಮಾತಂಗಿ ಇತ್ಯಾದಿ ಕತೆಗಳು – ಈ ಎಲ್ಲ ಕತೆಗಳು ಒಂದಲ್ಲ ಒಂದು ಸಂದರ್ಭದಲ್ಲಿ ಅನಾವರಣಗೊಳ್ಳುತ್ತಾ ಹೋಗುತ್ತವೆ.

ಕಾದಂಬರಿಯ ಕೆಲವೊಂದು ಭಾಗ ಅನಾವಶ್ಯಕವಾಗಿ ಕಥೆಯ ಬೆಳವಣಿಗೆಗೆ ಯಾವ ರೀತಿಯಲ್ಲೂ ಸಹಾಯ ಮಾಡದಂತೆ ಬೆಳೆದಿರುವುದೂ ಉಂಟು. ವೆಂಕಟೇಶ್ ತನ್ನ ಹೆಂಡತಿಗೂ ಅವಳ ತಂದೆಯ ಆಸ್ತಿಯಲ್ಲಿ ಸಮಪಾಲು ಬರಬೇಕೆಂದು ಹಠಹಿಡಿದು ಸಾಧಿಸಿ ಹಣ ಪಡೆಯುವುದು ಇಂತಹ ಒಂದು ಪ್ರಸಂಗ. ತನ್ನ ಪಾಲನ್ನು ತರುವವರೆಗೂ ಮನೆಗೆ ಬರಬೇಡ ಎಂದು ಹೆಂಡತಿಯನ್ನು ತೌರಿಗೆ ಕಳುಹಿಸಿದುದರಿಂದ ಸತ್ಯ ತನ್ನ ಅತ್ತಿಗೆಯ ಮೇಲಿನ ಕನಿಕರದಿಂದ, ಅಪ್ಪ ತನಗೆ ಬರೆದ ಆಸ್ತಿ ಬೇಡವೆಂದು, ಪೂರ್ತಿ ಆಸ್ತಿಗೆ ತನ್ನನ್ನು ಅಧಿಕಾರಿಯನ್ನಾಗಿ ಮಾಡುತ್ತಾಳೆಂಬ ವೆಂಕಟೇಶನ ಪ್ರಚಂಡ ಕುತಂತ್ರ, ಅವನ ಪಾತ್ರವನ್ನು ಮಾತ್ರ ಸೊಗಸಾಗಿ ಅರ್ಥೈಸುವುದೇ ವಿನಃ ಕಾದಂಬರಿಯ

---

[೨] ಬಸವರಾಜ ಕಟ್ಟೀಮನಿಯವರ 'ಜನಿವಾರ' ಮತ್ತು 'ಶಿವದಾರ' ಹಾಗೂ ನೀ ನನ್ನ ಮುಟ್ಟಬೇಡ ಈ ಕಾದಂಬರಿಗಳಲ್ಲಿರುವುದು ಜಾತಿ ಸಮಸ್ಯೆಯ ಕತೆಯೇ. ಆದರೆ ಆ ಎಲ್ಲ ಕಾದಂಬರಿಗಳಲ್ಲಿ ಎತ್ತಿಕೊಂಡ ಸಮಸ್ಯೆಗಳು ಕತೆಯ ಒಡಲಲ್ಲಿ ಸೇರಿಕೊಂಡು ಬಿಟ್ಟಿರುತ್ತವೆ.

ಮೂಲಕಥೆಯನ್ನು ಯಾವ ರೀತೀಯಲ್ಲೂ ಪೋಷಿಸದ ಒಂದು ಉಪಕಥೆಯಂತಿದೆ. ಮಾರಮ್ಮನ ಕತೆ ಕಾದಂಬರಿಯಲ್ಲಿ ೨ ಸಲ ಬಂದಿದೆ. ಒಂದು ಕಡೆ ವಿವರವಾಗಿ[೩]. ಎರಡು ಕಡೆ ಚುಟುಕಾಗಿ[೪]. ಹಲವಾರು ಕಡೆ ಊಟ, ತಿಂಡಿ, ಅಡುಗೆ, ಇತ್ಯಾದಿ ಕ್ರಿಯೆಯನ್ನು ಪ್ರಸ್ತಾಪಿಸುವ ಸಂದರ್ಭಗಳಲ್ಲಿ ಪುನರಾವರ್ತನೆಗೊಳ್ಳುವುದು ಕಾದಂಬರಿಯ ಕಥನ ಕ್ರಿಯೆಗೆ ದೋಷವಾಗಿ ಪರಿಣಮಿಸಿದೆ..

ಇಂತಹ ಒಳನೆಯ್ಗೆಗಳಿಂದ ತುಂಬಿರುವ ಈ ಕಾದಂಬರಿ ಸಿ.ಎನ್.ರಾಮಚಂದ್ರನ್ ಹೇಳುವಂತೆ ಹೊರರಚನೆಯಲ್ಲಿ ಜಾತಿಯನ್ನು ದಾಟಬೇಕೆಂಬ ಆಶಯವಿದ್ದು ಒಳರಚನೆಯಲ್ಲಿ ದಾಟಲಾಗದ ನಿಸ್ಸಹಾಯಕತೆಯನ್ನು ಸೂಚಿಸುತ್ತಿದೆ ಎಂದು ಹೇಳಬಹುದೇ ಹೊರತು ದಾಟಬಾರದು ಎಂಬ ಆಶಯವನ್ನು ಹೊಂದಿ ಪ್ರತಿಗಾಮಿಯಾಗಿದೆ ಎಂದು ಹೇಳಲಾಗುವುದಿಲ್ಲ[೫].

'ದಾಟು' ಕಾದಂಬರಿಯು ಮೂಲತಃ ಜಾತೀಯತೆಯ ಸಮಸ್ಯೆಯ ಬಗೆಗೆ ಬೆಳಕು ಬೀರುವ ಕೃತಿಯಾದರೂ ರಾಜಕಾರಣದ ರಾಜಕೀಯ ವ್ಯಕ್ತಿಗಳ ಶಕ್ತಿ ಪ್ರಭಾವದ ಅಂಶಗಳು ಕಾದಂಬರಿಯ ಅನಿವಾರ್ಯ ಅಂಗವಾಗಿಯೇ ಕಾಣಿಸಿಕೊಳ್ಳುತ್ತದೆ. ಜಾತಿ-ಜಾತಿಗಳ ನಡುವಣ ಅಂತರಗಳನ್ನೂ, ಆ ಅಂತರಗಳು ಸೃಷ್ಟಿಸುವ ಸಮಸ್ಯೆಗಳನ್ನೂ ಕೃತಿಯು ಸಂಶೋಧನಾತ್ಮಕ ದೃಷ್ಟಿಯಿಂದ ವಿಶ್ಲೇಷಣಾಕ್ರಿಯೆಯನ್ನು ನಡೆಸುತ್ತದೆ. ಸಮಾಜದಲ್ಲಿ ಶೋಷಿತ ಜನಾಂಗವಾದ ದಲಿತವರ್ಗದ ಸಮಸ್ಯೆಗಳನ್ನು ಧೋರಣೆಗಳನ್ನೂ ಕ್ರಾಂತಿಕಾರೀ ಮನೋಭಾವಗಳನ್ನೂ ಐತಿಹಾಸಿಕ ದೃಷ್ಟಿಯಿಂದಲೂ, ಧಾರ್ಮಿಕ ದೃಷ್ಟಿಯಿಂದಲೂ, ಪರಂಪರೆಯ ದೃಷ್ಟಿಯಿಂದಲೂ ಆಳವಾಗಿ ಶೋಧಿಸಿ ಪಾತ್ರಗಳ ಮುಖಾಂತರವಾಗಿ ಇಡೀ ಜನಾಂಗದ ನಾಡಿಮಿಡಿತವನ್ನು ಗ್ರಹಿಸುತ್ತದೆ.

---

[೩] 'ದಾಟು' ಪುಟ ೧೯೭. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೭೩.

[೪] 'ದಾಟು' ಪುಟ ೪೬೨, ೪೬೩, ೪೬೪. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೭೩.

[೫] 'ಆಶಯ-ಆಕೃತಿ' - ಪುಟ ೧೦೪. ಸಿ.ಎನ್.ರಾಮಚಂದ್ರನ್.

ವೈಚಾರಿಕ ಪ್ರಜ್ಞೆಯನ್ನು ಜಾಗೃತಗೊಳಿಸುತ್ತದೆ. ಕಾದಂಬರಿಯ ಮೂಲವಸ್ತು ಕೇವಲ ಒಂದು ಹಳ್ಳಿಯ, ಒಂದು ಧರ್ಮದ ವ್ಯಾಪ್ತಿಗೆ ಒಳಪಡದೆ, ಇಡೀ ಭಾರತೀಯ ಜನಾಂಗದ ಪ್ರಜ್ಞೆಯನ್ನು ಪ್ರವೇಶಿಸುವುದರ ಕಾರಣದಿಂದಾಗಿಯೇ 'ದಾಟು' ಕೇವಲ ಕನ್ನಡ ಸಾಹಿತ್ಯಕ್ಕಷ್ಟೇ ಅಲ್ಲದೆ ಭಾರತೀಯ ಸಾಹಿತ್ಯಕ್ಕೂ ಒಂದು ಮಹತ್ವಪೂರ್ಣ ಕೃತಿಯೆನಿಸುತ್ತದೆ. ಜಾತಿ-ಧರ್ಮ-ಮತಗಳ ಸಂಕುಚಿತ ಮನೋಭೂಮಿಕೆಯನ್ನು ದಾಟಿ, ಮೀರಿ ಮಾನವೀಯ ಸಂಬಂಧಗಳನ್ನು ಗಟ್ಟಿಗೊಳಿಸುವ ವಿಶಾಲಸ್ತರಕ್ಕೆ ಏರಬೇಕಾದ ಅಗತ್ಯವನ್ನೂ, ಆಶಯವನ್ನೂ ಕೃತಿಯು ಸಮರ್ಥವಾಗಿ ಪ್ರತಿಧ್ವನಿಸುತ್ತದೆ.

'ದಾಟು'ವಿನ ಪಾತ್ರಚಿತ್ರಣದಲ್ಲಿ ಅದರಲ್ಲೂ ಸತ್ಯ, ಮೋಹನದಾಸ, ಮೇಲಗಿರಿಗೌಡರು, ವೆಂಕಟೇಶ, ವೆಂಕಟರಮಣಯ್ಯ ಈ ಪಾತ್ರಗಳ ಗುಣಾವಗುಣಗಳನ್ನು ಚಿತ್ರಿಸುವಲ್ಲಿ ಕಾದಂಬರಿಕಾರರು ಅದ್ಭುತ ಸಿದ್ಧಿಯನ್ನು ತೋರಿದ್ದಾರೆ. ವೈಚಾರಿಕತೆಯನ್ನೇ ಮೂಲಗುಣವನ್ನಾಗಿ ಒಳಗೊಂಡ ಈ ಕಾದಂಬರಿ ಜ್ವಲಂತ ಸಮಸ್ಯೆಯೊಂದನ್ನು ವಿಶ್ಲೇಷಿಸ ಹೊರಟಿದ್ದರೂ ಕಾದಂಬರಿಕಾರರು ಹೊಸ ಬಗೆಯ ತಂತ್ರಕ್ಕೆ ಕೈ ಹಾಕಿಲ್ಲ. ಕಾದಂಬರೀ ಪ್ರಪಂಚದಲ್ಲಿ ಹಳತಾದ ನಿರೂಪಣಾ ವಿಧಾನವನ್ನೇ ಅನುಸರಿಸಿರುವರು. ಹಳೆಯ ನಿರೂಪಣಾ ವಿಧಾನವನ್ನು ಅನುಸರಿಸಿಯೂ ಅಪೂರ್ವವೆನ್ನುವಂತೆ ಪಾತ್ರಚಿತ್ರಣ ಮಾಡಿರುವುದು ಭೈರಪ್ಪನವರ ಪ್ರತಿಭಾ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ.

****************

## 'ಅನ್ವೇಷಣೆ'-ಕಥನಕ್ರಿಯೆ

'ಎಲ್ಲಿಗೆ ಹೋದ ಇವನು? ಹುಡುಕಬೇಕು ಎಲ್ಲಿ ಅಂತ ಹುಡುಕುವುದು?- ಎನ್ನುವ ಕಂಠೀ ಜೋಯಿಸರ ಉದ್ಗಾರದೊಂದಿಗೆ ಪ್ರಾರಂಭಗೊಳ್ಳುವ ಈ ಕಾದಂಬರಿ, ಹೆಸರೇ ಸೂಚಿಸುವ ಹಾಗೆ ಹುಡುಕುವ ಕತೆ. ಭೈರಪ್ಪನವರ 'ಗೃಹಭಂಗ' ಕಾದಂಬರಿಯಲ್ಲಿ ಕೊನೆಗೆ ಬದುಕುಳಿಯುವ ನಂಜಮ್ಮನ ಮಗ ವಿಶ್ವನಾಥನೇ 'ಅನ್ವೇಷಣೆ' ಕಾದಂಬರಿಯ ಪ್ರಧಾನ ಪಾತ್ರ. ತಾಯಿಯನ್ನು ಕಳೆದುಕೊಂಡು ಅನ್ಯರ ಆಳುವಿಕೆಯಲ್ಲಿ ಬೆಳೆದು ದೊಡ್ಡವನಾದ ಈತ, ತನ್ನ ಸ್ವಭಾವವನ್ನು ವ್ಯವಹಾರಿಕ ಬದುಕಿನೊಂದಿಗೆ ರಾಜಿ ಮಾಡಿಸಿಕೊಳ್ಳದೇ ತನ್ನ ದಾರಿಯಲ್ಲಿ ನಡೆಯಲು ಪ್ರಯತ್ನಿಸುತ್ತಾನೆ. ವಿಶಿಷ್ಟ ಮನೋಧರ್ಮದ ವಿಶ್ವನಾಥನು ಎಲ್ಲಿಯೂ ಹೊಂದಿಕೊಳ್ಳಲಾಗದೇ ರೈಲ್ವೆ ಡಬ್ಬಿಗಳು ಊರಿಂದ ಊರಿಗೆ ಪ್ರಯಾಣ ಬೆಳೆಸುವಂತೆ ಈತನು ಯಾರ ಬಳಿಯಲ್ಲಿಯೂ ನೆಲೆ ನಿಲ್ಲದೇ ಪ್ರಯಾಣ ಬೆಳೆಸುತ್ತಾನೆ.

ಹೀಗೆ ಕಥಾನಾಯಕನಾದ ವಿಶ್ವನಾಥನು ಒಂದು ನಿಗದಿತವಾದ ನೆಲೆಯಲ್ಲಿ ನಿಲ್ಲದೇ ತನ್ನ ಚಿಕ್ಕ ವಯಸ್ಸಿನಲ್ಲಿ ಬೇರೆ ಬೇರೆ ವೃತ್ತಿಗಳನ್ನು ಅವಲಂಬಿಸುವಾಗ ಟೂರಿಂಗ್ ಟಾಕೀಸಿನ ಗೇಟ್ ಕೀಪರನಾಗಿರುತ್ತಾನೆ. ನಾಟಕ ಕಂಪೆನಿಯಲ್ಲಿ ಲೆಕ್ಕ ಪತ್ರದ ಅಸಿಸ್ಟೆಂಟಾಗಿರುತ್ತಾನೆ. ಹೋಟೆಲ್‌ನಲ್ಲಿ ಮಾಣಿಯಾಗಿರುತ್ತಾನೆ. ವಕೀಲರೊಬ್ಬರ ಮನೆಯಲ್ಲಿ ಅಡುಗೆಯವನಾಗಿರುತ್ತಾನೆ. ಬೆಟ್ಟ-ಗುಡ್ಡಗಳಲ್ಲಿ ಸ್ವಾಮೀಜಿಗಳೊಂದಿಗೆ ವಾಸಿಸುತ್ತಾನೆ. ಮೆಸ್ಸಿನಲ್ಲಿ ಅಡುಗೆ ಮಾಡಿ ಬಡಿಸುತ್ತಾನೆ. ರೈಲ್ವೆ ನಿಲ್ದಾಣದಲ್ಲಿ ಕೂಲಿ ಮಾಡುವುದಲ್ಲದೆ ಟಾಂಗಾ ಹೊಡೆಯುತ್ತಾನೆ. ಕೊನೆಗೆ ಮದುವೆಯಾಗುತ್ತಾನೆ. ಆದರೆ ಈ ಘಟನೆಗಳು ನೇರ ಕಥನದಲ್ಲಿ ಬರುವುದಿಲ್ಲ. ಆಯಾಯ ಘಟ್ಟದ ಪಾತ್ರಗಳು ತಮ್ಮಲ್ಲಿ ಬಂದು ನೆಲೆಯಾಗದೇ ಹೊರಟು ಹೋದ ವಿಶ್ವನನ್ನು ಒಂದು ಬಗೆಯ ರಿಲೇ

ಅನಾವರಣವಾಗುತ್ತ ಹೋಗುತ್ತವೆ. ಅವನನ್ನು ಇನ್ನಷ್ಟು ತಿಳಿದುಕೊಳ್ಳಲು ಸಾಧ್ಯವಾದರೆ ಸಾಕು ಎಂಬ ಹೆಡ್‌ಮಾಸ್ತರರ ಆಶಯದೊಂದಿಗೆ ಕಾದಂಬರಿ ಕೊನೆಗೊಳ್ಳುತ್ತದೆ.

"ಮನುಷ್ಯ ಮನುಷ್ಯ ಮಾತನ್ನಾಡಲೇ ಬೇಕೆಂದಿಲ್ಲ, ಜೊತೆಯಲ್ಲಿದ್ದಾರೆ ಸಾಕು". "ಕಾಮ ಕೆಟ್ಟದಲ್ಲ, ವಿಕೃತ ಕಾಮ ಕೆಟ್ಟದ್ದು" ಎನ್ನುವ ಬದುಕನ್ನು ಅನಾವರಣಗೊಳಿಸುವ ಈ ೨ ಸಂಗತಿಗಳು ಕಾದಂಬರಿಯ ಮುಖ್ಯ ಪಾತ್ರಗಳ ಬದುಕಿನೊಂದಿಗೆ ಕಥನ ಕ್ರಿಯೆಯಲ್ಲಿ ಅನಾವರಣಗೊಳ್ಳುತ್ತಾ ಹೋಗುತ್ತದೆ.

ಸುಂದರವಾದ ಭಿತ್ತಿಯಿಂದ ನಿರ್ಮಿಸಿರುವ ಭೈರಪ್ಪನವರ 'ಅನ್ವೇಷಣೆ' ಕಾದಂಬರಿಯ ಮೊದಲ ಭಾಗದಲ್ಲಿ ವಿಶ್ವನಾಥ ಬಿಟ್ಟು ಹೋದ ಜೀವನವನ್ನು ಅರಸುತ್ತಿರುವ ಕಂಠೀಜೋಯಿಸರು, ತಮ್ಮ ಜೀವನವನ್ನೂ ಅರಸುತ್ತಿದ್ದಾರೆ. ತನ್ನ ವಂಶದ ಕುಡಿಯ ಬಗೆಗೆ ಹುಟ್ಟುವ ಗಾಢವಾದ ಆಸಕ್ತಿ, ಹಾಗೂ ಈ ಆಸಕ್ತಿಯನ್ನು ಭಾಷೆಯಲ್ಲಿ ಹಾಗೂ ವಾತಾವರಣದಲ್ಲಿ ಗಟ್ಟಿಗೊಳಿಸುವ ಕ್ರಿಯೆ ಕಾದಂಬರಿಯಲ್ಲಿ ನಡೆಯುತ್ತದೆ.

ಕಾದಂಬರಿಯ ಮುಂದಿನ ಎಳೆ ದೇಶಪಾಂಡೆ ವಕೀಲರದ್ದು. ಚೆನ್ನವ್ವನ ಜೊತೆಗಿನ ದೇಶಪಾಂಡೆಯವರ ಸಂಬಂಧವು ಸಮಾಜಬಾಹಿರವಾದುದು. ಆದರೂ ಸಮಾಜವು ಒಪ್ಪಿಕೊಂಡಿದೆ. ಆದರೆ ವಿಶ್ವನಾಥ ನಡೆಸುವ ಕೆಲಸಗಾರರ ಚಳುವಳಿಯನ್ನು ಮಾತ್ರ ಸಮಾಜ ಸಹಿಸುವುದಿಲ್ಲ. ಇದು ವಿಶ್ವನಾಥನ ಜೀವನದ ದ್ವಿತೀಯ ಭಾಗ. ಇಲ್ಲಿ ಆತ ಪಡೆಯುವ ಅನುಭವ ವಿಶಿಷ್ಟವಾದದ್ದು. ಚೆನ್ನವ್ವ ಹಾಗೂ ದೇಶಪಾಂಡೆಯವರ ಸಂಬಂಧವನ್ನು ಗಮನಿಸಿದ ಆತ, ಸರಳಾಬಾಯಿಯೊಂದಿಗಿನ ಸಂಬಂಧವನ್ನು ಸಹಜವಾಗಿ ಮುಂದುವರಿಸಬಹುದಿತ್ತು. ಆದರೆ ಇಂಥ ಪ್ರಶ್ನೆ ತೀರ ವೈಯಕ್ತಿಕವಾದುದೇ ಹೊರತು ಸಾಮಾನ್ಯೀಕರಣಕ್ಕೆ ಅಯೋಗ್ಯ ಎನ್ನುವ ಪ್ರಜ್ಞೆ ಸುಪ್ತವಾಗಿ ಅವನ ಪಾತ್ರದುದ್ದಕ್ಕೂ ಮೂಡಿಬರುತ್ತದೆ. ದೇಶಪಾಂಡೆ ವಕೀಲರ ಜೀವನದ ಸಂದರ್ಭದಲ್ಲಿ

ನಿಜವಾಗುವುದು ತನ್ನ ಜೀವನದಲ್ಲಿಯೂ ನಿಜವಾಗಬೇಕೆಂಬುದನ್ನು ವಿಶ್ವನಾಥ ತಿರಸ್ಕರಿಸುತ್ತಾನೆ.

ಮೊದಲ ಭಾಗದಲ್ಲಿ ಕಂಠೀಜೋಯಿಸರು ವಿಶ್ವನನ್ನು ಹುಡುಕಿಕೊಂಡು ಹೊರಟರೆ, ದೇಶಪಾಂಡೆಯವರು ವಿಶ್ವನಾಥನ ಮೂಲಕ ತಮ್ಮನ್ನು ಹುಡುಕಿಕೊಳ್ಳಲು ತೊಡಗುತ್ತಾರೆ. ಆದರೆ ವಿಶ್ವನಾಥನಿಗೆ ಇವೆಲ್ಲ ಬೆಳವಣಿಗೆಯ ಮೆಟ್ಟಿಲುಗಳು ಮಾತ್ರ. ಈ ಅಂಶಗಳು ಕಾದಂಬರಿಯ 'ಕಥನಶಿಲ್ಪ'ವನ್ನು ಸೂಕ್ಷ್ಮವಾಗಿ ಅನಾವರಣಗೊಳಿಸುತ್ತವೆ.

ಕಾದಂಬರಿಯ ಮೂರನೇ ಭಾಗದಲ್ಲಿ ಜಕ್ಕಾಜಿ ಮಾಸ್ತರರು, ಮಾಲತೀಬಾಯಿ ಹಾಗೂ ಸವಣೂರರ ಪಾತ್ರಗಳ ಪ್ರವೇಶವಾಗುತ್ತದೆ. ಈ ಭಾಗದಲ್ಲಿ ಬರುವ ಮಾಲತೀಬಾಯಿಯ ಜೊತೆಯ ಸಂಬಂಧವನ್ನು ವಿಶ್ವನಾಥ ಈಗ ಸಮಾಜಬಾಹಿರವನ್ನಾಗಿಡಲು ಇಚ್ಛಿಸುವುದಿಲ್ಲ. ಏಕೆಂದರೆ ಜಕ್ಕಾಜಿಯವರಲ್ಲಿ ಆತನಿಗೆ ದೇಶಪಾಂಡೆ ವಕೀಲರು ಕಾಣುವುದಿಲ್ಲ. ಮಾಲತೀಬಾಯಿಯನ್ನು ಮದುವೆಯಾಗುವ ವಿಷಯ ಪ್ರಸ್ತಾಪಕ್ಕೆ ಬಂದಾಗ ಪರಿಸ್ಥಿತಿ ವಿಕೋಪಕ್ಕೆ ಹೋಗುತ್ತದೆ. ಈ ಸವಣೂರರು ಜೀವನದ ನಿರರ್ಥಕತೆಯನ್ನು ಅರೆಯುವ ಅಂಚಿನವರೆಗೂ ಚಲಿಸುತ್ತಾರೆ. ಇನ್ನೂ ಪ್ರೌಢಿಮೆಯನ್ನು ಪಡೆಯದ ವಿಶ್ವನಾಥ ಈಗಾಗಲೇ ಮುನಿಯಮ್ಮ, ಸರಳಾಬಾಯಿ ಹಾಗೂ ಮಾಲತೀಬಾಯಿಯವರೊಡನೆ ಅನುಭವ ಪಡೆದಿದ್ದಾನೆ. ಆತ್ಮಹತ್ಯೆಗೆ ಹೊರಟ ತನ್ನನ್ನು ಮುನಿಯಮ್ಮನಂಥವಳು ಜೀವನಕ್ಕೆ ಮತ್ತೆ ಕರೆತಂದಳು ಎಂದು ಅರಿತಿದ್ದಾನೆ. ಆದರೆ ಮಾಲತೀಬಾಯಿಯ ಮೂಲಕ ಹೆಣ್ಣಿನೊಡನೆಯ ತನ್ನ ಸಂಬಂಧವನ್ನು ಸಮಾಜ ವ್ಯವಸ್ಥೆಯ ಚೌಕಟ್ಟಿಗೆ ಸಿಲುಕಿಸಲು ಯತ್ನಿಸಿಸೋಲುತ್ತಾನೆ.

ಕಥಾ ನಾಯಕನಾದ ವಿಶ್ವನಾಥನಿಗೆ ತಾಯಿಯ ವಿವೇಕದೊಂದಿಗೆ ಕಂಠೀ ಜೊಯಿಸರ ಬದುಕಿನ ಹಠ ಆನುವಂಶವಾಗಿ ಬಂದದ್ದು. ಭವಿಷ್ಯ ಜೀವನದಲ್ಲಿ

ಅವನು ೨ ಸಾರಿ ಆತ್ಮಹತ್ಯೆಗೆ ಪ್ರಯತ್ನಪಟ್ಟು ಸಾವು ಎಂದರೇನೆಂಬುದನ್ನು ಅನುಭವಿಸಿ ತಿರುಗಿ ಬಂದವನು. ಅಜ್ಜನಂತೆ ಊರೂರು ತಿರುಗಿ ಬಾಳುವೆಯ ಅರ್ಥವನ್ನು ತಿಳಿಯಲು ಪ್ರಯತ್ನಪಟ್ಟವನು. ಇಂಥವನ ಜೀವನದ ಹಲವಾರು ನೋಟಗಳು 'ಅನ್ವೇಷಣ'ದಲ್ಲಿ ದೊರೆಯುತ್ತವೆ.

'ಗೃಹಭಂಗ'ದಂತೆ ಒಂದು ನೇರವಾದ ಕಥನ ತಂತ್ರ ಈ ಕಾದಂಬರಿಯಲ್ಲಿಲ್ಲ. 'ಅನ್ವೇಷಣ'ದ್ದು ಒಂದು ಶಿಸ್ತಿಗೆ ಒಳಪಟ್ಟಿರುವ, ಅರ್ಥವನ್ನು ಪ್ರಕಟಿಸಲೆಂದೇ ನಿರ್ಮಿತವಾಗಿರುವ ಕಥನ ತಂತ್ರ. ಕಾದಂಬರಿಯಲ್ಲಿ ಸಂಭವಿಸುವ ಎಲ್ಲಾ ವಿಧದ ಸುಖ-ದುಃಖ, ರಾಗ-ದ್ವೇಷ, ವಿವೇಕ-ಅವಿವೇಕಗಳಿಗೆ ಕಥಾನಾಯಕನಾದ ವಿಶ್ವನಾಥನೇ ಮೂಲ. ಅವನೇ ಗುರಿ. ಇಷ್ಟಾಗಿಯೂ ಕಾದಂಬರಿಯಲ್ಲಿ ಅವನಿಲ್ಲ. ಕಾದಂಬರಿಯಲ್ಲಿ ಇರುವವರು ವಿಶ್ವನಾಥನ ಅನ್ವೇಷಕರು. ಅವರ ಕಥನದಲ್ಲಿಯ ವಿವರಗಳಿಂದ ವಿಶ್ವನಾಥನ ವ್ಯಕ್ತಿತ್ವ ಮೂಡಿಬರುತ್ತದೆ.

ಕಾದಂದರಿಯಲ್ಲಿ ವಿಶ್ವನಾಥ ಮೂವರು ಹೆಂಗಸರೊಡನೆ ದೈಹಿಕ ಸಂಪರ್ಕಹೊಂದುತ್ತಾನೆ. ದಾಸರಹಳ್ಳಿಯ ಸೂಳೆಯ ಸಂಪರ್ಕ ಈತನನ್ನು ಜೀವನಕ್ಕೆ ಎಳೆದು ತರುತ್ತದೆ; ದೇಶಪಾಂಡೆಯವರ ಮಗಳಾದ ಸರಳಾಬಾಯಿಯೊಡನೆಯ ಸಂಪರ್ಕ ಮೌಲ್ಯಪ್ರಜ್ಞೆಯನ್ನು ಜಾಗೃತಗೊಳಿಸುತ್ತದೆ; ನಾಟಕ ಕಂಪನಿಯ ಮಾಲತೀಬಾಯಿಯೊಡನೆಯ ಸಂಪರ್ಕ, ಕಾಮದ ಬಗೆಗಿನ ವಿಶ್ವನಾಥನ ಜ್ಞಾನದ ಮಿತಿಯನ್ನು ತೋರಿಸುತ್ತದೆ. ಇದಕ್ಕೆ ಪೂರಕವಾಗಿ ಕಾದಂಬರಿಕಾರರು ಕಾದಂಬರಿಯ ಭಿತ್ತಿಯಲ್ಲಿ ಸುನಂದೆ-ವಿಶ್ವನಾಥ, ದೇಶಪಾಂಡೆ ವಕೀಲರು- ಚೆನ್ನವ್ವ, ಇವರ ದೈಹಿಕ ಸಂಬಂಧಗಳನ್ನು ಬೆಳೆಸುತ್ತಾರೆ. ಕಾಮವು ವಿಶ್ವನಾಥನಲ್ಲಿ ತರುವ ಬದಲಾವಣೆ, ಹಾಗೂ ಈ ಕಾರಣಕ್ಕಾಗಿ ಅವನ ವ್ಯಕ್ತಿತ್ವವು ಬದಲಾಗುತ್ತ ಹೋಗುವುದಕ್ಕೆ ರಂಗಪ್ಪನವರ ಪ್ರಕರಣವನ್ನು ತಂದಿರುವುದು ಕಾದಂಬರಿಯ ಶಿಲ್ಪದ ದೃಷ್ಟಿಯಿಂದ ಅದ್ಭುತವಾಗಿದೆ.

'ಅನ್ವೇಷಣೆ', -ಭೈರಪ್ಪನವರ ಎಲ್ಲ ಕಾದಂಬರಿಗಳಿಗಿಂತ ಭಿನ್ನವಾದ ಕೃತಿ. ಈ ಕೃತಿಯ ಭಿನ್ನತೆಯನ್ನು ಮೂರು ಪ್ರಮುಖವಾದ ಕಾರಣಗಳಿಂದ ಗುರುತಿಸಬಹುದಾಗಿದೆ. ಅವುಗಳೆಂದರೆ-

೧.ಭೈರಪ್ಪನವರು ಹಿಂದಿನ ಬಹುತೇಕ ಕಾದಂಬರಿಗಳಲ್ಲಿ ಕಂಡುಬರುವ ಸಿದ್ಧಾಂತಗಳನ್ನು ಇಲ್ಲಿ ಕೈ ಬಿಟ್ಟಿರುತ್ತಾರೆ. ಉದಾಹರಣೆಗೆ 'ದಾಟು' ಕಾದಂಬರಿಯನ್ನು ತೆಗೆದುಕೊಂಡರೆ ಅಲ್ಲಿ ಕಂಡುಬರುವ ಸಿದ್ಧಾಂತ ಜೀವನಕ್ಕೆ ವಿಮುಖವಾದುದು. ಇದರ ಫಲವಾಗಿ ಸತ್ಯಭಾಮೆ ಮೊದಮೊದಲು ಜೀವನವನ್ನು ಎದುರಿಸುವಂತೆ ಕಂಡುಬಂದರೂ, ಕೊನೆಗೆ ಅವಳು ಬದುಕಿಗೆ ವಿಮುಖಳಾಗುತ್ತಾಳೆ. ಇದರಿಂದಾಗಿ ಅವಳ ಕ್ರಿಯೆಗಳೆಲ್ಲಾ ಅರ್ಥಹೀನವಾಗುತ್ತದೆ. ಆದರೆ 'ಅನ್ವೇಷಣ'ದ ಕೇಂದ್ರ ವ್ಯಕ್ತಿ ವಿಶ್ವನಾಥ ಇದಕ್ಕೆ ತದ್ವಿರುದ್ಧ. ಈತ ಯಾವ ಸಿದ್ಧಾಂತವನ್ನು ಜೀವನದಲ್ಲಿ ಇಟ್ಟುಕೊಂಡು ಹೊರಡುವುದಿಲ್ಲ. ಬಾಲ್ಯದಲ್ಲಿ ತನ್ನ ತಾತ ಕಂಠೀಜೋಯಿಸರಂತೆ ಆಗಬೇಕೆಂದು ಬಯಸಿದರೂ ಅದೇ ಅವನ ಪರಮ ಆದರ್ಶವಾಗುವುದಿಲ್ಲ. ಬೆಳೆದಂತೆ ಬದುಕಿನ ಎಲ್ಲ ಸಾಧ್ಯತೆಗಳನ್ನೂ ಅನ್ವೇಷಣೆ ಮಾಡುತ್ತಾ ಹೋಗುತ್ತಾನೆ. ಜಂಗಮಯ್ಯ ಅವನನ್ನು ಸಾಕುವುದರಿಂದ ಬಾಲ್ಯದಲ್ಲಿಯೇ ಸುಲಭವಾಗಿ ಜಾತಿಯ ವೃತ್ತದಿಂದ ಹೊರಟು ಬರುತ್ತಾನೆ. ಬದುಕಿನುದ್ದಕ್ಕೂ ಹಲವು ವೃತ್ತಿಗಳನ್ನವಲಂಬಿಸುತ್ತಾ ಹೋದರೂ, ಒಂದು ಕೆಲಸ ಬಿಟ್ಟಾಗ ಮುಂದೇನು ಎನ್ನುವ ಯೋಚನೆ ಅವನನ್ನು ಕಾಡುವುದಿಲ್ಲ. ಕೈಗೆ ಬಂದದ್ದನ್ನು ಸ್ವೀಕರಿಸುತ್ತಾ ಹೋಗುತ್ತಾನೆ. ಬೇಡವೆನಿಸಿದಾಗ ಅದನ್ನು ತ್ಯಜಿಸಿ ಮುಂದೆ ಸಾಗುತ್ತಾನೆ. ಅವನು ಅದನ್ನು ಒಂದು ಸಿದ್ಧಾಂತವನ್ನಾಗಿ ಮಾಡಿಕೊಳ್ಳದೇ

ಇರುವುದು ಗಮನಾರ್ಹವಾದ ವಿಷಯ. ಇದರಿಂದಾಗಿಯೇ ಕಾದಂಬರಿಗೆ ಸ್ವಾಭಾವಿಕವಾಗಿ ಹಲವು ಆಯಾಮಗಳು ಬರುತ್ತದೆ.

೨.'ಅನ್ವೇಷಣೆ' ಈ ಕಾದಂಬರಿಯಲ್ಲಿ ಭೈರಪ್ಪನವರ ಇತರ ಕಾದಂಬರಿಗಳಲ್ಲಿ ಸಾಮಾನ್ಯವಾಗಿ ಕಾಣುವ, ಮೂಲಕತೆಗೆ ಯಾವ ರೀತಿಯಲ್ಲಿಯೂ ಪೋಷಕವಾಗದ ಅನಗತ್ಯ ವಿವರಗಳು ಇಲ್ಲಿಲ್ಲ. ಇಡೀ ಕಾದಂಬರಿ ಒಂದು ಘಟಕವಾಗಿ ರೂಪು ತಾಳಿರುವುದು ವಿಶಿಷ್ಟವಾದ ಗುಣ ಎನಿಸಿಕೊಂಡಿದೆ. ಅಂದರೆ ಭೈರಪ್ಪನವರು ತಮ್ಮ ಹಿಂದಿನ ಕಾದಂಬರಿಗಳಲ್ಲಿ, ಪುರಾಣಗಳಲ್ಲಿಯ ಕತೆ ಉಪಕಥೆಗಳಂತೆ ಮೂಲಕತೆಗೆ ಏನೇನೂ ಸಂಬಂಧವಿಲ್ಲದ ಎಷ್ಟೋ ಘಟನೆಗಳನ್ನು ವಿವರಿಸುತ್ತಾ ಹೋಗುತ್ತಿದ್ದರು.

'ವಂಶವೃಕ್ಷ'ದ ಇತಿಹಾಸ ಪ್ರಾಧ್ಯಾಪಕನ ಕತೆ ಇದಕ್ಕೊಂದು ಉತ್ತಮವಾದ ನಿದರ್ಶನವಾಗಿದೆ, ಮೂಲಕತೆಯಲ್ಲಿ ಅದು ಅಡಕವಾಗಿದೆ ಸಮಾನಾಂತರವಾಗಿ ಬೆಳೆಯುತ್ತ ಹೋಗುತ್ತದೆ. ಆದರೆ 'ಅನ್ವೇಷಣೆ'ಯಲ್ಲಿ ಕಾದಂಬರಿಯ ಪ್ರತಿಯೊಂದು ಘಟನೆಯೂ ಪ್ರತಿಯೊಂದು ಪಾತ್ರವೂ ಕೇಂದ್ರವ್ಯಕ್ತಿಯ ಸುತ್ತ-ಸುತ್ತುತ್ತಿರುತ್ತವೆ. ತಮಗರಿವಿಲ್ಲದೆಯೇ ವಿಶ್ವನಾಥನ ಅನ್ವೇಷಣೆಗೆ ಸಹಾಯ ಮಾಡಿ ತಮ್ಮನ್ನು ಅನ್ವೇಷಿಸಿಕೊಳ್ಳುತ್ತಾರೆ.

೩.ಭೈರಪ್ಪನವರು ಈ ಕಾದಂಬರಿಯಲ್ಲಿ ಕಥನ ನಿರೂಪಣಾ ತಂತ್ರವನ್ನು ಕೈಬಿಟ್ಟು ಕಾದಂಬರಿಯ ಕೇಂದ್ರ ವ್ಯಕ್ತಿಯ ಸಂಪರ್ಕ ಪಡೆದ ವ್ಯಕ್ತಿಗಳು, ಅವನಿಂದ ತಮಗಾದ ಅನುಭವಗಳನ್ನು ಮೆಲುಕು ಹಾಕುತ್ತಾ ಹೋಗುವ ವಿಧಾನವನ್ನು ಬಳಸಿದ್ದಾರೆ. ಇದರಿಂದ ಕೇಂದ್ರ ವ್ಯಕ್ತಿಯ ವ್ಯಕ್ತಿತ್ವವು ಸ್ಪಷ್ಟವಾಗಿ ರೂಪುಗೊಳ್ಳುವುದಲ್ಲದೆ ಕಾದಂಬರಿಕಾರರ ಬರವಣಿಗೆಗೆ ಸಂಕೀರ್ಣತೆಯೂ ಒದಗಿ ಬಂದಿರುವುದನ್ನು ಗುರುತಿಸಬೇಕಾಗುತ್ತದೆ.

## ಎರಡನೇ ಘಟ್ಟದ ಕಾದಂಬರಿಗಳು

ಎಸ್.ಎಲ್.ಭೈರಪ್ಪನವರ 'ಪರ್ವ', 'ನೆಲೆ', 'ಸಾಕ್ಷಿ', 'ಅಂಚು', 'ತಂತು', 'ಸಾರ್ಥ'– ಈ ಕಾದಂಬರಿಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಎರಡನೆಯ ಘಟ್ಟದ ಕಾದಂಬರಿಗಳೆಂದು ಪರಿಗಣಿಸಲಾಗಿದೆ. ಈ ಘಟ್ಟದ ಕಾದಂಬರಿಗಳಲ್ಲಿ ಭೈರಪ್ಪನವರ ಬರವಣಿಗೆಯ ಶಿಲ್ಪ, ಶೈಲಿಗಳು ಬೇರೊಂದು ಪರಿಯನ್ನು ಸ್ವೀಕರಿಸಿರುವುದನ್ನು ಕಾಣಬಹುದಾಗಿದೆ. ಪಾತ್ರಮುಷ್ಟಿ ಈ ಘಟ್ಟದ ಕಾದಂಬರಿಗಳ ವಿಶೇಷವಾದ ಲಕ್ಷಣವಾಗಿದೆ. ಮೊದಲನೆಯ ಘಟ್ಟದ ಕಾದಂಬರಿಗಳಲ್ಲಿ ಪಾತ್ರಗಳ ಸ್ವರೂಪವನ್ನು ಅವುಗಳ ವಿಚಾರಗಳ ಮೂಲಕವೇ ಅರಿಯಬೇಕಾಗಿತ್ತು. ಇಲ್ಲಿ ಪಾತ್ರಗಳ ಸ್ವರೂಪವನ್ನು ಅವುಗಳ ವಿಚಾರಗಳ ಬದಲು, ಅವುಗಳ ಸ್ವಭಾವದಿಂದ ಅರಿಯಬಹುದಾಗಿದೆ. ಇಲ್ಲಿನ ಕಾದಂಬರಿ ಶಿಲ್ಪದಲ್ಲಿ ಕಥನದ ಹಿಂಬದಿಗೆ ಚಿಂತನದ ಜೊತೆಗೆ ಬೇರೆ ಬೇರೆ ಶಿಸ್ತುಗಳ ಅಧ್ಯಯನವೂ ಸೇರಿದೆ. "ಪುರಾಣ, ಇತಿಹಾಸ, ಸಂಗೀತ ಕಲೆ, ಪತ್ರಿಕೋದ್ಯಮ ಮತ್ತು ಮನೋವಿಜ್ಞಾನಗಳು ಈ ಘಟ್ಟದ ಬೇರೆ ಬೇರೆ ಕಾದಂಬರಿಗಳಿಗೆ ಸಾಹಿತ್ಯ ದ್ರವ್ಯವನ್ನೊದಗಿಸಿ ಸೃಷ್ಟಿಶೀಲತೆಯ ಇನ್ನೊಂದು ಆಯಾಮವನ್ನು ತಂದುಕೊಟ್ಟಿವೆ"[೧]. ಅಧ್ಯಯನ ಪೂರ್ಣ ಸಿದ್ಧತೆ ಈ ಘಟ್ಟದ ಕಾದಂಬರಿಗಳ ರಚನೆಗೆ ಹಿನ್ನೆಲೆಯಾಗಿದೆ.

### 'ಪರ್ವ'–ಕಥನಕ್ರಿಯೆ.

'ಪರ್ವ' ವ್ಯಾಸ ಮಹಾಭಾರತವನ್ನು ಆಧಾರವಾಗಿಟ್ಟುಕೊಂಡು ರಚಿತವಾಗಿರುವ ಕಾದಂಬರಿ. ಈ ಕಾದಂಬರಿಯ ರಚನೆಯ ಸಂದರ್ಭದಲ್ಲಿ ಡಾ। ಎಸ್.ಎಲ್.ಭೈರಪ್ಪವನರು ಮೂಲಕೃತಿಯಲ್ಲಿ ಬರುವ ಅಲೌಕಿಕ ಅಂಶಗಳಿಂದ ಸರಿದು,

[೧] ಎಸ್.ಎಲ್.ಭೈರಪ್ಪ – ಸಂ.ದೇಶ ಕುಲಕರ್ಣಿ. ನವಕರ್ನಾಟಕ ಪುಟ ೩೮ ಪ್ರಕಾಶನ ೨೦೦೧

ಸಾಮಾನ್ಯರನ್ನು ಅಸಾಮಾನ್ಯರನ್ನು ಒಂದೇ ದೃಷ್ಟಿಯಿಂದ ನೋಡಿ, ಯಾವುದೋ ಕಾಲದ ವ್ಯಕ್ತಿ ಸಂಗತಿಗಳು ನಮ್ಮ ಕಾಲದವಾಗಿ ನಮಗೆ ತೀರಾ ಹತ್ತಿರದವಾಗಿ ಮಾರ್ಪಡುವಂತೆ ತಮ್ಮ ಕಲಾ ಕೌಶಲ್ಯವನ್ನು ಮೆರೆದಿರುತ್ತಾರೆ. ಆದ್ದರಿಂದ 'ಪರ್ವ' ಕಾದಂಬರಿಯನ್ನು ಡಾ।ಎಸ್.ಎಲ್.ಭೈರಪ್ಪನವರ ಕಥನ ಕೌಶಲ್ಯಕ್ಕೆ ಉತ್ತಮ ನಿದರ್ಶನವಾದ ಕಾದಂಬರಿಯಾಗಿದೆ ಎಂದು ಹೇಳಬಹುದು.

ಭೈರಪ್ಪನವರ 'ಪರ್ವ' ಈಗಾಗಲೇ ಮೂರು ಸಂಶೋಧನಾ ಅಧ್ಯಯನಕ್ಕೆ ಪೂರಕ ಸಾಮಗ್ರಿಗಳನ್ನು ಒದಗಿಸಿರುವುದು[3] ಗಮನಿಸಬೇಕಾದ ಮಹತ್ವಪೂರ್ಣವಾದ ಅಂಶವಾಗಿದೆ. ಪ್ರಸ್ತುತ ಅಧ್ಯಯನದಲ್ಲಿ 'ಕಥನಶಿಲ್ಪವ'ನ್ನು ಮುಖ್ಯ ಕೇಂದ್ರವಾಗಿಟ್ಟುಕೊಂಡು ಅಧ್ಯಯನದಲ್ಲಿ ವಿವೇಚಿಸಲಾಗಿದೆ.

'ಪರ್ವ' ಕಾದಂಬರಿಯು ಮಹಾಭಾರತ ಯುದ್ಧದ ಸಿದ್ಧತೆ ನಡೆಯುತ್ತಿರುವ ಘಟ್ಟದಿಂದ ಪ್ರಾರಂಭವಾಗುತ್ತದೆ. ಅಂದರೆ ಶಲ್ಯನ ಮೊಮ್ಮಗಳ ಋತುಚಕ್ರ ವೈಫಲ್ಯದ ಕಥನದಿಂದ ಪ್ರಾರಂಭಗೊಂಡು, ಯುದ್ಧದ ಉತ್ಕಾಂತ ಸ್ಥಿತಿಯಲ್ಲಿ ಸೈನಿಕರಿಂದ ಬಲಾತ್ಕಾರಕ್ಕೆ ಒಳಗಾಗಿ ಗರ್ಭಿಣಿಯರಾದ ಹೆಂಗಸರ ಚಿತ್ರದಲ್ಲಿ ಮುಗಿಯುತ್ತದೆ. ಈ ನಡುವೆ ಕಾದಂಬರಿಕಾರರು ಅದೆಷ್ಟೋ ಹೆಣ್ಣಿನ ಕಥನವನ್ನು ತಂದಿರುತ್ತಾರೆ. ಅಲ್ಲದೆ ಮೂಲಕೃತಿಯಂತೆ ವೈವಿಧ್ಯಮಯ ಚಿತ್ರಣವನ್ನು ಕಾದಂಬರಿಯ ಉದ್ದಕ್ಕೂ ಮಾಡಿರುತ್ತಾರೆ. ಆದರೆ ಕಾದಂಬರಿಕಾರರು ಹಿಂದಿನ ಕಥೆಯನ್ನೆಲ್ಲಾ ಪಾತ್ರಗಳ ಪರಸ್ಪರ ಸಂಭಾಷಣೆ, ಸ್ವಗತ ಮತ್ತು ಒಳತೋಟಿಗಳ ಮೂಲಕ ತಿಳಿದುಬರುವಂತೆ ಕಥೆಯನ್ನು ಹೇಳಿರುತ್ತಾರೆ.

---

[3] ಮಾಲತಿ ಕೆ. 'ಪರ್ವ' ಒಂದು ಸಮೀಕ್ಷೆ ಕುರಿತಂತೆ ಮೈಸೂರು ವಿಶ್ವವಿದ್ಯಾನಿಲಯ.
ಡಾ। ಮಣಿಮಾಲಿನಿ 'ದ್ರೌಪದಿ ಸಮೀಕ್ಷೆ-ಪರ್ವ ಕಾದಂಬರಿಯ ದ್ರೌಪದಿಯನ್ನು ಒಳಗೊಂಡಂತೆ', ಮುಂಬಯಿ ವಿಶ್ವವಿದ್ಯಾನಿಲಯ.
ನೀರಗುಂದ ನಾಗರಾಜ ಭೈರಪ್ಪನವರ 'ಪರ್ವ' ಕಾದಂಬರಿ ಒಂದು ವಿಮರ್ಶಾತ್ಮಕ ಪರಿಶೀಲನೆ. ಬೆಂಗಳೂರು ವಿಶ್ವವಿದ್ಯಾನಿಲಯ

"ಚಾಪೆಯ ಹೊರಗೆ ನೆಲದ ಮೇಲೆ ಕುಳಿತ ನೀಲ ಕೇಳಿದ; 'ಮಹಾರಾಜ, ನೀನು ಅದೆಷ್ಟೋ ಮಂದಿ ರಾಕ್ಷಸರನ್ನು ಕಾದಿಕೊಂಡಿರುವ ಸಂಗತಿ ಕೇಳಿದ್ದೇನೆ, ಈಗ ಅವರ ಸಹಾಯ ಕೇಳುವುದಕ್ಕೆ ನಾವೆಲ್ಲ ಹೋಗುತ್ತಿದ್ದೀವಿ, ಏನವರ ಕದನ ವಿಶೇಷ?" "ವಿಶೇಷವೇ ? ಆಗ ತಾನೇ ನಿದ್ದೆಯಿಂದ ಎದ್ದು ಕುಳಿತ ಭೀಮ ಒಂದು ಸಲ ಅಗಲವಾಗಿ ತುಂಬು ಮೀಸೆಯು ಗೋಪುರದಾಕಾರವಾಗುವಂತೆ ಆಕಳಿಸಿ ಹೇಳಿದ; 'ರಾಕ್ಷಸರು ಸದಾ ಕಾಡಿನಲ್ಲಿರುವ ಜನ, ಹುಲಿ, ಕಿರುಬ, ಚಿರತೆ, ಆನೆಗಳ ನಡುವೆ ಅವನ್ನು ಕೊಂದು ಜೀವ ಉಳಿಸಿಕೊಳ್ಳಬೇಕು. ಅಂದರೆ ಅವರಿಗೆ ಭಯ ಕಡಿಮೆ ಇರುತ್ತೇ ಅಥವಾ ನಮಗೆ ಹೋಲಿಸಿದರೆ ಇರುವುದೇ ಇಲ್ಲ. ನೀನು ಯಾವ ಶತ್ರುವಿನ ಜೊತೆ ಹೋರಾಡುವೆಯೋ ಅವನ ಗುಣ ನಿನಗೂ ಬರುವುದಿಲ್ಲವೆ? ಹಾಗೆಯೇ ಹುಲಿ ಕಿರುಬಗಳ ಗುಣ ರಾಕ್ಷಸರಿಗಿದೆ. ಯುದ್ಧದಲ್ಲಿ ಅಪಾಯ ಲೆಕ್ಕಿಸದೆ ನೇರವಾಗಿ ನೆಗೆದು ನುಗ್ಗಬಲ್ಲರು. ಮಳೆ ಬಿಸಿಲು ಚಳಿಗಳಿಗೆ ಬಗ್ಗದೆ ಗಟ್ಟಿಗೊಂಡ ಮೈಕಟ್ಟು, ಎಂತಹ ಮರವನ್ನಾದರೂ ಹತ್ತಿ ಧುಮುಕುವ ನೀರಿನಲ್ಲಿ ಮುಳುಗಿ ಅಥವಾ ಈಜಿ ಹೋಗುವ ಅಭ್ಯಾಸ, ಬೇಟೆ ಮಾಂಸವನ್ನೇ ಹೊಟ್ಟೆ ತುಂಬಾ ತಿಂದು ಅರಗಿಸಿಕೊಂಡ ಕಸುವು ಇವೆಲ್ಲ ಇರುತ್ತದೆ. ಅವರಲ್ಲಿ . . . . ವಾಸನೆಯಿಂದಲೇ ಶತ್ರುಗಳನ್ನು ಗುರುತಿಸಬಲ್ಲರು"[೩]. ಹೀಗೆ ಭೀಮ ಮತ್ತು ನೀಲರ ಸಂಭಾಷಣೆಯನ್ನು ತರಲಾಗಿದೆ.

ಐವರು ಮಕ್ಕಳನ್ನೂ ಒಟ್ಟಿಗೆ ಕೂರಿಸಿ ತಾನೇ ಉಣಬಡಿಸುವಾಗ ಕೃಷ್ಣೆ ಮನಸ್ಸಿನಲ್ಲೇ ಅಂದುಕೊಳ್ಳುತ್ತಾಳೆ. ಹಿರಿಯನಿಗೆ ಇಪ್ಪತ್ತನಾಲ್ಕು, ಎರಡನೆಯವನಿಗೆ ಇಪ್ಪತ್ತಮೂರು, ಕೊನೆಯ ಪಕ್ಷ ಈ ಇಬ್ಬರಿಗಾದರೂ ಇಷ್ಟರಲ್ಲಿ ಮದುವೆಯಾಗಬೇಕಾಗಿತ್ತು. ಜೊತೆಗೆ ಹೆಂಡತಿ ಬರಬೇಕಾಗಿತ್ತು. ಈ ರಾಜನು ಇವರಿಗೆ

---

[೩] 'ಪರ್ವ' ಪುಟ ೯೦. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೭೯.

ಹೆಣ್ಣುಕೊಡಲು, ರಾಜ್ಯವಿಲ್ಲ ತಂದೆ-ತಾಯಿಯರು ಕಾಡು ಬಿದ್ದಿರುವಾಗ ಯಾವ ರಾಜ ಕರೆದು ಹೆಣ್ಣು ಕೊಟ್ಟಾನು"[೪].

'ಸೈರಂಧ್ರೀ, ತಾಳ್ಮೆಯಿಂದಿರು. ಈಗ ನಿನ್ನ ಒಡತಿಯಲ್ಲಿ ಹೋಗು. ದುಡುಕಬೇಡ' ಎಂದು ಹೇಳಿ ಕೈ ತೊಳೆದುಕೊಂಡನಲ್ಲಿ ಸಿಟ್ಟಿಗೆದ್ದು ನಮ್ಮ ಅಜ್ಞಾತ ನಿಯಮವನ್ನು ಹಾಳು ಮಾಡಿಕೊಳ್ಳುವುದು ಬೇಡ. ಆದರೆ ಹೆಂಡತಿಯ ಮಾನಕ್ಕೆ ಇಂಥ ಅಪಾಯ ಒದಗಿರುವಾಗ ಇಷ್ಟು ಹೇಳಿ ಪಗಡೆ ಆಡಲು ತಿರುಗಿ ಬಿಟ್ಟರೆ ಆಯಿತೆ? ಭೀಮನು ಕೀಚಕನನ್ನು ಅವನಂತೆ ಅವನ ಹತ್ತು ತಮ್ಮಂದಿರನ್ನೂ ಕೊಲ್ಲದಿದ್ದರೆ ಈ ಕೃಷ್ಣೆಯ ಮಾನ ಏನಾಗುತ್ತಿತ್ತು?[೫].

ಹೀಗೆ ಕಾದಂಬರಿಯ ಉದ್ದಕ್ಕೂ ಬೇರೆ ಬೇರೆ ಪಾತ್ರಧಾರಿಗಳ ಪರಸ್ಪರ ಸಂಭಾಷಣೆ, ಸ್ವಗತ, ಒಳತೋಟಿಗಳನ್ನು ಕಾಣಬಹುದಾಗಿದೆ, ಕಾದಂಬರಿಯ ಪ್ರತಿಯೊಂದು ಸಂದರ್ಭಗಳು ಮೂಲ ಕಥೆಯಲ್ಲಿನ ಸಂದರ್ಭಕ್ಕಿಂತ ಭಿನ್ನವೂ, ಮಾನವ ಸಹಜವೂ ಆಗಿ ರೂಪುಗೊಂಡಿದೆ.

'ಪರ್ವ' ಕಾದಂಬರಿಯಲ್ಲಿ ಬರುವ ಶ್ರೀಕೃಷ್ಣನ ಪಾತ್ರವು ಒಳ್ಳೆಯ ಸ್ನೇಹಿತ ಮತ್ತು ಮಾನವೀಯತೆಯುಳ್ಳ ಒಬ್ಬ ಚಾಣಾಕ್ಷ ರಾಜಕಾರಣಿಯ ಹಾಗೆ ಕಾದಂಬರಿಕಾರರು ಚಿತ್ರಿಸಿರುತ್ತಾರೆ. ಜರಾಸಂಧನ ಸೆರೆಯಿಂದ ಬಿಡಿಸಿದ ಯುವತಿಯರಿಗೆ ನೆಲೆಯಿಲ್ಲದಾದಾಗ ಅವರಿಗೆಲ್ಲಾ ಪುನರ್ವಸತಿ ಕಲ್ಪಿಸಿ, ಅವರನ್ನು ತಾನೇ ವರಿಸಿದಂತೆ ತೋರಿಸಿಕೊಡಲು ಅವರಿಗೆಲ್ಲಾ ಮಾಲೆ ಹಾಕುವ ಸಂದರ್ಭ ಮೂಲದಲ್ಲಿ ೧೬ ಸಾವಿರ

---

[೪] 'ಪರ್ವ' ಪುಟ ೧೨೩. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೭೯.
[೫] 'ಪರ್ವ' ಪುಟ ೧೬೩. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೭೯

ಗೋಪಿಕಾಸ್ತ್ರೀಯರೊಡನೆ ಸರಸವಾಡುವ ಸಂದರ್ಭಕ್ಕಿಂತ ಉತ್ತಮವೆನಿಸುವಂತಹ ಮಾನವೀಯ ಸನ್ನಿವೇಶವಾಗಿ ರಚಿಸಿದ್ದಾರೆ.

ಗಂಡನಿಗಿಲ್ಲದ ದೃಷ್ಟಿ ನನಗೂ ಬೇಡ ಎಂಬ ಪತಿವ್ರತಾ ಮನೋಭಾವದಿಂದ ತಾನು ಕಣ್ಣಿಗೆ ಪಟ್ಟಿಕಟ್ಟಿಸಿಕೊಂಡ ಮೂಲಕಥೆಯ ಗಾಂಧಾರಿಯನ್ನು ಕಂಡ ನಮಗೆ, ಕುರುಡ ಗಂಡ ಬೇಡ ಎಂದ ಗಾಂಧಾರಿಯ ಇಷ್ಟಕ್ಕೆ ವಿರೋಧವಾಗಿ ಕುರುಡನೊಂದಿಗೆ ಮದುವೆ ನಿಶ್ಚಯವಾದಾಗ ಆ ಗಂಡನನ್ನು ನೋಡುವುದಿಲ್ಲ ಎಂದು ಶಪಥ ಮಾಡಿ ಕಣ್ಣಿಗೆ ಪಟ್ಟಿಕಟ್ಟಿಕೊಂಡ ಕಾದಂಬರಿಯಲ್ಲಿಯ ಗಾಂಧಾರಿಯ ಪಾತ್ರವನ್ನು ಭೈರಪ್ಪನವರು ಮಾನವ ಸಹಜವಾಗಿಯೇ ಚಿತ್ರಿಸಿದ್ದಾರೆ.

ಪಾಂಡವರು-ಕೌರವರು ನಮ್ಮ-ನಿಮ್ಮಂತೆ ಮನುಷ್ಯರು; ನಮ್ಮ ಸಮಕಾಲೀನವರು ಕೂಡ ಆಗಿದ್ದರೆ ಅವರ ಬದುಕು ಹೇಗಿರುತ್ತಿತ್ತು ಎನ್ನುವುದನ್ನು 'ಪರ್ವ'ದ ಕಥಾ ಹಂದರದಲ್ಲಿ ಚಿತ್ರಿಸಲಾಗಿದೆ.

"ಈ ಕಾದಂಬರಿಯ ರಚನೆಯ ಹಿನ್ನೆಲೆಯಲ್ಲಿ ಮಾನವ ಸಂಬಂಧದ ಸ್ವರೂಪದ ಶೋಧನೆ ಪ್ರಮುಖ ಪ್ರೇರಣೆಯಾಗಿ ಕೆಲಸ ಮಾಡಿದೆ. ಈ ಶೋಧನೆಯ ಮೂಲಕವೇ ಭೈರಪ್ಪನವರು ಮಹಾಭಾರತದ ಕತೆಯನ್ನು ಸಮಕಾಲೀನಗೊಳಿಸುವ ಪ್ರಯತ್ನ ಮಾಡಿದ್ದಾರೆ. ದ್ರೌಪದಿ, ಕುಂತಿ, ಗಾಂಧಾರಿ, ಭೀಮ ಎಲ್ಲರೂ ಕಾದಂಬರಿಯಲ್ಲಿ ಹೊಸ ರೂಪ ಪಡೆದಿರುವುದು ಈ ಶೋಧನೆಯ ಹಿನ್ನೆಲೆಯಲ್ಲಿಯೇ ಮಹಾಭಾರತ ಕಥೆಯ ಸ್ವರೂಪದಲ್ಲಿ ಭೈರಪ್ಪನವರು ಮಾಡಿಕೊಂಡ ಮುಖ್ಯವಾದ ಬದಲಾವಣೆಯೇ 'ಪರ್ವ' ಕಾದಂಬರಿಯ ಕಥನ ಹಂದರವನ್ನು ಬಹುಪಾಲು ನಿರ್ಧರಿಸಿದೆ ಎಂದು ಹೇಳಬಹುದು.

ಡಾ॥ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ಹೇಳುವ ಪ್ರಕಾರ "ಭೈರಪ್ಪನವರು 'ಪರ್ವ'ದಲ್ಲಿ ಮಾಡಿಕೊಂಡಿರುವ ಮುಖ್ಯ ಬದಲಾವಣೆ ಮಹಾಭಾರತದ ಕಥೆಯಲ್ಲಿರುವ ಮಿಥ್‌ಗಳನ್ನು ಒಡೆದು ಅದನ್ನು ತಾರ್ಕಿಕ ನೆಲೆಗೆ ಒಗ್ಗಿಸುವುದು. ಡಿ-ಮೈಥಿಪಿಕೇಷನ್ ಪರ್ವಧ ರಚನೆಯ ಮುಖ್ಯ ಅಂಶಗಳಲ್ಲೊಂದು"[1].

ಭೈರಪ್ಪನವರು ಈ ಕಾದಂಬರಿಯ ರಚನೆಯಲ್ಲಿ ಅನುಸರಿಸಿದ ತಂತ್ರವೇ ಬೇರೆ. ಇಲ್ಲಿ ಕಥನಕಾರನೇ ಕಥೆಯನ್ನು ನಿರೂಪಿಸುವ ಬಗೆಯಿಂದ ಹೊರಬಂದು, ಪಾತ್ರಗಳೇ ಕಥನವನ್ನು ನಿರ್ವಹಿಸುವ ಬಗೆಗೆ 'ಪರ್ವ' ಸಾಗಿ ಬಂದಿದೆ. ಒಂದೊಂದು ಮನಸ್ಸಿನ ನೆನಪುಗಳ ಮೂಲಕ ಚೂರುಚೂರಾಗಿ ಕಾದಂಬರಿ ನಿರ್ಮಾಣಗೊಂಡಿದೆ. ಈ ಕಾದಂಬರಿಯ ಸಂವಿಧಾನದಲ್ಲಿ ವರ್ತಮಾನದ ಯುದ್ಧ ಸನ್ನದ್ಧ ಸ್ಥಿತಿಯಲ್ಲಿ ತಾವು ತಲುಪಿರುವ ಹಂತವನ್ನು ನಡೆದು ಬಂದ ದಾರಿಯನ್ನು ಅವಲೋಕಿಸಿಕೊಳ್ಳುವಂತೆ ಕಾದಂಬರಿಕಾರರು ಕಾದಂಬರಿಯ 'ಕಥನಶಿಲ್ಪ'ವನ್ನು ತಂದಿದ್ದಾರೆ. ಅತಾರ್ಕಿಕತೆಗೆ, ಅಸಂಭಾವ್ಯತೆಗೆ, ಪವಾಡಗಳಿಗೆ ಸ್ಥಾನವಿಲ್ಲದ ಭೈರಪ್ಪನವರ 'ಪರ್ವ' ಕಾದಂಬರಿಯ ಬಗ್ಗೆ ಪ್ರಸಿದ್ಧ ಹಿಂದಿ ಲೇಖಕರಾದ ಕಮಲೇಶ್ ಅವರು ಈ ರೀತಿಯಾಗಿ ಅಭಿಪ್ರಾಯಪಟ್ಟಿರುತ್ತಾರೆ. -"ನನ್ನ ನಿಶ್ಚಿತಾಭಿಪ್ರಾಯದಲ್ಲಿ 'ಪರ್ವ' ಒಂದು ಆಧುನಿಕ ಬೃಹತ್ ಕಾವ್ಯ. ನಾನೆ ಇದರ ಲೇಖಕನಾಗಿದ್ದರೆ ಎಂಬ ಆಸೆ ನನ್ನನ್ನು ಬಾಧಿಸುತ್ತಿದೆ. ... ಕಾಲವನ್ನು ಮೀರಿ ನಿಲ್ಲುವ ವಸ್ತುವಷ್ಟೇ ಅಲ್ಲದೇ, ಈ ಕೃತಿಯ ರಚನಾ ವಿಧಾನವೂ ಅದ್ಭುತವಾಗಿದೆ. ಇದಲ್ಲದೆ ಇದರ ಬಗ್ಗೆ ಹೇಳಬಹುದಾದದ್ದು ಇನ್ನೂ ಬಹಳಷ್ಟಿವೆ"[2]. ಪ್ರಸಿದ್ಧ ಚಿಂತಕರಾದ ಕೀರ್ತಿನಾಥ ಕುರ್ತಕೋಟಿ ಇವರು 'ಪರ್ವ' ಕಾದಂಬರಿಯ ಬಗ್ಗೆ ವಿಶ್ಲೇಷಿಸುತ್ತಾ- "ಅತ್ಯಂತ ಸಮರ್ಥವಾದಂತಹ ಕಥನ ಶೈಲಿ ಇಲ್ಲಿದೆ. ಬಹಳ ಸುಂದರವಾದ ಪ್ರತಿಮೆಗಳಿವೆ. ಅಲ್ಲದೆ ನಿಮಗೆ ಒಳ್ಳೆ ಕಾದಂಬರಿಯ ಬರವಣಿಗೆಗೆ

---

[1] 'ಭೈರಪ್ಪಾಭಿನಂದನಾ' ಪುಟ ಸಂಖ್ಯೆ ೧೮೭ ಕೊಂಡಜ್ಜಿ ವೆಂಕಟೇಶ ಜಿ. ಕೊಂಡಜ್ಜಿ ಪ್ರಕಾಶನ. ಬೆಂಗಳೂರು ೧೯೯೩.

[2] ಕರ್ಮವೀರ ದೀಪಾವಳಿ ಸಂಚಿಕೆ ೧೯೮೮.

ಅತ್ಯಂತ ಶ್ರೇಷ್ಠವಾದ ಉದಾಹರಣೆ ಎಲ್ಲಿಯಾದರೂ ಸಿಗಬೇಕಾದರೆ, ನೀವು ದಯವಿಟ್ಟು ಈ ಕಾದಂಬರಿಯ ಕೊನೆ ಅಧ್ಯಾಯವನ್ನು ಓದಬೇಕು. ಬಹಳ ಸುಂದರವಾದಂತಹ ಬರವಣಿಗೆ ಹಾಗೂ ಬಹಳ ಸಮರ್ಥವಾದಂತಹ ಕಥನ ಶೈಲಿ" ಎಂದಿರುತ್ತಾರೆ[೮].

ಒಟ್ಟಿನಲ್ಲಿ ಹುಟ್ಟು ಮತ್ತು ಸಾವು ಈ ಎರಡು ವಿಷಯಗಳನ್ನು ಪ್ರಧಾನವಾಗಿರಿಸಿಕೊಂಡು ರಚನೆಗೊಂಡಿರುವ, ಭೈರಪ್ಪನವರ 'ಪರ್ವ' ಕಾದಂಬರಿಯು ಕಾದಂಬರಿಕಾರರ ಸ್ಪಷ್ಟ ಹಾಗೂ ದೃಢ ನಿಲುವಿನಿಂದಾಗಿ ಸಮಕಾಲೀನವಲ್ಲದ ವಿಷಯಗಳನ್ನು ಸಂದೇಹಕ್ಕೆಡೆಯಿಲ್ಲದಂತೆ, ವಿಶಿಷ್ಟವಾದ ಕಥನ ಕೌಶಲದಿಂದ ನಿರ್ಮಾಣಗೊಂಡಿದೆ ಎಂದು ಹೇಳಬಹುದು.

'ಪರ್ವ'ದ ಭಿತ್ತಿಯಲ್ಲಿ ಕಾದಂಬರಿಕಾರರು ಹುಟ್ಟು-ಸಾವು ಈ ಎರಡು ವಿಚಾರಗಳನ್ನು ಚರ್ಚಿಸುತ್ತಾ ಹೋಗುತ್ತಾರೆ. ಕಾದಂಬರಿಯ ಪೂರ್ವಾರ್ಧದ ಒಳಗೆ ಬಗೆ ಬಗೆಯದಾದಂತಹ ಹುಟ್ಟುಗಳನ್ನು ಕಾಣಿಸುತ್ತಾರೆ. ಭೈರಪ್ಪನವರ ಕಾದಂಬರಿಯಲ್ಲಿ ಕರ್ಣ ಕನ್ಯಾವಸ್ಥೆಯಲ್ಲೇ ಕುಂತಿಗೆ ಜನಿಸಿದಂತಹ ಒಬ್ಬ ರಾಜಕುಮಾರನಾಗಿ ಉಳಿಯುತ್ತಾನೆ. ಪಾಂಡವರು ನಿಯೋಗ ಪದ್ಧತಿಯಿಂದ ಹುಟ್ಟುವಂತಹ ಮಕ್ಕಳಾಗಿರುತ್ತಾರೆ. ಧೃತರಾಷ್ಟ್ರನಿಗೆ ಗಾಂಧಾರಿಯಲ್ಲಿ ಮತ್ತು ಇತರ ಅನೇಕ ದಾಸಿಯರಲ್ಲಿ ಹುಟ್ಟುವ ಮಕ್ಕಳು. ಮರುಳ ರಾಕ್ಷಸನ ಮಗನಾಗಿ ಕಂಸ ಹುಟ್ಟುವುದು. ಭೀಮ ಹಿಡಿಂಬೆಯರಿಂದ ಘಟೋತ್ಕಚನ ಹುಟ್ಟು. ಭಾರಧ್ವಾಜ ತಾನು ಕಲಿತ ವಿದ್ಯೆ ವ್ಯರ್ಥವಾಗಬಾರದೆಂಬ ಕಾರಣದಿಂದ ಒಬ್ಬ ಕುಂಬಾರ ಸ್ತ್ರೀಯೊಡನೆ ಒಡಂಬಡಿಕೆ ಮಾಡಿಕೊಂಡು ದ್ರೋಣರನ್ನು ಪಡೆಯುವುದು. ಅಂದರೆ ಹುಟ್ಟಿನ ವಿವಿಧ ರೂಪದರ್ಶನವನ್ನು ಮಾಡಿಸುತ್ತಾರೆ.

---

[೮] ಸಮಗ್ರ ವರದಿ ವಿಶ್ಲೇಷಣೆ ಪುಟ – ೨೭ ಹರಿಹರ ಪ್ರಿಯ.

ಹಾಗೆಯೇ 'ಪರ್ವ' ಕೃತಿಯ ಉತ್ತರಾರ್ಧದ ಒಳಗೆ ಸಾವಿನ ವಿವಿಧ ಪರಿಗಳನ್ನು ಪರಿಚಯಿಸುವುದರ ಮೂಲಕ ಕಾದಂಬರಿಯ ಬಂಧ ನಿರ್ಮಾಣವಾಗಿರುತ್ತದೆ. ದ್ವೈಪಾಯನರ ಮಗನಾದ ಶುಕ ನಿರಾಹಾರಿಯಾಗಿ ಸಾಯುವುದು. ತನ್ನನ್ನು ತಾನೇ ಹದ್ದುಗಳಿಗೆ ಒಪ್ಪಿಸಿಕೊಳ್ಳುವ ಭೀಷ್ಮ, ಉಪಪಾಂಡವರನ್ನು ಕೊಚ್ಚುವ ವೃತ್ತಾಂತ, ಘಟೋತ್ಕಚ, ಅಭಿಮನ್ಯುವಿನ ಸಾವು ಹೀಗೆ ಬಗೆ ಬಗೆಯದಾದಂತಹ ಮಕ್ಕಳ ಸಾವುಗಳನ್ನು ಚಿತ್ರಿಸುತ್ತಾ ಕೃತಿಯ 'ಕಥನಶಿಲ್ಪ' ಮುಂದುವರಿಯುತ್ತದೆ.

ಈ ಕಾದಂಬರಿಯ ಇನ್ನೊಂದು ಕಥಾಹಂದರವಾಗಿ ಉತ್ತರಾಧಿಕಾರಿತ್ವವನ್ನು ತರುತ್ತಾರೆ. ಹುಟ್ಟು ಯಾವಾಗಲೂ ಉತ್ತರಾಧಿಕಾರಿತ್ವವನ್ನು ನಿರ್ಣಯಿಸುತ್ತದೆ ಎನ್ನುವುದನ್ನು ಮನಗಂಡಿರುವ ಕಾದಂಬರಿಕಾರರು, ವೇದವಿದ್ಯೆಗೆ ಉತ್ತರಾಧಿಕಾರ ಕೊಡಿಸುವ ಉದ್ದೇಶದಿಂದ ಪರಾಶರ ಅಪ್ಸರ ಸ್ತ್ರೀಯೊಂದಿಗೆ ಕೂಡಿ ಶಂಕರನನ್ನು ಪಡೆಯುವುದನ್ನು, ಭಾರಧ್ವಾಜ ತನ್ನ ಧನುರ್ವಿದ್ಯೆ ಕಾಪಾಡಿಕೊಳ್ಳಲು ಒಬ್ಬ ಕುಂಬಾರ ಸ್ತ್ರೀಯನ್ನು ಕೂಡುವುದು ಹೀಗೆ ಉತ್ತರಾಧಿಕಾರಿತ್ವಕ್ಕಾಗಿ ಕೌರವ-ಪಾಂಡವರ ನಡುವಿನ ಸಂಘರ್ಷವನ್ನು ಕಾದಂಬರಿಯ 'ಕಥನಬಂಧ'ದಲ್ಲಿರಿಸಿರುತ್ತಾರೆ.

"'ಪರ್ವ'ವನ್ನು ಬರೆದ ಅನುಭವವು ತಮ್ಮಲ್ಲಿ ಹೊಸ ಭಾವವನ್ನು, ಹೊಸ ಹುಟ್ಟನ್ನು ತಂದುಕೊಟ್ಟಿತು." -ಎಂದುಕೊಳ್ಳುವ ಕಾದಂಬರಿಕಾರರು, ಈ ಕಾದಂಬರಿಯ ಕತೆಯನ್ನು ಸಂಪ್ರದಾಯಬದ್ಧವಾದ ಮಹಾಭಾರತದ ಕತೆಯಂತೆ ಪ್ರಾರಂಭಗೊಳಿಸುವುದಿಲ್ಲ. ಬದಲಾಗಿ ಪಾಂಡವ-ಕೌರವರ ಯುದ್ಧ ಸನ್ನದ್ಧತೆಯ ದಿನಗಳಲ್ಲಿ ಮಿತ್ರರಾಜರ ನೆರವು ಪಡೆಯಲು ಹೋಗುವ ಸಂದರ್ಭಗಳಲ್ಲಿ ಕತೆಯು ಹರಡಿಕೊಳ್ಳುತ್ತ, ಯುದ್ಧ ವಿವರಗಳಲ್ಲಿ ತಂಗಿ ಯುದ್ಧದ ಮುಕ್ತಾಯದೊಂದಿಗೆ ಕೊನೆಗೊಳ್ಳುತ್ತದೆ. ಈ ನಡುವೆ ಶಲ್ಯರಾಜ, ವಿದುರ, ಭೀಮ, ದ್ರೌಪದಿ, ಅರ್ಜುನ,

ಯುಯುಧಾನ, ಕರ್ಣ, ಯುಯುತ್ಸು ದ್ರೋಣ, ಕೃಷ್ಣ ದ್ವೈಪಾಯನ, ಧೃತರಾಷ್ಟ್ರ ಮತ್ತು ದುರ್ಯೋಧನರ ಪಾತ್ರಗಳ ನಿವೇದನೆಯಲ್ಲಿ ಕತೆಯು ಹಿಂದಕ್ಕೂ, ಮುಂದಕ್ಕೂ ತೂಗುತ್ತ ಕ್ರಮದ ಪರಿವಿಲ್ಲದೆ ಸಾಗುತ್ತ ಕಾದಂಬರಿಯ ಒಟ್ಟು ಸಂವಿಧಾನದಲ್ಲಿ ತನ್ನ ಸ್ವರೂಪವನ್ನು ಅನಾವರಣಗೊಳಿಸುತ್ತದೆ.

ಪುರಾಣವೊಂದನ್ನು ಸಂಪೂರ್ಣವಾಗಿ ನವೀಕರಣಗೊಳಿಸಿ ಗದ್ಯದಲ್ಲಿ ಮೂಡಿಸಿರುವ ಅಪೂರ್ವ ಶಿಲ್ಪ ಪ್ರಯೋಗ ಭೈರಪ್ಪನವರ 'ಪರ್ವ' ಕಾದಂಬರಿ. ಬೃಹತ್ ಭಿತ್ತಿ, ಸಾವಿರಾರು ಪಾತ್ರಗಳು, ಒಂದಕ್ಕೊಂದು ಹೆಣೆದುಕೊಂಡಿರುವ ನೂರಾರು ಕಥೆಗಳು ಒಂದಕ್ಕೊಂದು ಸೇರಿಕೊಂಡು ಗಂಭೀರವಾಗಿ ಹರಿಯುವ ಮಹಾನದಿಯಂತೆ 'ಪರ್ವ' ಮಹಾಕಾವ್ಯದ ರೂಪದಲ್ಲಿ ಪ್ರವಹಿಸುತ್ತದೆ. 'ಪರ್ವ'ದ ಒಂದೊಂದು ಪಾತ್ರಗಳು ಕಾದಂಬರಿಕಾರರ ಚಿಂತನಶೀಲತೆ, ದ್ವಂದ್ವ ಮತ್ತು ಮಾನವ ಸಹಜ ಭಾವನೆಗಳಿಂದಾಗಿ ತನ್ನದೇ ಆದ ವೈಶಿಷ್ಟ್ಯವನ್ನು ಮೆರೆಯುತ್ತವೆ. ಭೈರಪ್ಪನವರ ದೃಷ್ಟಿಯಲ್ಲಿ ಸಾಹಿತ್ಯ ಕೃತಿಯ ಮೂಲದ್ರವ್ಯವು ಮಾನವಭಾವವೇ . . . ಮನುಷ್ಯನ ಆಸೆ, ಆಕಾಂಕ್ಷೆ, ನಿರಾಶೆ-ಸುಖ-ದುಃಖಗಳು-ದ್ರೌಪದಿಯಂತೆ ಐದು ಗಂಡಂದಿರನ್ನು ಕಟ್ಟಿಕೊಂಡ ಹೆಂಗಸು ಅಂತರಂಗದಲ್ಲಿ ಸುಖದಿಂದಿರಲು ಸಾಧ್ಯವೇ? ಹಾಗೆಯೇ ಭೀಷ್ಮನ ಮನಸ್ಸಿನ ಒಳತೋಟಿ ಏನಿರಬಹುದು ಎಂದು ಕಾದಂಬರಿಕಾರರು ಚಿಂತಿಸುತ್ತಾರೆ. ಪಾತ್ರಗಳ ಮನಸ್ಸನ್ನರಿಯುವ ಈ ಮಾನದಂಡ 'ಪರ್ವ'ದ ಎಲ್ಲ ಪಾತ್ರಗಳಿಗೂ ಅನ್ವಯಿಸುತ್ತದೆ. ಭೀಷ್ಮನ ಪಾತ್ರ ನಿರ್ವಹಣೆಯಲ್ಲಿ ಲೇಖಕರು ಭೀಷ್ಮರ ಕಥೆ ಹೇಳುವುದಿಲ್ಲ, ಸ್ವಗತಗಳಿಂದ, ಹಿನ್ನೋಟಗಳಿಂದ ಆತನ ಮನೋವ್ಯಾಪಾರಿಗಳನ್ನು ಫೋಟೋ ಹಿಡಿಯುತ್ತಾ, ರನ್ನಿಂಗ್ ಕಾಮೆಂಟರಿಯಂತೆ ಚಿತ್ರಿಸುವ ಕುಶಲತೆಯನ್ನು ಸಾಧಿಸಿದ್ದಾರೆ.

'ಪರ್ವ'ದ ಮುಖ್ಯ ಸ್ತ್ರೀ ಪಾತ್ರಗಳಾದ ಕುಂತಿ, ದ್ರೌಪದಿ, ಗಾಂಧಾರಿಯಾಗಬಹುದು ಅಥವಾ ಸುಭದ್ರ, ಸಾಲಕಟಂಕಟಿ ಅರಮನೆಯ ದಾಸಿಯರು

ಯಾರಾದರೂ ಆಗಬಹುದು. ಎಲ್ಲಾ ಪಾತ್ರ ಚಿತ್ರಣದಲ್ಲಿ ಅದೇ ತನ್ಮಯತೆ, ಅದೇ ಸೂಕ್ಷ್ಮತೆ ಹಾಗೂ ವಿವರಗಳನ್ನು ಪ್ರಸ್ತುತ ಪಡಿಸುತ್ತಾರೆ. 'ಪರ್ವ' ಕಾದಂಬರಿಯ ರಚನಾಬಂಧ, ತಾಂತ್ರಿಕ ವಿನ್ಯಾಸ ಹಾಗೂ ಶೈಲಿಗಳ ಬಗ್ಗೆ ವಿಚಾರ ಮಾಡಿರುವ ಡಾ।ಎಲ್.ವಿ.ಶಾಂತಕುಮಾರಿ ಇವರು 'ಪರ್ವ' ಒಂದು ಮಹಾಶಿಲ್ಪದಂತೆ ಮೂಡಿಬಂದಿದೆ ಎಂದು ಅಭಿಪ್ರಾಯಪಡುತ್ತಾರೆ. ವಿಶಾಲಭಿತ್ತಿ ಮತ್ತು ಬೃಹತ್ ಗಾತ್ರಗಳಿಂದಾಗಿ ಹಿಮಾಲಯ ಪರ್ವತ ಶ್ರೇಣಿಗಲ ಹರಹಿನಲ್ಲಿ ತಂತಾನೇ ಅರಳಿ ನಿಂತಿರುವ ಸಹಜ ಸಾಮರಸ್ಯದ, ರುದ್ರ ಗಂಭೀರ ರೂಪ ಹಾಗೂ ಗೋಮ್ಮಟನ ಭವ್ಯ ಮೂರ್ತಿಯಲ್ಲಿ ರೂಪುಗೊಂಡಿರುವ ಶಿಲ್ಪಬಂಧ ಸಾಮರಸ್ಯದಂತಿದೆ 'ಪರ್ವ'ದ ಸ್ವರೂಪ ಎನ್ನುತ್ತಾರೆ[೧]. ಅಂದರೆ ಪುರಾಣ-ಇತಿಹಾಸ-ಮಹಾಕಾವ್ಯ ಇವುಗಳ ತ್ರಿವೇಣಿ, ಸಂಗಮವಾದ ಮಹಾಭಾರತದ ವಸ್ತು ಮತ್ತು ಪಾತ್ರಗಳ ಆಯ್ಕೆಯಿಂದಾಗಿ 'ಪರ್ವ'ಕ್ಕೆ ಆಳ ಹರಿದು, ವೈವಿಧ್ಯಗಳು ತಾನಾಗಿಯೇ ಪ್ರಾಪ್ತವಾಗಿವೆ. ಪುರಾಣವನ್ನು ವಸ್ತುವನ್ನಾಗಿ ಆಯ್ಕೆ ಮಾಡಿಕೊಂಡು ಅದನ್ನು ಸಂಪೂರ್ಣವಾಗಿ ಸಮಕಾಲೀನ ಚೌಕಟ್ಟಿಗೆ ಅಳವಡಿಸಿ, ವಸ್ತು ಮತ್ತು ಪಾತ್ರಗಳನ್ನು ಪುರಾಣದ ಪ್ರಭೆಯಿಂದ ಕಳಚಿಡುವುದೇ ಭೈರಪ್ಪನವರ ಕೌಶಲ್ಯತೆ, ಲೇಖಕರು ಕಥೆಯ ಘಟನೆಯನ್ನು ಯಾವುದೇ ರೀತಿಯಲ್ಲಿ ನೇರವಾಗಿ ನಿರೂಪಿಸದೇ ಪಾತ್ರಗಳು ತಮ್ಮ ಹಿನ್ನೋಟಗಳಿಂದ, ಸ್ವಗತಗಳಿಂದ ತಮಗೆ ತಾವೆ ತೆರೆದುಕೊಳ್ಳುತ್ತಾ, ಕಥಾವಸ್ತುವನ್ನು ಬಿಚ್ಚಿಡುವ ಅನನ್ಯ ತಂತ್ರ ವಿನ್ಯಾಸದಿಂದಾಗಿ ಇದು ಉಳಿದೆಲ್ಲ ಕಾದಂಬರಿಗಳಿಗಿಂತ ಬೇರೆಯೇ ಆಗಿ ನಿಲ್ಲುತ್ತದೆ.

ಇಡೀ ಮಹಾಭಾರತವನ್ನು ಸಂಪೂರ್ಣವಾಗಿ, ರಚನಾಬಂಧ ಭಾಷಾಪ್ರಯೋಗ, ತಂತ್ರವಿನ್ಯಾಸ ಎಲ್ಲ ದೃಷ್ಟಿಯಿಂದಲೂ ಸಮಕಾಲೀನ ಚೌಕಟ್ಟಿನಲ್ಲಿಟ್ಟು ಗದ್ಯ ಮಹಾಕಾವ್ಯದ ಹರಹಿನಲ್ಲಿ ಚಿತ್ರಿಸಿರುವುದೇ 'ಪರ್ವ'ದ ವಿಶೇಷವಾದ ಶಿಲ್ಪ.

---

[೧] 'ಯುಗಸಾಕ್ಷಿ' ಪುಟ ೨೪೪–ಎಲ್.ವಿ.ಶಾಂತಕುಮಾರಿ. ಸಾಹಿತ್ಯ ಭಂಡಾರ ೨೦೦೯.

## 'ನೆಲೆ'–ಕಥನಕ್ರಿಯೆ

೧೯೬೩ರಲ್ಲಿ ಪ್ರಕಟಗೊಂಡಿರುವ 'ನೆಲೆ' ಎಸ್.ಎಲ್.ಭೈರಪ್ಪನವರ ೧೪ನೆಯ ಕಾದಂಬರಿ ಕೃತಿಯಾಗಿದೆ. ಸಾವನ್ನು ಕುರಿತ ಜಿಜ್ಞಾಸೆಯ ಹಿನ್ನೆಲೆಯಲ್ಲಿಯೆ, ಬದುಕಿನ ವ್ಯಾಪಾರವನ್ನು ಕಾಣಿಸುವ ಪ್ರಯತ್ನ 'ನೆಲೆ' ಕಾದಂಬರಿಯಲ್ಲಿದೆ. ಭೈರಪ್ಪನವರು ಹುಟ್ಟು–ಸಾವಿನ ನಿಜದ ನೆಲೆಯನ್ನು ಅರಿಯುವ ಪ್ರಯತ್ನವನ್ನು ಈ ಕಾದಂಬರಿಯಲ್ಲಿ ಮಾಡಿದ್ದಾರೆ. ಈ ಕಾದಂಬರಿಯ ಪ್ರಮುಖ ಪಾತ್ರಗಳಾದ ಜವರಾಯಪ್ಪ, ಕಾಳಪ್ಪ, ಪಾರ್ವತಿ ಬದುಕಿದ್ದಾಗಲೇ ಸಾವಿನ ಬಗ್ಗೆ ಚಿಂತಿಸುತ್ತಾರೆ. ಈ ಚಿಂತನೆಯ ಪರಿಣಾಮವಾಗಿ ಸಾವನ್ನು ಎದುರಿಸಿ ಬದುಕಿನಲ್ಲಿ ನೆಲೆಗೊಳ್ಳುತ್ತಾರೆ.

'ನೆಲೆ' ಕಾದಂಬರಿಯ ಕಥಾಹಂದರ ಇಂತಿದೆ. ಸಾವಿನ ವಾರ್ತೆ ತಿಳಿದ ಜವರಾಯಿಯ ಮಗ ಕುಮಾರ, ಹೆಂಡತಿ ಮಾಲತಿ ಮತ್ತು ಮಾವ ಕಾಳಪ್ಪನೊಡನೆ ಹಾಸನಕ್ಕೆ ಬರುತ್ತಾನೆ. ಅಲ್ಲಿ ಅವನ ತಾಯಿ ಸುಬ್ಬುಲಕ್ಷ್ಮೀ ಸೋದರಿಯರಾದ ಇಂದಿರಾ, ಲಲಿತಾ, ಅನುಸೂಯ ತಮ್ಮ ಶ್ರೀಧರ ಇವರೊಂದಿಗೆ ಪಿತೃಶೋಕದ ದುಃಖದಲ್ಲಿ ಒಂದಾಗುತ್ತಾರೆ. ಜವರಾಯಿಯ ಶವಸಂಸ್ಕಾರದ ನಂತರ, ಜೋಯಿಸರ ಆದೇಶದಂತೆ ಕುಮಾರ, ಮಾಲತಿ ೧೦ನೆಯ ದಿನದ ಕರ್ಮ ಮಾಡಲು ಹಣ ಹೊಂದಿಸಲು ಮರಳಿ ಊರಿಗೆ ಬರುತ್ತಾರೆ. ಆದರೆ ಜವರಾಯಿಯ ಅಂತರಂಗದ ಸ್ನೇಹಿತನೂ, ಕುಮಾರ ಮಾವನೂ ಆದ ಕಾಳಪ್ಪ ಅಲ್ಲಿಯೇ ಉಳಿಯುತ್ತಾನೆ. ಜವರಾಯಿಯ ಜೀವನದ ಅನ್ವೇಷಣೆಗೆ ತೊಡಗುತ್ತಾನೆ. ಆತನ ಬದುಕನ್ನು ಅರಿಯಲು ಅವನು ಬರೆದಿದ್ದ ದಿನಚರಿ ಪುಸ್ತಕ ಸಹಾಯಕವಾಗುತ್ತದೆ.

ಕಾಳಪ್ಪನ ಸ್ನೇಹಿತನಾದ ಜವರಾಯಿ, ತಾಲೂಕು ಸಬ್-ರಿಜಿಸ್ಟರ್ ಆಫೀಸಿನಲ್ಲಿ ಸ್ಟಾಂಪ್‌ವೆಂಡರ್ ಆಗಿರುತ್ತಾನೆ. ಜವರಾಯಿ, ಕಾಳಪ್ಪ ಬಾಲ್ಯ ಸ್ನೇಹಿತರು. ಜವರಾಯಿ ಮತ್ತು ಕಾಳಪ್ಪ ಬಾಲ್ಯದಿಂದಲೂ ಆಜನ್ಮ ಬ್ರಹ್ಮಚಾರಿಗಳಾಗಿ ಉಳಿಯಲು ಸಂಕಲ್ಪಿಸಿದವರು. ಆದರೆ ಮುಂದೆ ಬದುಕಿನಲ್ಲಿ ಏನೇನೋ ಆಗಿ ಹೋಗಿ ಜವರಾಯಿ ಕಾಮದ ಒತ್ತಡಕ್ಕೆ ಸಿಲುಕಿ ಮದುವೆಯಾದರೆ, ಕಾಳಪ್ಪ ಬ್ರಹ್ಮಚಾರಿಯಾಗಿ ಉಳಿದರೂ ದೈಹಿಕ ಬ್ರಹ್ಮಚರ್ಯವನ್ನೇನೂ ಕಾಪಾಡಿಕೊಂಡವನಲ್ಲ. ಜವರಾಯಿ ತಾನು ಮದುವೆಯಾದ ಸುಬ್ಬುಲಕ್ಷ್ಮೀಯಲ್ಲಿ ಐದು ಮಕ್ಕಳನ್ನು ಪಡೆದು, ಹಳ್ಳಿಯ ಚಿಕ್ಕಪುಟ್ಟ ಉದ್ಯೋಗಗಳಲ್ಲಿ ಸಾಕಷ್ಟು ಕಷ್ಟ-ನಷ್ಟ, ಅವಮಾನ ಸಹಿಸಿ ತನಗೆ ಅವಮಾನವಾದರೂ, ತನ್ನ ಹೆಂಡತಿ ಮಕ್ಕಳನ್ನು ಸುಖದಲ್ಲಿ ಇರಿಸಲು ಹೆಣಗಾಡಿ, ಮಕ್ಕಳನ್ನು ತುಂಬ ಪ್ರೀತಿಯಿಂದ ಬೆಳೆಸಿ, ಕುಟುಂಬವನ್ನು ಒಂದು ನೆಲೆಗೆ ತಂದು ನಿಲ್ಲಿಸುತ್ತಾನೆ. ತಾನು ಪ್ರೀತಿಯಿಂದ ಬೆಳೆಸಿದ ಮಗ ಕುಮಾರನಿಂದ ಧಿಕ್ಕಾರಕ್ಕೆ ಒಳಗಾಗುತ್ತಾನೆ. ಮಗ 'ತನ್ನನ್ನು ಹುಟ್ಟಿಸು ಎಂದು ಯಾರು ಹೇಳಿದ್ದರು?' ಎಂದು ಪ್ರಶ್ನಿಸಿದಾಗ ಅವನಿಗೆ ಸಂಸಾರವೆಂದರೆ ನಿಸ್ಸಾರವೆನಿಸುತ್ತದೆ. ಅಲ್ಲದೆ ತನ್ನ ಷಷ್ಠಬ್ದಿಯ ಸಂದರ್ಭದಲ್ಲಿ ತಾನು, ಪ್ರೀತಿಸದಿದ್ದ ತನ್ನ ಹೆಂಡತಿಗೆ ತಾಳಿ ಕಟ್ಟಿದ್ದು ಮೂರ್ಖತನ ಎಂಬುದನ್ನು ಅರ್ಥಮಾಡಿಕೊಂಡನು. ತಾನು ಸುಬ್ಬುಲಕ್ಷ್ಮೀಯಿಂದ ಪಡೆಯಲಾಗದಿದ್ದ ಭಾವನಾತ್ಮಕ ತೃಪ್ತಿಯನ್ನು ಪಾರ್ವತಿಯೆಂಬ ನರ್ಸ್ ಮೂಲಕ ಪಡೆಯಲೆತ್ನಿಸುವನು. ಹೆಂಡತಿಯಲ್ಲಿ ಹಂಚಿಕೊಳ್ಳಲಾಗದ ಮನಸ್ಸಿನ ಸುಖವನ್ನು ಆತ ಪಾರ್ವತಿಯಲ್ಲಿ ಪದರ-ಪದರವಾಗಿ ಬಿಡಿಸಿಕೊಳ್ಳುತ್ತಾನೆ. ಅರವತ್ತರ ಅಂಚಿನಲ್ಲಿರುವ ಜವರಾಯಿಯು ಪಾರ್ವತಿಯೊಡನೆ ಹೊಂದಿದ ಸಂಬಂಧವು ದೈಹಿಕ ಸಂಬಂಧಕ್ಕಿಂತ ಮಿಗಿಲಾಗಿ ಕಲೆಯ ಮೂಲಕ ಜವರಾಯ ಮತ್ತು ಪಾರ್ವತಿಯರ ಸ್ನೇಹ ಬೆಳೆಯುತ್ತದೆ. ಜವರಾಯ ಪಾರ್ವತಿಯನ್ನು ಮದುವೆಯಾಗದೆಯೇ ಅವಳೊಡನೆ ತೃಪ್ತಿಯ ಜೀವನವನ್ನು ನಡೆಸುತ್ತಾನೆ. ಪಾರ್ವತಿ ಆರ್ಥಿಕವಾಗಿ ಅವನ ಮೇಲೆ ಅವಲಂಬಿತಳಾಗಿರುವುದಿಲ್ಲ. ಅವಳು ನರ್ಸ್ ಆದ್ದರಿಂದ ಹುಟ್ಟು-ಸಾವು, ನೋವು-

ನಲಿವುಗಳನ್ನು ದಿನನಿತ್ಯ ಕಾಣುವ ವೃತ್ತಿಯಾದ್ದರಿಂದ ಸಾವು ಬದುಕನ್ನು ಕುರಿತ ಜಿಜ್ಞಾಸೆಯಲ್ಲ ಜವರಾಯನೊಂದಿಗೆ ಪಾಲ್ಗೊಳ್ಳುತ್ತಿರುತ್ತಾಳೆ.

ಹುಟ್ಟನ್ನು ಪುರುಷ ಅನುಭವಿಸಲು ಸಾಧ್ಯವಿಲ್ಲ. ಪುರುಷರಿಗೆ ಅದು ಅನುಭವಕ್ಕೆ ಬರುವುದಿಲ್ಲ. ಕೇವಲ ಸಾವನ್ನು ಮಾತ್ರ ಅನುಭವಿಸುವನು. ಆದರೆ ಹೆಣ್ಣು ಮತ್ತೊಂದು ಜೀವವನ್ನು ಸೃಜಿಸುವುದರಿಂದ ಹುಟ್ಟನ್ನು ಅನುಭವಿಸುತ್ತಾಳೆ. ಆದ್ದರಿಂದ ಅವಳು ತನಗೊಂದು ಮಗು ಬೇಕೆನ್ನುವಳು. 'ಒಬ್ಬ ಹೆಂಗಸಿನ ಮೇಲೆ ನಿಕಟಭಾವ ಬೆಳೆದಾಗ ಅವನಿಂದ ತನಗೊಂದು ಮಗು ಪಡೆಯಬೇಕೆಂದು ಬಯಕೆ ಬೆಳೆಯುತ್ತೆ' ಎನ್ನುವಳು. ಮಗುವಿನ ಸೃಷ್ಟಿಯ ಕ್ರಿಯೆಯಲ್ಲಿ ಗಂಡಸಿನ ಪಾತ್ರ ಸಣ್ಣದು. ಮಗುವಿನ ಜನನ ಕ್ರಿಯೆಯಲ್ಲಿ ತಮ್ಮ ಪಾತ್ರವೇ ಹೆಚ್ಚಿನದು ಎಂದು ಅತಿ ವೈಚಾರಿಕವಾಗಿ ಮಾತನ್ನಾಡುತ್ತಾಳೆ. ಇದರಿಂದ ಜವರಾಯಿ ಕೋಪಗೊಂಡು ನಿರಾಶನಾಗಿ ಸಾವಿಗೀಡಾಗುತ್ತಾನೆ.

ಕಾದಂಬರಿಯಲ್ಲಿ ಚಿತ್ರಿತವಾಗುವ ಇನ್ನೊಂದು ಪಾತ್ರ ಕಾಳಪ್ಪನದು. ಈತ ಚಿಕ್ಕಂದಿನಲ್ಲಿ ಸಾಕಷ್ಟು ಕಷ್ಟಪಟ್ಟು ದುಡಿದು ತಾಯಿ ಮತ್ತು ತಂಗಿಯನ್ನು ಸುಖವಾಗಿಡಲು ಪ್ರಯತ್ನಿಸಿದರೂ, ಅವರಿಂದ ಶೋಷಣೆಗೆ ಒಳಗಾಗಿ, ಅನಂತರ ಸ್ವಸಾಮರ್ಥ್ಯದಿಂದ ಕೈಗಾರಿಕೋದ್ಯಮದಲ್ಲಿ ಉನ್ನತ ಹುದ್ದೆಗೇರಿದ ಯಶಸ್ವಿ ವ್ಯಾಪಾರಿ. ದೇಶ-ವಿದೇಶಗಳನ್ನು ಸುತ್ತಿ ಅಪಾರವಾದ ಲೌಕಿಕಜ್ಞಾನ ಮತ್ತು ಹಣ ಸಂಪಾದಿಸಿ, ಸಂಬಂಧಿಗಳಿಗೆ ಉದಾರವಾಗಿ ನೆರವಾದ ವ್ಯಕ್ತಿ. ಅವಿವಾಹಿತನಾದರೂ, ಬ್ರಹ್ಮಚಾರಿಯಲ್ಲದ ಈತ ತನ್ನ ಅಗತ್ಯಕ್ಕೆ ತಕ್ಕಷ್ಟು ಕಾಮವನ್ನು ಅನುಭವಿಸಿದವನು. ಸಾಂಸಾರಿಕ ಜೀವನ ಆತ್ಮೀಯತೆ ಬಯಸುವ ಈತ ಮದುವೆ ಹಾಗೂ ಮಕ್ಕಳಲ್ಲಿ ಆಸಕ್ತಿಯಿಲ್ಲದವನು.

ಕಾಳಪ್ಪನು ಒಂಟಿಯಾಗಿರುವುದರಿಂದ ಒಂಟಿತನವೇ ಅವನಿಗೆ ಸಾವು ಎನ್ನಿಸುತ್ತದೆ. ಒಮ್ಮೆ ಪ್ರವಾಸ ಮಾಡಿ ಬಂದಾಗ, ಅತಿಯಾದ ಆಯಾಸವಾಗಿದ್ದ ಅವನಿಗೆ ಕಂಪನಿಯವರೇ ವಿಶ್ರಾಂತಿ ತೆಗೆದುಕೊಳ್ಳಲು ಆಸ್ಪತ್ರೆಯಲ್ಲಿ ವ್ಯವಸ್ಥೆ ಮಾಡುವರು ಆಗ ಅಲ್ಲಿರುವ ನರ್ಸ್ ಬೆಡ್‌ಪ್ಯಾನ್ ಕೊಡಲು ಬಂದಾಗ ಆತನಿಗೆ ಸಂಕೋಚವಾಗುತ್ತದೆ. ಆಗ ಅವಳು 'ಕಾಯಿಲೆಯಲ್ಲಿ ಅವೆಲ್ಲ ಇಲ್ಲ, ಎಂದು ಯಾಂತ್ರಿಕವಾಗಿ ಕೈ ಹಾಕಿದಾಗ ಉಳಿದ ಎಲ್ಲ ನಿಸ್ಸಾಹಾಯಕತೆಗಿಂತ ನಮ್ಮ ಮರ್ಯಾದಾಸ್ಥಾನವನ್ನು ಇನ್ನೊಬ್ಬರೆದುರಿಗೆ ಬಯಲು ಮಾಡಿಕೊಂಡು ವಿಸರ್ಜನೆಯಲ್ಲಿ ತೊಡಗುವ ನಿಸ್ಸಹಾಯಕತೆ, ಅದು ಶುಶ್ರೂಷೆ ಮಾಡುವವರು ಹೆಂಗಸಾಗಿದ್ದರೆ ಎಂತಹ ತೇಜೋವಧೆ. ನಿಸ್ಸಹಾಯಕತೆಯಿಲ್ಲದೆ ಒಂಟಿತನವು ಸಹ್ಯವೇ. ಲೈಂಗಿಕ ಹುಮ್ಮಸ್ಸಿನಲ್ಲಿ ಆಗುವ ಬೆತ್ತಲೆಯಲ್ಲಿ ಒಂಟಿತನವು ಇಲ್ಲ, ನಿಸ್ಸಹಾಯಕತೆಯು ಇಲ್ಲ ಆದರೆ ನನ್ನ ಜೀವನದಲ್ಲೇ ಮೊಟ್ಟ ಮೊದಲು ಈ ೬೧ನೆಯ ವರ್ಷದಲ್ಲಿ ಈ ನರ್ಸಿನೆದುರಿಗೆ ಆದ ಕುಸಿತವು ಎಂತಹ ತೀವ್ರ ಒಂಟಿತನವನ್ನು ಹುಟ್ಟಿಸಿತು' ಎನ್ನುವನು.

ಶೀಲವನ್ನು ಸಂರಕ್ಷಿಸಿಕೊಳ್ಳಬೇಕೆಂಬ ಸಂವೇದನೆ ಕೇವಲ ಹೆಣ್ಣಿಗೆ ಮಾತ್ರವೇ ಅಲ್ಲ. ಒಂದು ನಿರ್ದಿಷ್ಟ ಸ್ಥಿತಿಯಲ್ಲಿ ಗಂಡಿಗೂ ಇರುತ್ತದೆ ಅಥವಾ ಇರಬೇಕಾಗುತ್ತದೆ ಎನ್ನುವ ತಾತ್ವಿಕ ನೆಲೆಗಟ್ಟನ್ನು ಕಥಾಹಂದರ ಒಳಗಡೆ ತಂದು ಕಾಳಪ್ಪನ ಪಾತ್ರವನ್ನು ಚಿತ್ರಿಸಿರುವ ರೀತಿ ಇಡಿಯ ಕಾದಂಬರಿಯ 'ಕಥನಶಿಲ್ಪ'ದ ದೃಷ್ಟಿಯಿಂದ ಗಮನಾರ್ಹವಾದ ಅಂಶವಾಗಿದೆ.

ಕಥೆಯ ಹಂದರಕ್ಕೆ ಹಿನ್ನೆಡೆ ಉಂಟಾಗದಂತೆ ಪಾತ್ರಗಳ ಮಾನಸಿಕ ಒಳತೋಟಿಗಳನ್ನು ವಿಶ್ಲೇಷಿಸುತ್ತಲೇ ಇಲ್ಲಿಯ ಪಾತ್ರಗಳು ತಮ್ಮನ್ನು ತಾವು ನಿರಾಕರಿಸುತ್ತಾ ಕಥನವನ್ನು ಮುಂದುವರಿಸುವ ರೀತಿ 'ಕಥನಬಂಧ'ಕ್ಕೆ ಶ್ರೇಷ್ಠ ಕೊಡುಗೆಯನ್ನು ನೀಡಿದೆ.

ಈ 'ನೆಲೆ'ಯಲ್ಲಿ ಭೈರಪ್ಪ ಈ ಕಾದಂಬರಿಯಲ್ಲಿ ಹೊಸ ತಂತ್ರವನ್ನು ರೂಪಿಸಿರುವುದು ಕಂಡುಬರುತ್ತದೆ.

ಕಾದಂಬರಿಕಾರರು ಅನುಸರಿಸಿರುವ ಈ ತಂತ್ರ 'ಕಥನಕ್ರಿಯೆ'ಯ ಭಾಗವಾಗಿ ಮುಂದುವರಿಯುತ್ತದೆ. 'ನೆಲೆ'ಯ ಕಾಳಪ್ಪನ ಪಾತ್ರದಲ್ಲಿ ತೋರಿರುವ ಈ ಕ್ಷಣಿಕ ಶೀಲ ಸಂವೇದನೆಯೇ ಮುಂದೆ 'ಮಂದ್ರ'ದಲ್ಲಿ ಮೋಹನ್‌ಲಾಲ್‌ರಂಥ ಉನ್ನತ ವ್ಯಕ್ತಿತ್ವದ ಪಾತ್ರದಲ್ಲಿ ಮುಂದುವರಿದಿರುವಂತೆ ತೋರಿಬರುತ್ತದೆ.

ಕಾಳಪ್ಪ ಒಂಟಿಯಾಗಿದ್ದ ಕಾರಣ ತನ್ನ ಸಮಸ್ತ ಆಸ್ತಿಯನ್ನು ನಕ್ಷತ್ರ ವಿಜ್ಞಾನದ ಅಧ್ಯಯನ ಮಾಡುವ ಮೂವತ್ತು ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ಶಾಶ್ವತವಾಗಿ ಕೊಡಲು ನಿರ್ಧರಿಸುತ್ತಾನೆ. ಕೊನೆಗೆ ಆಕಾಶದಲ್ಲಿ ತನ್ನ ನೆಲೆಯನ್ನು ಕಾಣಲು ಬಯಸುತ್ತಾನೆ.

ಜವರಾಯಿಯ ಸಾವಿನೊಂದಿಗೆ ಪ್ರಾರಂಭಗೊಳ್ಳುವ 'ನೆಲೆ' ಕಾದಂಬರಿಯು ಸತ್ತ ವ್ಯಕ್ತಿಯ ಪಾತ್ರ ಜೀವಂತವಾಗಿ ಅರಳುತ್ತ ಹೋಗುವಂತೆ ರಚನೆಗೊಂಡಿದೆ. ಹುಟ್ಟು-ಸಾವು ಇವೆರಡು ಬದುಕಿನ ನೆಲೆಗಳು ಹುಟ್ಟಿನ ಅರ್ಥಗಳನ್ನು ಹುಡುಕುವಲ್ಲಿ, ಅವುಗಳ ಆಳವನ್ನು ಅಳೆಯುವಲ್ಲಿ, ಜವರಾಯಿಗಿದ್ದ ಕಾಳಜಿಗಳನ್ನು ಕಾದಂಬರಿ ಒಂದು ಕಡೆ ಚಿತ್ರಿಸುತ್ತಾ ಹೋದರೆ, ಮತ್ತೊಂದು ಕಡೆಯಲ್ಲಿ ಸಾವಿನ ಸ್ವರೂಪವನ್ನು ಅದರ ಮುಖ್ಯ ಕಾಳಜಿಗಳ ಹಿನ್ನೆಲೆಯ ತೂಕದಲ್ಲಿ ಕಾಳಪ್ಪನ ಮುಖಾಂತರ ಆಡಿಸುವ ವಿವರಗಳು ಕಾದಂಬರಿಯ ಮೈಯಲ್ಲಿ ಪ್ರಧಾನವಾಗಿ ಹರಿಯುತ್ತದೆ.

ಕಾದಂಬರಿಯ ಆರಂಭದ ಒಂದು ಮಗ್ಗುಲಿನವರೆಗೆ ಕುಮಾರ-ಮಾಲತಿ-ಕಾಳಪ್ಪ ಇವರ ಮೂಲಕ ಚರವಾಸ್ತವ ಬದುಕಿನ ಭಿನ್ನ-ಭಿನ್ನ ನೆಲೆಗಳು

ಒಡೆದು ಕಾಣಿಸುತ್ತವೆ. ದಹನಕ್ರಿಯೆ, ಧರ್ಮೋದಕದ ಸಂದರ್ಭಗಳು ಹುಟ್ಟು-ಸಾವುಗಳ ಅಂತರಾರ್ಥವನ್ನು ತಿಳಿದು ನೋಡುವ ಸಂಕೀರ್ಣ ಜಗತ್ತನ್ನು ನೀಡುವುದು ಕಾದಂಬರಿಯ ಎರಡನೇ ಮಗ್ಗುಲಾಗುತ್ತದೆ.

ನಕ್ಷತ್ರ, ಆಕಾಶಕಾಯಗಳ ವಿವರಗಳನ್ನು ಕಾದಂಬರಿಯಲ್ಲಿ ಸಾಂಕೇತಿಕವಾಗಿ ಬಳಸುವುದರ ಮೂಲಕ ಹುಟ್ಟು ಮತ್ತು ಸಾವಿನ ಅರ್ಥ-ಪರಿಮಿತಿಗಳನ್ನು ನಿರೂಪಿಸಲಾಗಿದೆ.

"ವಿಶ್ವವೆಲ್ಲ ನಕ್ಷತ್ರಗಳಿಂದ ತುಂಬಿವೆ. ನಕ್ಷತ್ರಗಳಲ್ಲಿಯೂ ಜೀವ ಇರುಕ್ಕೆ ಸಾಧ್ಯವಿಲ್ಲ. ಆದ್ದರಿಂದ ಈ ನಿರ್ಜೀವ ವಿಶ್ವದಲ್ಲಿ ಈ ಅಣುಪ್ರಮಾಣದ ಭೂಮಿಯ ಮೇಲೆ ನಾವೇಕೆ, ಹೇಗೆ ಹುಟ್ಟಿದೆವು? ನಾವು ಒಂಟಿ ಅನ್ನೂ ಭಾವ ಕಾಡುತ್ತೆ, ಅಥವಾ ಒಂದೊಂದು ನಕ್ಷತ್ರವೂ ಒಂದೊಂದು ಸೂರ್ಯ ಅಂತ ಭಾವಿಸಿದರೆ, ಭಾವಿಸೋದೇನು ಅದೇ ನಿಜ ಸದ್ಯಕ್ಕೆ ನಮಗೆ ತಿಳಿದಿರೋಮಟ್ಟಿಗೆ, ಈ ಸೂರ್ಯನಿಗೆ ಇರುವ ಹಾಗೆ ಪ್ರತಿ ನಕ್ಷತ್ರಕ್ಕೂ ಹಲವಾರು ಗ್ರಹಗಳಿರುವುದು. ಅಸಂಭವವಲ್ಲದ ಅವುಗಳಲ್ಲಿ ಕೆಲವಲ್ಲಾದರೂ ಜೀವವಿರೂದೂ ಅಸಂಭವವಲ್ಲ. ಹಾಗಿದ್ದಲ್ಲಿ ನಾವು ಒಂಟಿಯಲ್ಲ, ವಿಶ್ವದ ಉದ್ದಗಲಕ್ಕೂ ಅಲ್ಲಲ್ಲಿ ಜೀವಿಗಳಿವೆ ಅವು ನಮ್ಮಂತೆ ಮಾತಾಡದಿರಬಹುದು. ನಮ್ಮಂತೆ ಎರಡು ಕೈ ಎರಡು ಕಾಲಿನವುಗಳಾಗಿರಬಹುದು. ಒಟ್ಟಿನಲ್ಲಿ ಜೀವಿಗಳು ಅನ್ನೂ ಭರವಸೆ ಹುಟ್ಟಿದರೆ ನನ್ನ ಒಂಟಿಭಾವ ಪರಿಹಾರವಾಗಿ ಅಂತರಂಗಕ್ಕೆ ಸಮಾಧಾನ ಸಿಕ್ಕುತ್ತೆ. ಅದು ಒಂದು ಮುಖ್ಯ ಇನ್ನು ನಕ್ಷತ್ರ ನೋಡ್ತಾ ನೋಡ್ತಾ ನಾನು ಯಾಕೆ ಹುಟ್ಟಿದೆ? ಹೇಗೆ ಬಂದೆ ಇಲ್ಲಿಗೆ, ಸಾಯುದಂತೂ ಖಂಡಿತ ತಾನೇ ನನ್ನ ಸಾವಿಗೆ ಏನಾದರೂ ಅರ್ಥವುಂಟೇ ? ಅನ್ನೂ ಪ್ರಶ್ನೆ ಬಾಧಿಸುತ್ತೆ, ದುಃಖದಲ್ಲಿ ಪ್ರಶ್ನೆ"[೧].

---

೧ 'ನೆಲೆ' ಬೆನ್ನುಡಿ. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೮೩.

ಇಂಥ ಒಂದು ವೈಚಾರಿಕ ವಸ್ತುವನ್ನು ನಿರೂಪಿಸುವಾಗ ಲೇಖಕರು ಹೊಸ ಸ್ವರೂಪವನ್ನು ಅಳವಡಿಸಿಕೊಂಡಿದ್ದಾರೆ. ದಿನಚರಿಯ ಮೂಲಕ ಜವರಾಯಿಯ ಅಭಿಪ್ರಾಯಗಳು, ಜವರಾಯಿಯ-ಪಾರ್ವತಿಯ ಚರ್ಚೆಯ ವಿಚಾರಗಳು ವ್ಯಕ್ತವಾದರೆ, ದಿನಚರಿಯ ವಿಷಯದೊಂದಿಗೆ ತಮ್ಮ ಸ್ವಂತ ಅನುಭವಗಳನ್ನು ವಿಚಾರಗಳನ್ನು ತುಲನಾತ್ಮಕ ವಿಶ್ಲೇಷಣೆಗೆ ಒಳಪಡಿಸುತ್ತ ಹೋಗುತ್ತಾರೆ ಕಾಳಪ್ಪನವರು.

ಭೈರಪ್ಪನವರ ಎಲ್ಲಾ ಕಾದಂಬರಿಗಳಲ್ಲಿ ಕಾಮದ ವೈಭವೀಕರಣವಾಗಿದ್ದರೂ ಕೂಡ ಈ ಕಾದಂಬರಿಯಲ್ಲಿ ಸಾವಿನ ವೈಭವೀಕರಣ ನಡೆದಿದೆ. ಕಾದಂಬರಿಕಾರರು ಕಾದಂಬರಿಯ ರಚನೆಯ ಸಂದರ್ಭದಲ್ಲಿ ಹೆಚ್ಚಿನ ಒತ್ತನ್ನು ಸಾವಿನ ಮೇಲೆ ಇರಿಸುತ್ತಾರೆ. ಬದುಕಿನ ವಿವರದಲ್ಲಿ ಸಾವು ವಿಜೃಂಬಿಸುವಂತೆ ಇಲ್ಲಿನ ಕಥನ ಕ್ರಿಯೆ ಸಾಗಿದೆ. ಕಾದಂಬರಿಯಲ್ಲಿ ಪ್ರಮುಖ ಅಂಗವಾಗಿ ಜವರಾಯಿಯ ಸಾವು ಚಿತ್ರಿತವಾಗಿದೆ. ಆತನ ಸಾವಿನ ಹಿನ್ನೆಲೆಯಲ್ಲಿಯೇ ಉಳಿದವರ ಬದುಕಿನ ಅರ್ಥವು ಬಿಚ್ಚಿಕೊಳ್ಳುತ್ತ ಕಾದಂಬರಿ ಬೆಳೆಯುತ್ತದೆ.

'ನೆಲೆ'ಯಲ್ಲಿ ಕಥಾ ಹಂದರದ ವಿವರಗಳು ಮೊದಲು ಕೊನೆ ಎನ್ನದೆ ಹೇಗೆ ಹೇಗೋ ಹರಡಿಕೊಂಡು 'ಪರ್ವ'ದ ವಿನ್ಯಾಸವನ್ನು ನೆನಪಿಗೆ ತರುವಂಥಹ ರಚನಾಬಂಧವನ್ನು ಒಳಗೊಂಡಿದೆ. ಕಾಳಪ್ಪ ಮತ್ತು ಜವರಾಯಪ್ಪನವರ ಬಹುಕಾಲದ ಸ್ನೇಹ, ಜವರಾಯಪ್ಪ ಮತ್ತು ಪಾರ್ವತಿಯ ಸಂಬಂಧ, ಜವರಾಯಪ್ಪನ ಮಗ ಕುಮಾರ ಮತ್ತು ಮಾಲತಿಯ ಸ್ವಭಾವ ಪರಿಚಯ ನಿಗೂಢವಾದ ಸಾವಿಗೆ ಪ್ರತಿಮಾರೂಪ ಕೊಡುವಂತಹ ಪ್ರಗಾಢ ಚಿಂತನೆಗಳು ಮತ್ತು ಇತರ ವಿವರಗಳು ಜವರಾಯಪ್ಪನ ಡೈರಿಯ ಮೂಲಕ, ಆತನ ಸಾವಿನ ನಂತರ ನಮ್ಮೆದುರಿಗೆ ತೆರೆದುಕೊಳ್ಳುತ್ತವೆ.

'ನೆಲೆ'ಯಲ್ಲಿ ಕಥಾ ಹಂದರದ ವಿವರಗಳು ಮೊದಲು ಕೊನೆ ಎನ್ನದೆ ಹೇಗೆ ಹೇಗೋ ಹರಡಿಕೊಂಡು 'ಪರ್ವ'ದ ವಿನ್ಯಾಸವನ್ನು ನೆನಪಿಗೆ ತರುವಂಥಹ ರಚನಾಬಂಧವನ್ನು ಒಳಗೊಂಡಿದೆ. ಕಾಳಪ್ಪ ಮತ್ತು ಜವರಾಯಪ್ಪನವರ ಬಹುಕಾಲದ ಸ್ನೇಹ, ಜವರಾಯಪ್ಪ ಮತ್ತು ಪಾರ್ವತಿಯ ಸಂಬಂಧ, ಜವರಾಯಪ್ಪನ ಮಗ ಕುಮಾರ ಮತ್ತು ಮಾಲತಿಯ ಸ್ವಭಾವ ಪರಿಚಯ ನಿಗೂಢವಾದ ಸಾವಿಗೆ ಪ್ರತಿಮಾರೂಪ ಕೊಡುವಂತಹ ಪ್ರಗಾಢ ಚಿಂತನೆಗಳು ಮತ್ತು ಇತರ ವಿವರಗಳು ಜವರಾಯಪ್ಪನ ಡೈರಿಯ ಮೂಲಕ, ಆತನ ಸಾವಿನ ನಂತರ ನಮ್ಮೆದುರಿಗೆ ತೆರೆದುಕೊಳ್ಳುತ್ತವೆ.

'ನೆಲೆ'ಯ ನಾಯಕ ಜವರಾಯಿಯ ಖಾಸಗಿ ಡೈರಿಯನ್ನು ತಾಂತ್ರಿಕ ಸಾಧನವನ್ನಾಗಿ ಬಳಸಿ ಲೇಖಕರು, ತಮ್ಮ ಪಾತ್ರಗಳ ಮನಸ್ಸಿನಾಳದಲ್ಲಿನ ಭಾವನೆಗಳನ್ನು, ಆಲೋಚನೆಗಳನ್ನು ಸ್ಪಷ್ಟವಾಗಿ ನಿರ್ಭಿಡೆಯಿಂದ ಪದರ ಪದರವಾಗಿ ಸ್ವಗತಗಳೆಂಬಂತೆ 'ಕಥನಶಿಲ್ಪ'ದಲ್ಲಿ ನಿರೂಪಿಸಿದ್ದಾರೆ. ಇಡೀ ಕೃತಿಯಲ್ಲಿ ಕಥೆ ಘಟನೆಗಳಿಗಿಂತ, ವಿಚಾರಗಳಿಗೆ, ಮಾನಸಿಕ ವ್ಯಾಪಾರಕ್ಕೆ ಹೆಚ್ಚು ಪ್ರಾಶಸ್ತ್ಯ ಬಂದಿರುವ ಈ ಕಾದಂಬರಿಯಲ್ಲಿ ಎರಡು ರೀತಿಯ ಕಾಲದ ಕಲ್ಪನೆಗಳನ್ನು ಕಾಣಬಹುದಾಗಿದೆ.

ಕಾದಂಬರಿಯ ಕಥನಕ್ರಿಯೆಯಲ್ಲಿ ಓದುಗ ಭಾಗವಹಿಸುವ ಕಾಲದ ಅವಧಿ ಕಾಳಪ್ಪನವರು ಕುಮಾರನ ಮನೆಗೆ ಬಂದ ದಿನದಿಂದ, ಜವರಾಯಪ್ಪ ಸತ್ತ ಹತ್ತನೆಯ ದಿನದವರೆಗೆ ಮಾತ್ರ. ಕೇವಲ ಹತ್ತು ದಿನಗಳು. ಆದರೆ ಕಥೆಯ ಪೂರ್ಣಕ್ರಿಯೆ ನಡೆದಿರುವ ಕಾಲದ ಅವಧಿ ಅರವತ್ತು ವರ್ಷಗಳು. ಕಾಲದ ಈ ಮಿತವ್ಯಯ ಚಿಂತನೆಗಳನ್ನು, ಘಟನೆಗಳನ್ನು ಕೇಂದ್ರಿಕರಿಸಿ ಸಾಂದ್ರಗೊಳಿಸಿರುವುದರ ಪರಿಣಾಮವಾಗಿ ಕೇವಲ ನೂರೆಂಬತ್ತೇಳು ಪುಟಗಳಲ್ಲಿ ಲೇಖಕರು, ನಮ್ಮನ್ನು ದಿನನಿತ್ಯದ ಗಡಿಬಿಡಿಯ ಈ ಲೋಕದಿಂದ ಬಿಡಿದೆಬ್ಬಿಸಿ, ನಕ್ಷತ್ರಗಳ ಅದ್ಭುತ ಲೋಕಕ್ಕೆ ಏರಿಸಿ ಅಲ್ಲಿಂದ ಝುಮ್ರನೆ ಮೃತ್ಯುವಿನ ಅಂಗಳಕ್ಕೆಳೆತಂದು, ಜೀವನದರ್ಶನ ಮಾಡಿಸಿ, ಮರ್ತ್ಯಕ್ಕೂ ನಕ್ಷತ್ರ ಲೋಕಕ್ಕೂ

ಸೇತುವೆಯನ್ನು ಕಟ್ಟಿರುವಂತೆ ಕಾದಂಬರಿಯ 'ಕಥನಶಿಲ್ಪ' ನಿರ್ಮಿತಿಗೊಂಡಿರುವುದು ಗಮನಿಸಬಹುದಾದ ಅಂಶವಾಗಿದೆ. ಮಾನವೀಯ ಸಂಬಂಧಗಳು, ಮೌಲ್ಯಗಳು, ಗಂಡು-ಹೆಣ್ಣಿನ ಸಂಬಂಧದ ಅನೇಕ ಆಯಾಮಗಳು, ಕಾಮದ ಅದಮ್ಯ ಶಕ್ತಿ, ಸಾವಿನ ನಿಗೂಢ ನಿತ್ಯತೆ ಇವುಗಳ ತಲಸ್ಪರ್ಶಿ ಅನ್ವೇಷಣೆಯಿಂದಾಗಿ 'ನೆಲೆ' ವಿಶಿಷ್ಟ ಕೃತಿಯಾಗುತ್ತದೆ.

'ನೆಲೆ'ಯ ನಾಯಕ ಜವರಾಯಿಯ ಖಾಸಗಿ ಡೈರಿಯನ್ನು ತಾಂತ್ರಿಕ ಸಾಧನವನ್ನಾಗಿ ಬಳಸಿ ಲೇಖಕರು, ತಮ್ಮ ಪಾತ್ರಗಳ ಮನಸ್ಸಿನಾಳದಲ್ಲಿನ ಭಾವನೆಗಳನ್ನು, ಆಲೋಚನೆಗಳನ್ನು ಸ್ಪಷ್ಟವಾಗಿ ನಿರ್ಭಿಡೆಯಿಂದ ಪದರ ಪದರವಾಗಿ ಸ್ವಗತಗಳೆಂಬಂತೆ 'ಕಥನಶಿಲ್ಪ'ದಲ್ಲಿ ನಿರೂಪಿಸಿದ್ದಾರೆ. ಇಡೀ ಕೃತಿಯಲ್ಲಿ ಕಥೆ ಘಟನೆಗಳಿಗಿಂತ, ವಿಚಾರಗಳಿಗೆ, ಮಾನಸಿಕ ವ್ಯಾಪಾರಕ್ಕೆ ಹೆಚ್ಚು ಪ್ರಾಶಸ್ತ್ಯ ಬಂದಿರುವ ಈ ಕಾದಂಬರಿಯಲ್ಲಿ ಎರಡು ರೀತಿಯ ಕಾಲದ ಕಲ್ಪನೆಗಳನ್ನು ಕಾಣಬಹುದಾಗಿದೆ.

ಕಾದಂಬರಿಯ 'ಕಥನಕ್ರಿಯೆ'ಯಲ್ಲಿ ಓದುಗ ಭಾಗವಹಿಸುವ ಕಾಲದ ಅವಧಿ ಕಾಳಪ್ಪನವರು ಕುಮಾರನ ಮನೆಗೆ ಬಂದ ದಿನದಿಂದ, ಜವರಾಯಪ್ಪ ಸತ್ತ ಹತ್ತನೆಯ ದಿನದವರೆಗೆ ಮಾತ್ರ. ಕೇವಲ ಹತ್ತು ದಿನಗಳು. ಆದರೆ ಕಥೆಯ ಪೂರ್ಣಕ್ರಿಯೆ ನಡೆದಿರುವ ಕಾಲದ ಅವಧಿ ಅರವತ್ತು ವರ್ಷಗಳು. ಕಾಲದ ಈ ಮಿತವ್ಯಯ ಚಿಂತನೆಗಳನ್ನು, ಘಟನೆಗಳನ್ನು ಕೇಂದ್ರಿಕರಿಸಿ ಸಾಂದ್ರಗೊಳಿಸಿರುವುದರ ಪರಿಣಾಮವಾಗಿ ಕೇವಲ ನೂರೆಂಬತ್ತೇಳು ಪುಟಗಳಲ್ಲಿ ಲೇಖಕರು, ನಮ್ಮನ್ನು ದಿನನಿತ್ಯದ ಗಡಿಬಿಡಿಯ ಈ ಲೋಕದಿಂದ ಬಡಿದೆಬ್ಬಿಸಿ, ನಕ್ಷತ್ರಗಳ ಅದ್ಭುತ ಲೋಕಕ್ಕೆ ಏರಿಸಿ ಅಲ್ಲಿಂದ ಝುರ್ರನೆ ಮೃತ್ಯುವಿನ ಅಂಗಳಕ್ಕಿಳಿತಂದು, ಜೀವನದರ್ಶನ ಮಾಡಿಸಿ, ಮರ್ತ್ಯಕ್ಕೂ ನಕ್ಷತ್ರ ಲೋಕಕ್ಕೂ ಸೇತುವೆಯನ್ನು ಕಟ್ಟಿರುವಂತೆ ಕಾದಂಬರಿಯ 'ಕಥನಶಿಲ್ಪ' ನಿರ್ಮಿತಿಗೊಂಡಿರುವುದು ಗಮನಿಸಬಹುದಾದ ಅಂಶವಾಗಿದೆ. ಮಾನವೀಯ ಸಂಬಂಧಗಳು, ಮೌಲ್ಯಗಳು,

ಗಂಡು-ಹೆಣ್ಣಿನ ಸಂಬಂಧದ ಅನೇಕ ಆಯಾಮಗಳು, ಕಾಮದ ಅದಮ್ಯ ಶಕ್ತಿ, ಸಾವಿನ ನಿಗೂಢ ನಿತ್ಯತೆ ಇವುಗಳ ತಲಸ್ಪರ್ಶಿ ಅನ್ವೇಷಣೆಯಿಂದಾಗಿ 'ನೆಲೆ' ವಿಶಿಷ್ಟ ಕೃತಿಯಾಗುತ್ತದೆ.

ಭೈರಪ್ಪನವರ ಎಲ್ಲಾ ಕಾದಂಬರಿಗಳಲ್ಲಿ ತೋರಿಬರುವ ಕಾಮ ಸಂಬಂಧದ ವೈಭವೀಕರಣ ಹಿಂದೆ ಸರಿದು ಹುಟ್ಟು-ಸಾವಿನ ವಿವೇಚನೆಯೆತ್ತ ಹೊರಟಿರುವುದು 'ನೆಲೆ' ಕಾದಂಬರಿಯ ಕಥನ ಕಲೆಯಲ್ಲಿ ಗಮನಿಸಬೇಕಾದ ಅಂಶವಾಗಿದೆ. ಹೀಗಾಗಿ ಉಳಿದ ಕಾದಂಬರಿಗಳ ಓದಿಗಿಂತ ಭಿನ್ನವಾದ ಅನುಭವವನ್ನು ಈ ಕಾದಂಬರಿಯ ಓದು ಓದುಗರಿಗೆ ನೀಡುತ್ತದೆ.

*************

## 'ಸಾಕ್ಷಿ'–ಕಥನಕ್ರಿಯೆ.

'ಸಾಕ್ಷಿ' ಎಸ್.ಎಲ್.ಭೈರಪ್ಪನವರ ೧೫ನೇ ಕಾದಂಬರಿ. ಭೈರಪ್ಪನವರ ಇದುವರೆಗಿನ ಕಾದಂಬರಿಗಳ ರಚನೆಗಿಂತ ಭಿನ್ನವಾದ ರೀತಿಯಲ್ಲಿ ರಚನೆಗೊಂಡಿರುವ ಈ ಕಾದಂಬರಿಯ ಬೆನ್ನುಡಿಯಲ್ಲಿ ಹೇಳುವಂತೆ "ಪುರಾಣ ಮತ್ತು ನಮ್ಮ ಈ ಇಂದ್ರಿಯ ವಾಸ್ತವ ಜಗತ್ತುಗಳನ್ನು ಜೋಡಿಸುವ ಮೂಲಕ ಮನುಷ್ಯನ ನೀತಿಯ ಬೇರುಗಳನ್ನು ಶೋಧಿಸುತ್ತದೆ. ನಿಜವು ನೀತಿಯ ನೆಲೆಯೋ, ನೀತಿಯು ನಿಜದ ನೆಲೆಯೋ, ಎಂಬಂತಹ ಮೂಲಭೂತ ಪ್ರಶ್ನೆಗಳನ್ನು ಅರಗಿಸಿಕೊಂಡಿರುವ ಈ ಕಾದಂಬರಿಯ ಪಾತ್ರ ವೈಶಿಷ್ಟ್ಯ, ರಚನಾ ವಿಧಾನ ಹಾಗೂ ಕಲಾತ್ಮಕ ಅನುಭವಗಳು ಭೈರಪ್ಪನವರ ಹಿಂದಿನ ಕಾದಂಬರಿಗಳಿಗಿಂತ ಮೂರು ಮೆಟ್ಟಿಲು ಮೇಲೆ ಹೋಗಿವೆ"[೧]. ಎಸ್.ಎಲ್.ಭೈರಪ್ಪನವರ ಇದುವರೆಗಿನ ಕಾದಂಬರಿಗಳಲ್ಲಿ ಕಾಮವು ಪುರುಷಾರ್ಥಗಳಲ್ಲಿ ಒಂದು ಅರ್ಥವನ್ನು ಮಾತ್ರ ಪಡೆದುಕೊಂಡು ಪಾತ್ರರಚನೆಯಲ್ಲಿ ಕಥನದ ಸಂಗತಿಯಲ್ಲಿ ಪ್ರಾಸಂಗಿಕವಾಗಿ ಬರುತ್ತಿತ್ತು. ಆದರೆ ಈ ಕಾದಂಬರಿಯಲ್ಲಿ ಕಾಮವು ಸ್ವಯಂಪೂರ್ಣವಾದ ಅಭಿವ್ಯಕ್ತಿಯನ್ನು ಪಡೆದು, ಕಾಮಕ್ಕೆ ಸಂಬಂಧಿಸಿದಂತೆ ನೀತಿ–ಅನೀತಿಗಳ ಸಾಮಾಜಿಕ ಪರಿಕಲ್ಪನೆಗಳನ್ನು ಶೋಧಿಸಲು ತೊಡಗಿದೆ.

ಪರಮೇಶ್ವರನೆಂಬ ಒಬ್ಬ ವ್ಯಕ್ತಿ ತಾನು ಕೋರ್ಟಿನಲ್ಲಿ ಸುಳ್ಳು ಸಾಕ್ಷಿ ಹೇಳಿದಕ್ಕೆ ಪಶ್ಚಾತ್ತಾಪಗೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಹೀಗೆ ಆತ್ಮಹತ್ಯೆ ಮಾಡಿಕೊಂಡು ಸತ್ತು ಯಮಲೋಕಕ್ಕೆ ಹೋದ ಆತ, ತಾನು ತನ್ನ ಅಳಿಯನ ಬಿಡುಗಡೆಗೋಸ್ಕರವಾಗಿ ಸುಳ್ಳು ಸಾಕ್ಷಿ ಹೇಳಿದ್ದೇನೆಂದು ಒಪ್ಪಿಕೊಳ್ಳುತ್ತಾನೆ. ಆದರೆ ಯಮ ಈತನ ಮಾತನ್ನು ಒಪ್ಪಿಕೊಳ್ಳದೇ ನೀನು ನ್ಯಾಯಾಲಯದಲ್ಲಿ ನಡೆದ ಇತರ

---

[೧] 'ಬೆನ್ನುಡಿ' –'ಸಾಕ್ಷಿ'. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೮೬.

ವಿದ್ಯಮಾನಗಳನ್ನು ತಿಳಿಯುವ ಪ್ರಯತ್ನ ಮಾಡದೇ ಇಲ್ಲಿಗೆ ಓಡಿ ಬಂದಿರುವಿ. ಮಂಜಯ್ಯನ ಬಿಡುಗಡೆ ನಿನ್ನ ಸಾಕ್ಷಿಯಿಂದ ಆಗಿಲ್ಲ. ಹಾಗೆ ನೋಡಿದರೆ ನಿನ್ನ ಸಾಕ್ಷಿಯಿಂದ ಅವನ ಬಿಡುಗಡೆಗೆ ತುಸು ತೊಂದರೆಯೇ ಆಗಿದೆ. ಆದ್ದರಿಂದ ನಿನಗೆ ಕ್ರಿಯೆಯ ಸಂಪರ್ಕವೇ ಇಲ್ಲದೆ ಎಲ್ಲರ ಮನೋವ್ಯಾಪಾರವನ್ನು ತಿಳಿಯುವ ಚಿತ್ರಗುಪ್ತನಿಗಿರುವಂತಹ ಶಕ್ತಿಯನ್ನು ಕೊಡುತ್ತೇನೆ. ಅದನ್ನು ಪಡೆದು, ನಿಜವನ್ನು ತಿಳಿದು ಅನಂತರ ಬಂದು ವರದಿ ಮಾಡು ಎಂದು ಹೇಳಿ ಕಳುಹಿಸುತ್ತಾನೆ. ಆಗ ಆ ಪರಮೇಶ್ವರಯ್ಯ ಪ್ರೇತ ಸ್ಥಿತಿಯಲ್ಲಿಯೇ ಪೂರ್ವಲೋಕಕ್ಕೆ ಬಂದು ಈ ವಿವಾದಕ್ಕೆ ಸಂಬಂಧಿಸಿದ ಎಲ್ಲರ ಮನಸ್ಸನ್ನು ಪ್ರವೇಶಿಸಿ ತಿಳಿದು ಪುನಃ ಯಮನಿಗೆ ವರದಿಯನ್ನು ಸಲ್ಲಿಸುತ್ತಾನೆ. ಹೀಗೆ 'ಸಾಕ್ಷಿ'ಯ ಕಥಾ ಹಂದರವನ್ನು ಯಮಲೋಕದಲ್ಲಿ ಪ್ರಾರಂಭಿಸಿ, ಭೂಲೋಕದ ಕಥಾ ಸ್ಥಳಗಳಲ್ಲೆಲ್ಲ ಸಂಚರಿಸಿ ಮತ್ತೇ ಯಮಲೋಕದಲ್ಲಿಯೇ ಮುಕ್ತಾಯವಾಗುವಂತೆ ರಚಿಸಿರುವುದು ಎಸ್.ಎಲ್.ಭೈರಪ್ಪನವರ ಒಂದು ಅದ್ಭುತಾದ ರಚನಾ ಸಾಮರ್ಥ್ಯವನ್ನು ಎತ್ತಿ ತೋರಿಸುತ್ತದೆ. ಕಾಮವೇ ಪ್ರಧಾನವಾಗಿರುವ ಈ ಕಾದಂಬರಿಯಲ್ಲಿ ಕಾದಂಬರಿಕಾರರು ಕಾಮದ ೨ ಮುಖಗಳನ್ನು ಪರಿಚಯಿಸುತ್ತಾರೆ. ಒಂದು ಮುಖ ಕಾದಂಬರಿಯ ಪ್ರಧಾನ ಪಾತ್ರವಾದ ಮಂಜಯ್ಯನದ್ದು, ಇನ್ನೊಂದು ಮುಖ ಪರಮೇಶ್ವರಯ್ಯನವರ ಬೀಗರಾದ ನಾಗಪ್ಪನವರದು. ಈ ಎರಡು ವಿಧದ ಕಾಮದ ಸ್ವರೂಪವನ್ನು ತಿಳಿಸುತ್ತಾ ಕಾದಂಬರಿಯ ಕತೆಯನ್ನು ಬೆಳೆಸುತ್ತಾರೆ.

ಕಾಮದ ಮೊದಲ ಮುಖದ ಪರಿಚಯವನ್ನು ಮಾಡಲು ಹೊರಟಿರುವ ಕಾದಂಬರಿಕಾರರು, ಸ್ವಾರ್ಥ, ಸುಳ್ಳು, ಮೋಸ ಮತ್ತು ಕ್ರೌರ್ಯಗಳನ್ನು ಇನ್ನಿಲ್ಲದಂತೆ ರೂಢಿಸಿಕೊಂಡು, ಕಾಮುಕತೆಯಿಂದಲೇ ಪರಮಾವಧಿಯನ್ನು ಮುಟ್ಟುವ ಮಂಜಯ್ಯನ ಪಾತ್ರವನ್ನು ಕೇಂದ್ರವನ್ನಾಗಿ ತರುತ್ತಾರೆ.

ಮಂಜಯ್ಯ ತನ್ನೂರಿನ ಪ್ರಸಿದ್ಧ ಕಳ್ಳ ಕಂಚಿಯನ್ನು ಕೊಲೆ ಮಾಡಿ, ಆತನ ಹೆಂಡತಿ ಲಕ್ಕುವನ್ನು ಮದುವೆ ಅಥವಾ ಕೊಡಿಕೆ ಮಾಡಿಕೊಳ್ಳುವ ಆಶೆ ಮೂಡಿಸಿ, ಅವಳ ಸಾಕ್ಷಿಯಿಂದಲೇ ಬಿಡುಗಡೆ ಹೊಂದುತ್ತಾನೆ. ಆದರೆ ಅವಳನ್ನು ಮದುವೆ ಅಥವಾ ಕೊಡಿಕೆ ಮಾಡಿಕೊಳ್ಳದೇ ಗುಪ್ತವಾದ ಲೈಂಗಿಕ ಸಂಬಂಧದಲ್ಲಿಯೇ ಮುಂದುವರಿಯುತ್ತಾನೆ. ಇದಕ್ಕೂ ಮೊದಲು ಪರಮೇಶ್ವರಯ್ಯನ ಮಗಳನ್ನು ಕಾಮಿಸಿ ಮದುವೆ ಮಾಡಿಕೊಳ್ಳುತ್ತಾನೆ. ಈತನ ಹೊರಚಾಳಿಗೆ ಹೇಸಿದ ಅವಳು ಆತನನ್ನು ತೊರೆದು ದೂರದ ನಗರದಲ್ಲಿ ಶಿಕ್ಷಕಿಯಾಗಿ ಉದ್ಯೋಗಕ್ಕೆ ಸೇರಿಕೊಳ್ಳುತ್ತಾಳೆ.

ಹೀಗೆ ಕಾಮುಕನಾಗಿರುವ ಮಂಜಯ್ಯ ಮಲ್ಲಿ ಸಿದ್ಧಿ ನಾಗಿ, ಅವಳ ತಂಗಿ ಚೆನ್ನಮ್ಮ ಮುಂತಾದವರೊಂದಿಗೂ ಸಂಬಂಧವನ್ನು ಹೊಂದುತ್ತಾನೆ. ಅಲ್ಲದೆ ಚೆನ್ನರಾಯ ಪಟ್ಟಣ ಹಾಸನ ಮತ್ತಿತರೆಡೆ ಹೋದಾಗಲೂ ಚಂದ್ರಿಕೆ, ರಂಗಮಣಿ ಕಾಂತಾಮಣಿ, ಕುಸುಮಾಕ್ಷಿ ಮುಂತಾದ ಹೆಣ್ಣುಮಕ್ಕಳೊಂದಿಗೆ ಕೂಡುತ್ತಿದ್ದ. ಈ ನಡುವೆ ಅಪ್ಪಟ್ಟ ಗಾಂಧೀವಾದಿಯಾಗಿರುವ ಸತ್ಯನಾರಾಯಣ ಎನ್ನುವವನನ್ನು ಪ್ರೇರೇಪಿಸಿ ಆತನಿಗೆ ತನ್ನ ಕಾಮ ಸಿದ್ಧಾಂತದ ಉಪದೇಶವನ್ನು ಈ ರೀತಿಯಾಗಿ ಮಾಡುತ್ತಾನೆ. "ಚಿಕ್ಕ ವಯಸ್ಸಿಗೆ ನಿಮ್ಮ ಹೆಂಡತಿ ಸತ್ತರು. ಆವತ್ತಿನಿಂದ ಇವತ್ತಿನವರೆಗೆ ನೀವು ಹೆಂಗಸಿನ ಮೈ ಮುಟ್ಟಿಲ್ಲಾ ಅಂತೀರಾ? ನಿಮ್ಮ ಮಾತನ್ನು ನಾನು ನಂಬುತ್ತೀನಿ, ಹಾಗಿದ್ದು ಏನು ಸಾಧಿಸಿದಿರಿ? ಮಗುವಿಗೆ ಮದುವೆ ಮಾಡಿದಿರಿ ಆಯ್ತು, ಹೆಂಗಸಿನ ಸಹವಾಸ ಮಾಡಿದ್ದರೂ ಆ ಕೆಲಸ ಮಾಡಬೌದಾಗಿತ್ತು. ಅದಕ್ಕೂ ಇದಕ್ಕೂ ಏನು ಸಂಬಂಧ? ಸತ್ಯನಾರಾಯಣ್ಣಪ್ಪನೋರೊ ಅಂದರೆ ಮಹಾತ್ಮಗಾಂಧಿ ಮರುಕು ಅಂತ ಒಬ್ಬಿಬ್ಬರ ಕೈಲಿ ಕರಸ್ಥಳೂದು ಬಿಟ್ಟು ಏನು ಸಾಧಿಸಿದಿರಿ"[೨] ಎಂದು ವ್ಯಂಗಿಸುತ್ತಾನೆ. ಅಲ್ಲದೆ ಸತ್ಯನಾರಾಯಣನಿಗೆ ಆತನ ಬ್ರಹ್ಮಚರ್ಯದ ಕುರಿತು ಮಂಜಯ್ಯ ಹೀಗೆ ಟೀಕಿಸುತ್ತಾನೆ. "ಕಠಿಣ ಬ್ರಹ್ಮಚರ್ಯದ ಮೇಲೆ ನಿಲ್ಲಿಸಿಕೊಂಡವರಿಗೆ ಆತ್ಮಹತ್ಯೆ ಬಿಟ್ಟು ಬೇರೆ ಯಾವ ದಾರಿ ಇದೆ? ಎನ್ನುವ

---

[೨] 'ಸಾಕ್ಷಿ' ಪುಟ ೨೮- ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೮೬.

ನೀವು ಜೀವನದಲ್ಲಿ ಸಾಧಿಸಿದ್ದಾದರೂ ಏನು? ಮಗನ ಮನೆಯಲ್ಲಿ ಸಂಬಳವಿಲ್ಲದೆ ಆಳಾಗಿದ್ದೀರಿ, ಮತ್ತೇನು ಸಾಧಿಸಿದ್ದೀರಿ? ಎಂದು ಪ್ರಶ್ನಿಸುವನು. ಜೀವನದಲ್ಲಿ ಸುಖವನ್ನು ಅನುಭವಿಸಲಿಲ್ಲ. ನಿಮಗೆ ಎಂದಾದರೂ ಹೆಣ್ಣಿನ ಆಸೆಯಾದರೆ ನನ್ನ ಬಳಿ ಬನ್ನಿ ನಿಮಗೆ ಎಲ್ಲ ರೀತಿಯ ವ್ಯವಸ್ಥೆ ಮಾಡುವೆನು"[೩] ಎಂದು ಹೇಳಿ ಆತನ ಸಂಯಮವನ್ನು ಕೆಡಿಸುತ್ತಾನೆ.

ಹೆಂಡತಿಯಾದ ಸಾವಿತ್ರಿ ಆತನನ್ನು ತೊರೆದು ೧೮-೧೯ ವರ್ಷಗಳಾದ ಮೇಲೆ ಒಂದು ದಿನ ಚೆನ್ನರಾಯಪಟ್ಟಣದಲ್ಲಿ ಅವಳಿದ್ದ ಕೋಣೆಗೆ ಹೋಗಿ ಅವಳನ್ನು ಬಲಾತ್ಕಾರದಿಂದ ಕೆಡಿಸಿ ಬರುತ್ತಾನೆ. ಇದರಿಂದ ಗರ್ಭವತಿಯಾದ ಆಕೆ ಇಂಥ ದುರಾಚಾರಿಯ ಗರ್ಭವನ್ನು ಹೊತ್ತು ಬೆಳೆಸುವುದಕ್ಕೆ ನಾಚಿಕೆಯಾಗಿ ಗರ್ಭ ತೆಗೆಸಿಕೊಳ್ಳುತ್ತಾಳೆ.

ಕಂಚಿಯ ಹೆಂಡತಿಯಾದ ಲಕ್ಕುವಿನೊಂದಿಗೆ ಸಂಬಂಧವಿರಿಸಿಕೊಂಡಿರುವಂತೆ ಬೇರೆ ಊರಿನಲ್ಲಿ ಓದುತ್ತಿದ್ದ ಲಕ್ಕುವಿನ ಮಗಳನ್ನೂ ಕೆಡಿಸುತ್ತಾನೆ. ಹೀಗೆ ಎಲ್ಲ ಕಡೆಯೂ ಕಾಮದ ಗೆಲುವಿನಿಂದ ಬೀಗುತ್ತಿದ್ದ ಮಂಜಯ್ಯನಿಗೆ ಹಾದರದ ಹೆಂಗಸಾಗಿರುವ ಫಾರೆಸ್ಟ್ ಅಧಿಕಾರಿ ಅಪ್ಪಾಜಪ್ಪನ ಹೆಂಡತಿ ಸರೋಜಾಕ್ಷಿ ಮಾತ್ರ ಮೊದಲ ಬಾರಿಗೆ ಬಲಿ ಬೀಳುವುದಿಲ್ಲ. ತನ್ನ ಗಂಡನನ್ನು ನೌಕರಿಯಿಂದ ವಜಾ ಮಾಡಿಸಿರುವ ಮಂಜಯ್ಯನ ಮೇಲೆ ಆಕೆಗೆ ಸಹಜವಾಗಿಯೇ ದ್ವೇಷ ಮೂಡಿರುತ್ತದೆ. ಆದರೆ ಮಂಜಯ್ಯನ ಮೇಲಿನ ಆಕರ್ಷಣೆಯಿಂದ ಆಕೆಯೂ ಕೊನೆಗೆ ಆತನ ಕಾಮಪಾಶಕ್ಕೆ ಸಿಲುಕುವಂತೆ ಕಾದಂಬರಿಕಾರರು ಮಾಡಿಬಿಡುತ್ತಾರೆ. ಅವಳ ಆಮಂತ್ರಣದಿಂದ ಪ್ರಚೋದಿತಳಾದ ಆತ ಅವಳ ಮನೆಗೆ ಹೋಗಿ ರಾತ್ರಿ ಅಲ್ಲಿಯೇ ಉಳಿಯುತ್ತಾನೆ. ಆದರೆ ಅವಳ ಪ್ರಚೋದನೆಯಿಂದ ಪುಲಕಿತನಾಗದೇ ನಿಷ್ಕ್ರಿಯನಾಗಿ

---

[೩] 'ಸಾಕ್ಷಿ'. ಪುಟ ೩೦.ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೮೬.

ಬಿಡುತ್ತಾನೆ. ಇದು ಒಂದು ರೀತಿಯಲ್ಲಿ ಆತನ ಕಾಮದ ಅವಸಾನವೇ. ಮರುದಿನ ತೋಟದಲ್ಲಿ ಲಕ್ಕು ತನ್ನೊಂದಿಗೆ ಸಂಬಂಧವಿರಿಸಿಕೊಂಡಿರುವ ಈತ, ತನ್ನ ಮಗಳನ್ನು ಕೆಡಿಸಿರುವ ವಿಚಾರ ತಿಳಿದು ಕಿಡಿ ಕಾರಿ ಉಪಾಯದಿಂದ ಆತನನ್ನು ತೋಟದ ಕಡೆಗೆ ಬರಮಾಡಿಕೊಂಡು ಆತನ ಶಿಶ್ನವನ್ನೇ ಕತ್ತರಿಸುವ ಮೂಲಕ, ಅವನ ಅವಸಾನವನ್ನು ಪೂರ್ತಿಗೊಳಿಸುವಂತೆ ಕಾಮದ ಒಂದು ಮುಖವನ್ನು ಕಾದಂಬರಿಕಾರರು ಈ ರೀತಿಯಾಗಿ ರಚಿಸಿರುತ್ತಾರೆ.

'ಸಾಕ್ಷಿ' ಕಾದಂಬರಿಯ ವಸ್ತು ಯಮಲೋಕದಲ್ಲಿ ಪ್ರಾರಂಭವಾಗಿ, ಭೂಲೋಕದ ಕಥಾಸ್ಥಳಗಳಲ್ಲೆಲ್ಲಾ ಸಂಚರಿಸಿ ಮತ್ತೆ ಯಮಲೋಕದಲ್ಲಿಯೇ ಮುಕ್ತಾಯವಾಗುವಂತೆ ಕಾದಂಬರಿಕಾರರು ಇದರ ಕಥಾ ಸಂವಿಧಾನವನ್ನು ವರ್ತುಲಾಕಾರವಾಗಿ ಕಟ್ಟಿರುತ್ತಾರೆ. ಈ ಕಾದಂಬರಿಯ ಕೇಂದ್ರಪಾತ್ರ ಮಂಜಯ್ಯನದು. ಈತನ ಸುತ್ತಲೂ ಇತರ ಪಾತ್ರಗಳ 'ಕಥನಶಿಲ್ಪ'ವನ್ನು ಹೆಣೆದಿರುತ್ತಾರೆ. ಕೇಂದ್ರಪಾತ್ರದ ಚಿತ್ರಣವನ್ನು ಕಾದಂಬರಿಕಾರರು ಹಿಮ್ಮಿಂಚು ತಂತ್ರವನ್ನು ಬಳಸಿಕೊಂಡು ಮಾಡಿರುತ್ತಾರೆ. ಕಾದಂಬರಿಯಲ್ಲಿ ಬರುವ ಲಕ್ಕುವಿನೊಡನೆ ಮೈಥುನದಲ್ಲಿ ಇರುವಾಗ ಮಂಜಯ್ಯನ ಬದುಕು ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಹಾಗೆ ಇತರ ಕೆಲವು ಪಾತ್ರಗಳ ಗತಜೀವನದ ವಿವರಣೆ ನೀಡುತ್ತಾ ಹೋಗುತ್ತದೆ. ಏಕಕೇಂದ್ರಿತವಾದ ಪಾತ್ರವನ್ನು ಹೊಂದಿರುವ ಈ ಕಾದಂಬರಿಯ ಇತರ ಪಾತ್ರಗಳೆಲ್ಲವೂ ತಮ್ಮ ಕೇಂದ್ರವನ್ನು ತಾವೇ ಗುರುತಿಸಿಕೊಂಡು ತಮ್ಮ ವರ್ತುಲವನ್ನು ತಾವೇ ರೇಖಿಸಿಕೊಳ್ಳುವಂತೆ ಇಲ್ಲಿನ 'ಕಥನಶಿಲ್ಪ'ದ ರಚನೆಸಾಗಿದೆ.

ಆತ್ಮಹತ್ಯೆ ಮಾಡಿಕೊಂಡು ಅಂಗುಷ್ಠಕಾಯದ ಪ್ರೇತವಾಗಿದ್ದ ಪರಮೇಶ್ವರಯ್ಯ, ಯಮರಾಜನ ಆಣತಿಯಂತೆ ತನ್ನ ಆತ್ಮಹತ್ಯೆಗೆ ಕಾರಣವಾದ ಎಲ್ಲಾ ಪಾತ್ರಗಳ ಅಂತರಂಗದ ಸಾಕ್ಷಿಯಾಗಿ ನಿಂತಿರುವುದು ಈ ಕತೆಗೆ ಪೌರಾಣಿಕವಾದ ಚೌಕಟ್ಟನ್ನು ಕೊಟ್ಟಿರುವುದಕ್ಕೆ ನಿದರ್ಶನವಾಗಿದೆ. ಅಂದರೆ ವಾಸ್ತವತಾವಾದಿ ವಸ್ತುವಿಗೆ.

ಪೌರಾಣಿಕ ಚೌಕಟ್ಟನ್ನು ಭೈರಪ್ಪನವರು 'ಸಾಕ್ಷಿ' ಕಾದಂಬರಿಯ 'ಶಿಲ್ಪ'ದಲ್ಲಿ ತಂದಿರುವುದು ವಿಶೇಷ.

ನಂತರ ಕಾದಂಬರಿಯ ಕೇಂದ್ರ ವಿಚಾರವಾಗಿ ವರ್ಣಿಸಲ್ಪಟ್ಟ ಘಟನಾವಳಿಯೆಲ್ಲಾ ಹಿಂಬೆಳಕಿನಲ್ಲಿ ತಂದಿರುವುದು ವಿಶೇಷ. ಕೊನೆಯಲ್ಲಿ ಮತ್ತೇ ಯಮಲೋಕದ ಸನ್ನಿವೇಶವೇ ಮರಳಿ ಬರುತ್ತದೆ. ಅದರಲ್ಲಿ ಈಗಾಗಲೇ ಕಥೆಯ ಸಂದರ್ಭದಲ್ಲಿ ಆತ್ಮಹತ್ಯೆಗೆ ಒಳಗಾದ ಜಾನಕಮ್ಮ ಮತ್ತು ಮಂಜಯ್ಯನವರ ಪ್ರೇತಗಳು ಪರಮೇಶ್ವರಯ್ಯನವರ ಪ್ರೇತದೊಂದಿಗೆ ಯಮಲೋಕದಲ್ಲಿ ಸೇರುವುದು. ಪ್ರೇತಗಳು ತಮ್ಮ ತಮ್ಮ ಅಂತರಂಗದ ಭಾವನೆಗಳನ್ನು ಯಾವ ಮುಚ್ಚುಮರೆಯಿಲ್ಲದೆ ಒಪ್ಪಿಕೊಳ್ಳುವುದು, ಹಾಗೆ ಒಪ್ಪಿಸಿಕೊಳ್ಳುವಾಗ ಮಂಜಯ್ಯ ಅಲ್ಲಿಯೂ ಸುಳ್ಳನ್ನು ಹೇಳುವುದು. ಆಗ ಪರಮೇಶ್ವರಯ್ಯನ ಪ್ರೇತ ಸುಳ್ಳಿನ ಮೂಲ ಯಾವುದು? ಅದಕ್ಕೆ ನಾಶವೇ ಇಲ್ಲವೇ? ಎಂಬ ಪ್ರಶ್ನೆಯನ್ನು ಯಮರಾಜನಿಗೆ ಕೇಳುವ ಮೂಲಕವಾಗಿ ಕಾದಂಬರಿಯನ್ನು ಕೊನೆಗೊಳಿಸುತ್ತಾರೆ.

ಹೀಗೆ ಕಾದಂಬರಿಯ ಪ್ರಾರಂಭ ಮತ್ತು ಕೊನೆಯಲ್ಲಿ ಬರುವ ಮರಣೋತ್ತರ ಸನ್ನಿವೇಶಗಳು ಪುರಾಣದ ಸನ್ನಿವೇಶಕ್ಕೆ ಸಂಬಂಧಿಸಿ ಬಂದಿರುವುದು ಬಿಟ್ಟರೆ ಅವೆರಡರ ನಡುವೆ ನಡೆಯುವ ಘಟನೆಗಳೆಲ್ಲ ವಾಸ್ತವದ ನೆಲೆಯಲ್ಲಿಯೆ ನಡೆಯುತ್ತದೆ. ಆದ್ದರಿಂದ ಈ ಕಾದಂಬರಿಯ 'ಶಿಲ್ಪ'ದಲ್ಲಿ ಕಾದಂಬರಿಕಾರರು ಪುರಾಣಗಳು ಮತ್ತು ಇಂದ್ರೀಯ ಜಗತ್ತಿನ ಜೋಡಣೆಗಳನ್ನು ಮಾಡಿರುತ್ತಾರೆ.

ಒಟ್ಟಿನಲ್ಲಿ ನೀತಿ ಎನ್ನುವುದು ನಿಜವನ್ನು ಆಶ್ರಯಿಸಿದೆಯೇ ಅಥವಾ ಸುಳ್ಳಿನ ಹಂದರದ ಮೇಲೆ ನಿಂತಿದೆಯೇ ಎಂಬ ಸಮಸ್ಯೆಯನ್ನು ಶೋಧಿಸುವ ಈ ಪ್ರಶ್ನೆಗೆ

ದಾರ್ಶನಿಕವೆನಿಸಬಹುದಾದ ಆಯಾಮವನ್ನು ಕೊಡುವ ಪ್ರಯತ್ನ ನಡೆದಿದೆ ಎಂದು ಹೇಳಬಹುದು.

ಕಾದಂಬರಿಯ 'ಶಿಲ್ಪ'ದ ದೃಷ್ಟಿಯಿಂದ ಮಂಜಯ್ಯನು ಪರ್ಯಾಯ ಮಾರ್ಗವನ್ನು ಹಿಡಿದು ಬಂದಿರುತ್ತಾನೆ. ಜಾನಕಮ್ಮ ಮತ್ತು ಅವಳ ಮಗಳು ಲತಾ. ಹೀಗೆ ತಾಯಿ ಮಗಳು ಇಬ್ಬರಿಗೂ ಲಗ್ಗೆ ಹಾಕುವುದು, ಎರಡು ಕಡೆಯೂ ಮಗಳು ಬಸುರಿಯಾಗುವಂತೆ ಕಾದಂಬರಿ ರಚನೆಗೊಂಡಿದೆ.

ಅಲ್ಲದೆ ಕಾದಂಬರಿಯಲ್ಲಿ ಬರುವ ಕೆಲವೊಂದು ಪಾತ್ರಗಳನ್ನು ಸಮಾನಾಂತರ ಗೆರೆಯಲ್ಲಿ ತರುವ ಪ್ರಯತ್ನ ಮಾಡುತ್ತಾರೆ. ಮಂಜಯ್ಯನ ಪಾತ್ರಕ್ಕೆ ಸಂವಾದಿಯಾಗಿ ಸತ್ಯಪ್ಪ, ಸಾವಿತ್ರಿಯ ಪಾತ್ರಕ್ಕೆ ಸಂವಾದಿಯಾಗಿ ಸರೋಜಾಕ್ಷಿ, ಪರಮೇಶ್ವರಯ್ಯನ ಪಾತ್ರಕ್ಕೆ ಸಂವಾದಿಯಾಗಿ ಮಂಡಿ ನಾಗಪ್ಪ ಹೀಗೆ ಪಾತ್ರಗಳನ್ನು ಚಿತ್ರಿಸುತ್ತಾನೆ.

ಕಾದಂಬರಿಯಲ್ಲಿ ಬಳಸಿಕೊಂಡಿರುವ ಯಮನ ತಂತ್ರವು ಕೂಡ ವಿಶೇಷವಾಗಿರುವುದು. ಈ ಕಾದಂಬರಿಯ ಪ್ರಾರಂಭ ಹಾಗೂ ಅಂತ್ಯ ಯಮ ಹಾಗೂ ಯಮಲೋಕದಿಂದಲೇ ಆಗಿದ್ದರೂ ಕೂಡ, ಯಮ ಹಾಗೂ ಯಮಲೋಕದ ವೈಭವದ ವರ್ಣನೆ ಇಲ್ಲಿಲ್ಲ. ಕಾದಂಬರಿಯ ಸಂದರ್ಭದಲ್ಲಿ ಬರೇ ಯಮನ ಧ್ವನಿಯನ್ನು ಮಾತ್ರ ಕೇಳಿಸುತ್ತಾರೆ ಹೊರತು ಯಮಧರ್ಮರಾಯನ ರೂಪವನ್ನು ಅಲ್ಲಿ ತರುವುದಿಲ್ಲ.

'ಸಾಕ್ಷಿ' ಕಾದಂಬರಿಯಲ್ಲಿ ಯಾವುದು ನಿಜ, ಯಾವುದು ಸುಳ್ಳು ಎಂಬ ವಿಶ್ಲೇಷಣೆಯೊಂದೇ ಅಲ್ಲ. ಯಾವುದು ತಪ್ಪು ಯಾವುದು ಸರಿ ಎಂಬುದನ್ನೂ ಬಿಡಿಸಲಾಗದಿರುವಂತೆ ರಚಿಸಿರುವುದೇ ಈ ಕಾದಂಬರಿಯ ವೈಶಿಷ್ಟ್ಯವಾಗಿದೆ.

## 'ಅಂಚು'–ಕಥನಕ್ರಿಯೆ.

ಎಸ್.ಎಲ್.ಭೈರಪ್ಪನವರ 'ಅಂಚು' ಮನೋವೈಜ್ಞಾನಿಕ ಕಾದಂಬರಿ. ವಿಕೃತ ಕಾಮದ ಸ್ವರೂಪವನ್ನು 'ಸಾಕ್ಷಿ' ಕಾದಂಬರಿಯಲ್ಲಿ ಚಿತ್ರಿಸಿರುವ ಕಾದಂಬರಿಕಾರರು, ಉದ್ದೇಶಪೂರ್ವಕವಾಗಿಯೇ ಈ ಕಾದಂಬರಿಯಲ್ಲಿ ಕಾಮದ ಇನ್ನೊಂದು ವಿಧದ ಸ್ವರೂಪವನ್ನು ಚಿತ್ರಿಸಲು ಪ್ರಯತ್ನಿಸಿರುವಂತೆ ಕಂಡುಬರುತ್ತದೆ. ದೈಹಿಕವಾದ ಆಕರ್ಷಣೆಗೆ ಸಂಬಂಧಪಟ್ಟಿರುವ 'ಸಾಕ್ಷಿ'ಯ ಕಾಮವು 'ಅಂಚು' ಕಾದಂಬರಿಯ ರಚನೆಯ ಸಮಯಕ್ಕೆ ಈ ಕಾಮವು ದೇಹದ ಮಟ್ಟವನ್ನು ದಾಟಿ ನಾಯಕ–ನಾಯಕಿಯರ ಅಂತರಂಗವನ್ನು ಪ್ರವೇಶ ಮಾಡುತ್ತದೆ. ಈ ಕಾದಂಬರಿಯ ನಾಯಕಿ ತಾನು ಬಯಸುವ ಅಗಾಧ ಪ್ರೀತಿಯ ಹಿನ್ನೆಲೆಯ ಕಾಮವನ್ನು ಪಡೆಯಲಾಗದೇ ಅದರ ಅತಿಯಾದ ಅಮಲಿನಲ್ಲಿ ತಾನು ಬಯಸಿದವನನ್ನು ಹಿಂಸೆಗೆ ಗುರಿ ಮಾಡುತ್ತಾ ಹೋಗುತ್ತಾಳೆ. ಇಲ್ಲಿಯ ನಾಯಕ ಸಹಿಸುತ್ತಾ ಹೋಗುತ್ತಿರುವಂತೆ ನಾಯಕಿ ತಣ್ಣಗಾಗಿ ಪ್ರೀತಿಯ ಆಗರವಾಗುತ್ತಾಳೆ. ಕಾಮವು ಈ ಕಾದಂಬರಿಯಲ್ಲಿ ಮಾನಸಿಕ ಮಟ್ಟವನ್ನು ತಲುಪಿ; ಮನೋವೈಜ್ಞಾನಿಕ ಕಾದಂಬರಿಯಾಗಿ ರಚನೆಗೊಂಡಿತು.

"ತನ್ನನ್ನು ಅವುಚಿಕೊಂಡ ಅನ್ಯಾಯಗಳನ್ನು ಎತ್ತಿ ಎಸೆಯುವ ಭಾವಶಕ್ತಿ ಇಲ್ಲದ ಮನಸ್ಸು ತನ್ನನ್ನು ತಾನೇ ನಾಶಮಾಡಿಕೊಳ್ಳುವ, ತನ್ನನ್ನು ಪ್ರೀತಿಸುವವರ ಮೇಲೆ ಕ್ರೌರ್ಯವನ್ನು ಎಸೆಯುವ ವಿಕೃತಿಗೆ ತಿರುಗಿರುವುದೇ 'ಅಂಚು'ವಿನ ವಸ್ತು. ಈ ಸ್ಥೂಲ ವಸ್ತುವಿನ ಹಂದರದಲ್ಲಿ ಸ್ಫುಟವಾಗಿ ನಿಲ್ಲುವ ಪಾತ್ರಗಳು ಮಾನವೀಯ ಸನ್ನಿವೇಶಗಳು ಹಾಗೂ ಮನಃ ಪ್ರವೃತ್ತಿಯ ಗುಹ್ಯಸ್ಥಾನಗಳಿಗೆ ಟಾರ್ಚ್ ಹಾಕಿ ತೋರಿಸುವ ತಂತ್ರ

ವಿಶ್ಲೇಷಣೆಗಳಿಂದ ಭೈರಪ್ಪನವರು ಈ ಕಾದಂಬರಿಯಲ್ಲಿ ಹೊಸದ್ರವ್ಯ ಹಾಗೂ ವಿಧಾನಗಳನ್ನು ಆವಿಷ್ಕರಿಸಿದ್ದಾರೆ"[೧].

'ಅಂಚು' ಕಾದಂಬರಿಯ ಪ್ರಧಾನ ಪಾತ್ರ ಡಾ. ಅಮೃತ. ಈಕೆ ಕಾಫಿ ಎಸ್ಟೇಟ್‌ನ ಯಜಮಾನಿ ಹಾಗೂ ಕಾಲೇಜೊಂದರಲ್ಲಿ ಕನ್ನಡ ಸಾಹಿತ್ಯದ ಉಪನ್ಯಾಸಕಿಯಾಗಿರುತ್ತಾಳೆ. ತೀರಾ ಚಿಕ್ಕಂದಿನಿಂದ ಈಕೆಯನ್ನು ನೋಡಿಕೊಂಡಿರುವ ಈಕೆಯ ಚಿಕ್ಕಮ್ಮ ನಯ ವಂಚನೆಯಲ್ಲಿ ಇವಳ ಆಸ್ತಿಯನ್ನು ಎತ್ತಿಹಾಕಿ ತನ್ನ ಸಂಸಾರಕ್ಕೆ ಸೇರಿಕೊಂಡಿದ್ದಲ್ಲದೆ, ಇವಳಿಗೆ ಅಷ್ಟೇನೂ ಅನುರೂಪನಲ್ಲದ ತನ್ನ ತಮ್ಮನ ಜೊತೆಗೆ ಮದುವೆಯನ್ನು ಮಾಡಿಸುತ್ತಾಳೆ. ಚಿಕ್ಕಮ್ಮನ ಮೋಸ–ಕುತಂತ್ರದಿಂದ ಅಮೃತಾಳ ಎಸ್ಟೇಟ್ ದೊಡ್ಡ ಸಾಲದ ಹೊರೆಯಲ್ಲಿರುತ್ತದೆ. ತನ್ನ ಎರಡನೆಯ ಮಗನ ಹುಟ್ಟು ಕೂಡ ಚಿಕ್ಕಮ್ಮನ ಕುತಂತ್ರದ ಪರಿಣಾಮವೇ ಎಂದರಿತ ಅಮೃತಾ ಮಾನಸಿಕ ಕುಸಿತಕ್ಕೆ ಸಿಕ್ಕಿ ನರಳುತ್ತಾಳೆ. ತನ್ನ ಗಂಡನನ್ನು ದೂರವಿರಿಸಿ ಮೈಸೂರಿನ ತನ್ನ ಹಳೆಯ ಮನೆಯಲ್ಲಿ ವಾಸಿಸಲು ತೊಡಗುತ್ತಾಳೆ. ಮಾನಸಿಕ ಖಿನ್ನತೆಯಿಂದಾಗಿ ಆಕೆ ಆಗಾಗ ಆತ್ಮಹತ್ಯೆಗೆ ಪ್ರಯತ್ನಿಸುತ್ತಿರುತ್ತಾಳೆ.

ಇಂತಹ ಸಂದರ್ಭದಲ್ಲಿ ಆಕೆಗೆ ಆರ್ಕಿಟೆಕ್ಟ್ ಸೋಮಶೇಖರನ ಪರಿಚಯವಾಗುವುದು. ಆತನಲ್ಲಿ ಆಕರ್ಷಣೆ ಉಂಟಾಗುವುದು. ಈ ಆಕರ್ಷಣೆಯು ದೈಹಿಕ ಸುಖವನ್ನು ಮೀರಿರುವಂತಹದು. ಈಗಾಗಲೇ ಎರಡು ಮಕ್ಕಳ ತಾಯಿ ಆಗಿರುವ ಅಮೃತಾ ಹಾಗೂ ಈಗಾಗಲೇ ಹೆಣ್ಣೊಬ್ಬಳಿಂದ ಸಂಪೂರ್ಣವಾದ ಪ್ರಣಯದ ಸುಖವನ್ನು ಅನುಭವಿಸಿಯಾಗಿರುವ ಸೋಮಶೇಖರ ಇವರಿಬ್ಬರ ಪ್ರೇಮ ಕಾಮ ಸ್ವರೂಪದಲ್ಲ, ಬಾಹ್ಯವಾದುದಲ್ಲ ಆತಂಕವಾದುದು. ಪ್ರಣಯದ ಇನ್ನೊಂದು ಮಗ್ಗುಲಿನಲ್ಲಿರುವ ಪ್ರೀತಿಯನ್ನು ಅದರ ಗಹನತೆಯನ್ನು ಶೋಧಿಸುವ ಸಲುವಾಗಿ. ಈ

---

[೧] 'ಅಂಚು' ಮುನ್ನುಡಿ. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೯೦.

ಎರಡು ಪಾತ್ರಗಳ ನಡುವೆ ಅಗಾಧ ಹಾಗೂ ಸಹಜವಾದ ಪ್ರೀತಿ ಇದೆ. ವ್ಯಾಕುಲತೆ ಜವಾಬ್ದಾರಿ ಇದೆ. ಇದರಿಂದಾಗಿಯೇ ಸಹಜ ಪ್ರೀತಿಯಿಂದ ವಂಚಿತಳಾದ ಅಮೃತಾ ಮನೋರೋಗಿಯಾಗಿ ಆಗಾಗ ಆತ್ಮಹತ್ಯೆಗೆ ಪ್ರಯತ್ನಿಸುತ್ತಿದ್ದ ಆಕೆಯ ಜೀವನಕ್ಕೆ ಅರ್ಥಕೊಡಬಲ್ಲೆನಾದರೆ ಮಾತ್ರ ತನ್ನ ಜೀವನಕ್ಕೆ ಅರ್ಥವೆಂದು ಸೋಮಶೇಖರ ತಿಳಿಯುತ್ತಾನೆ. ಆದ್ದರಿಂದಲೇ ಇಲ್ಲಿ ಡಾ। ಅಮೃತಳ ಕ್ರೌರ್ಯ-ದ್ವೇಷಗಳನ್ನು ಸೋಮಶೇಖರ ಮೌನವಾಗಿ ಸಹಿಸುತ್ತಾ ಹೋಗುತ್ತಾನೆ.

'ಅಂಚು'ವಿನ ಕಥಾಹಂದರ ಮತ್ತು ಕಥೆಯ ನಡೆಯನ್ನು ಹಲವು ಅಂಚುಗಳು ನಿಯಂತ್ರಿಸುತ್ತವೆ-

i. ತನ್ನ ವೈಯಕ್ತಿಕ ಬದುಕಿನ ಸಂಕಷ್ಟ, ಅಡ್ಡಿ ಆತಂಕಗಳನ್ನು ಮೀರಿ ಅಮೃತಾ ಶೈಕ್ಷಣಿಕ ಪರಿಣತಿ, ಬೌದ್ಧಿಕ ಪ್ರಬುದ್ಧತೆಯಿಂದ ಸಾಧನೆಯ ಅಂಚನ್ನು ತಲುಪುವುದು.

ii. ಚಿಕ್ಕಮ್ಮನ ಸ್ವಾರ್ಥ-ವಂಚನೆಗಳು, ತಾನು ಕಲ್ಪಿಸಿಕೊಂಡಿದ ಭ್ರಾಮಕ ಪ್ರೀತಿಸೌಧವನ್ನು ಕೆಡವಿದಾಗ ಮನೋವೈಕಲ್ಯದ ಅಂಚನ್ನು ತಲುಪುತ್ತಾಳೆ.

iii. ಅಂತರಂಗವನ್ನು ವರಿಸಿದ ಶೂನ್ಯ ಭಾವಿ ಸುಳಿಸುಳಿಯಾಗಿ ಸುತ್ತಿ ಹೆಡೆಯೆತ್ತಿ ಮರಣೇಚ್ಛೆಯ ಪ್ರಪಾತಕ್ಕೆ ತುಳಿದಾಗ ಸಾವಿನ ಅಂಚನ್ನು ಮುಟ್ಟಿ ಮುಟ್ಟಿ ಬರುತ್ತಾಳೆ.

iv. ತನ್ನ ಅಸ್ತಿತ್ವವನ್ನೇ ಆವರಿಸಿಕೊಂಡಿರುವ ಸೋಮುವಿನ ಪ್ರೀತಿಯನ್ನು ಒಂದೇ ಹದದಲ್ಲಿ ಸಂಸ್ಥಾಪಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಪ್ರೀತಿ-ದ್ವೇಷ, ಹಿಂಸೆ, ಕ್ರೌರ್ಯ, ಅಸಹನೆ, ಆತ್ಮನಿಂದೆ, ಪಾಪಪ್ರಜ್ಞೆ, ಆತ್ಮಮರುಕ, ತನ್ನ ಮತ್ತು ತಾನು

ಪ್ರೀತಿಸಿದವನ ಮೇಲೆ ಪ್ರಯೋಗಿಸಿಕೊಳ್ಳುವ ಕ್ರೌರ್ಯಗಳನ್ನು ಹಾದು ಬಂದು ಪ್ರೀತಿಯ ನಿಜಸತ್ಯ, ಸತ್ಯದ ಸಾಕ್ಷಾತ್ಕಾರದ ಅಂಚನ್ನು ತಲುಪುತ್ತಾಳೆ. ಹೀಗೆ ಅಮೃತಾ ಮತ್ತು ಸೋಮು ತಮ್ಮ ಸಂಬಂಧಗಳಲ್ಲಿ ಸಂಪೂರ್ಣ ಸಿದ್ಧಿಯ ಘಟ್ಟವನ್ನು, ಅಂಚನ್ನು ಹೇಗೆ ತಲುಪುತ್ತಾರೆಂಬುದರಲ್ಲಿ ಕಾದಂಬರಿಯ ನಡೆ ಮತ್ತದರ ಸೊಬಗು ಅಡಗಿವೆ.

ಮನುಷ್ಯನ ಮನುಸ್ಸನ್ನು ಆವರಿಸಿ ಆಳುವ ವಿಭಿನ್ನ ಭಾವಗಳು ಈ ಕೃತಿಯ ಉದ್ದಕ್ಕೂ ಸಮಕೋನ ತ್ರಿಭುಜದ ರಚನೆಯ ರೂಪದಲ್ಲಿ ಮೂಡಿಬಂದಿವೆ. ಜೀವನಪ್ರೀತಿ–ಜೀವನದ್ವೇಷ, ಮೃತ್ಯುಮೋಹ, ಅಧಿಕಾರ–ಪ್ರೀತಿ–ಶರಣಾಗತ ಭಾವ, ಸ್ವಾರ್ಥ–ದ್ರೋಹ–ಸುಳ್ಳು–ಇಂತಹ ಅನೇಕ ಭಾವನಾತ್ಮಕ ಸಮಕೋನ ತ್ರಿಭುಜಗಳ ರಚನೆಯನ್ನು ಕಾದಂಬರಿಯ ಸಂರಚನೆಯಲ್ಲಿ ಕಾಣಬಹುದು.

ಅತ್ಯಂತ ಕಿರಿದಾದ ಕಥಾ ಹಂದರವನ್ನು ಹೊಂದಿರುವ ಈ ಕಾದಂಬರಿಯು ಕೇವಲ ೨ ಪ್ರಮುಖವಾದ ಪಾತ್ರಗಳ ಮೂಲಕ ನಿರ್ಮಿತವಾಗಿದೆ. ಕಾದಂಬರಿಯಲ್ಲಿ ಪರಸ್ಪರ ಆಕರ್ಷಣೆ–ವಿಕರ್ಷಣೆಗಳಿಗೆ ಒಳಗಾದ ಈ ಎರಡು ಪಾತ್ರಗಳು ಯಾವ ಒಂದು ಕೇಂದ್ರದಲ್ಲಿಯೂ ನಿಲ್ಲುವುದಿಲ್ಲ. ಈ ಎರಡು ಪಾತ್ರದ ನಡುವೆ ಘಟಿಸುವ ಪ್ರೇಮ–ದ್ವೇಷ, ಹಿಂಸೆ–ಕ್ರೌರ್ಯ, ಅನುಕಂಪ ಇವುಗಳು ಒಂದರ ಹಿಂದೆ ಇನ್ನೊಂದು ಸಂಭವಿಸುತ್ತಾ ಬಂದು ಎಲ್ಲಿಯೂ ನಿಲ್ಲದೇ ಸಾಗುತ್ತದೆ. ಕಾದಂಬರಿಯ

ಹಂದರವನ್ನು ಕಿರಿದಾಗಿರಿಸಿ ಆಳವನ್ನು ಹೆಚ್ಚಾಗಿರಿಸಿರುವುದು ಕಾದಂಬರಿಕಾರರ ಕೌಶಲ್ಯಪೂರ್ಣವಾದ ಬರವಣಿಗೆಗೆ ಒಂದು ನಿದರ್ಶನವೆಂದು ಹೇಳಬಹುದು.[೨]

'ಅಂಚು' ಕಾದಂಬರಿಯ ಸಂವಿಧಾನವು ವ್ಯವಸ್ಥಿತವಾಗಿಲ್ಲ. ಇಲ್ಲಿ ಬರುವ ಪೂರ್ವಕತೆ ಮತ್ತು ಉತ್ತರಕತೆ ವಾಸ್ತವದಲ್ಲಿ ನಿರೂಪಿತವಾಗಿದ್ದು ನಡುವಿನ ನಿರೂಪಣೆ ಮಾನಸಿಕ ಪಾತಳಿಯಲ್ಲಾಗಿದೆ. ಕಾದಂಬರಿಯಲ್ಲಿ ಕೇಂದ್ರ ವಿಷಯವಾಗಿ ವೈಯಕ್ತಿಕ ಬದುಕು, ಆ ಬದುಕಿನ ತೊಡಕುಗಳು ಹಾಗೂ ಅನುಭವಗಳನ್ನು ತರುತ್ತಾರೆ. ವೈಯಕ್ತಿಕ ಅನುಭವಗಳನ್ನು ಅತ್ಯಂತ ನೈಜವಾಗಿ ಗಂಭೀರವಾಗಿ ಶೋಧಿಸಲು ತೊಡಗಿರುವ ಕಾದಂಬರಿಕಾರರು ವ್ಯಕ್ತಿಯ ಮಾನಸಿಕ ಪ್ರಜ್ಞೆಯನ್ನು ಹಂತ- ಹಂತವಾಗಿ ವಿಶ್ಲೇಷಿಸಲು ತೊಡಗಿರುತ್ತಾರೆ.

ಒಟ್ಟಂದದಲ್ಲಿ ಹೇಳುವುದಾದರೆ ಮಾನವ ಸಂಬಂಧಗಳ ನಿಗೂಢತೆಯನ್ನು, ಜಟಿಲ ಅನುಭವಗಳನ್ನು ಆಳವಾಗಿ ವಿಶ್ಲೇಷಿಸುವ 'ಕಥನಶಿಲ್ಪ'ದ ಕಾದಂಬರಿ 'ಅಂಚು'. ಸಾವಿನ ಅಂಚಿನಿಂದ ಬದುಕನ್ನು ವಿಶ್ಲೇಷಿಸುವ ಪ್ರಯತ್ನ ಇಲ್ಲಿ ನಡೆದಿದೆ. ಎಂದರೆ ವ್ಯಕ್ತಿ ತಾನೇ ನಿರ್ಮಿಸಿಕೊಂಡ ತನ್ನ ಕವಚದಿಂದ ಹೊರಗೆ ಬಂದು, ಇನ್ನೊಬ್ಬರೊಡನೆ ಅರ್ಥಪೂರ್ಣ ಸಂಬಂಧವನ್ನು ಸ್ಥಾಪಿಸಿದಾಗ ಬದುಕಿಗೊಂದು ಹೊಸ ಅರ್ಥ, ಹೊಸ ಆಯಾಮ ಬರುತ್ತವೆ. ಈ ಕಾದಂಬರಿಯಲ್ಲಿ ಎರಡು ಪಾತ್ರಗಳು ಕೃತಿಯ ಕೊನೆಯಲ್ಲಿ ತಮ್ಮ ವ್ಯವಹಾರ ಸಂಪತ್ತನ್ನೆಲ್ಲಾ ತೊರೆದು ಪರಸ್ಪರ ಜವಾಬ್ದಾರಿಯನ್ನು ಒಪ್ಪಿಕೊಂಡು ಬದುಕಿಗೆ ಹೊಸ ಆಯಾಮವನ್ನು ತೆರೆದುಕೊಳ್ಳುವಂತೆ ಕಾದಂಬರಿಯು ರಚನೆಗೊಂಡಿದೆ.

---

[೨] 'ಪರ್ವ' ಕಾದಂಬರಿಯ ನಂತರದ ಕಾದಂಬರಿಗಳಲ್ಲಿ ಒಂದೆರಡು ಪಾತ್ರಗಳ ಸುತ್ತ ಇಡೀ ಕೃತಿಯ ಹೆಣೆಯಲ್ಪಟ್ಟಿರುವುದನ್ನು ಕಾಣಬಹುದಾಗಿದೆ.

## ‘ತಂತು’–ಕಥನಕ್ರಿಯೆ.

ಎಸ್.ಎಲ್.ಭೈರಪ್ಪನವರ ಅತಿದೊಡ್ಡ ಕಾದಂಬರಿ ‘ತಂತು’. ಸುಮಾರು ೯೦೯ ಪುಟಗಳನ್ನು ಹೊಂದಿರುವ ಈ ಕಾದಂಬರಿಯಲ್ಲಿ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಉಂಟಾಗಿರುವ ಎಲ್ಲ ಮೌಲ್ಯಗಳ ಅಧಃ ಪತನದ ವಾಸ್ತವ ಚಿತ್ರ ನಿರೂಪಿತಗೊಂಡಿದೆ. ದೆಹಲಿಯನ್ನು ಕೇಂದ್ರವಾಗಿಟ್ಟುಕೊಂಡು ರಚಿತವಾದ ಕೃತಿ ಇದು. ಎಸ್.ಎಲ್.ಭೈರಪ್ಪನವರು ‘ಪರ್ವ’ ಕಾದಂಬರಿಯ ಮೂಲಕ ಪ್ರಾಚೀನ ಮಹಾಭಾರತವನ್ನು ಚಿತ್ರಿಸಿದರೆ ‘ತಂತು’ ಕಾದಂಬರಿಯ ಮೂಲಕ ಆಧುನಿಕ ಸ್ವತಂತ್ರ ಭಾರತವನ್ನು ಚಿತ್ರಿಸುತ್ತಾರೆ.

ವಿಶಾಲವಾದ ವಿಸ್ತೃತವಾದ ವಸ್ತು ಆಯ್ಕೆ ಮಾಡಿಕೊಂಡಿರುವ ಕಾದಂಬರಿಕಾರರು ಕಾದಂಬರಿಯ ರಚನೆಯಲ್ಲಿ ಬಹುದೊಡ್ಡ ಕ್ಯಾನ್‌ವಾಸ್‌ನ್ನು ಆರಿಸಿಕೊಂಡಿದ್ದಾರೆ. ಸ್ವತಃ ಕಾದಂಬರಿಕಾರರೇ ತಮ್ಮ ಕಾದಂಬರಿಯ ವಸ್ತುವೈಶಾಲ್ಯದ ಬಗೆಗೆ ಹೀಗೆ ಹೇಳಿಕೊಂಡಿರುವರು. “ತನ್ನೂರು ಬಸವನಪುರದ ಚೆನ್ನಕೇಶವ ದೇವಾಲಯದಲ್ಲಿದ್ದ ದೊಡ್ಡ ಸರಸ್ವತಿ ವಿಗ್ರಹಗಳನ್ನು ಕಳ್ಳಸಾಗಾಣಿದಾರರು ಮಾಯ ಮಾಡಿದ್ದಾರೆಂಬ ಸುದ್ದಿ ತಿಳಿದ ಪತ್ರಿಕಾ ಸಂಪಾದಕ ರವೀಂದ್ರ ಅಲ್ಲಿಗೆ ಹೋಗುತ್ತಾನೆ. ಅಲ್ಲಿಂದ ಆರಂಭವಾಗಿ ಇಡೀ ಸ್ವಾತಂತ್ರ್ಯೋತ್ತರ ಭಾರತದ ನಾಡಿಯ ಕಥೆಯು ಬೆಳೆಯುತ್ತದೆ. ಬೆಂಗಳೂರು, ಬಸವನಪುರ, ಜೋಗಿಹಳ್ಳಿ, ಮೈಸೂರು, ದಿಲ್ಲಿ, ಬನಾರಸ್, ಪಟ್ನಾ, ಕಲ್ಕತ್ತಾ. . . . ಸಂಗೀತ, ಶಿಕ್ಷಣ, ವೃತ್ತಪತ್ರಿಕೆ, ಉದ್ಯಮ ನಿರ್ಯಾತ ಮೊದಲಾದ ವ್ಯಾಪ್ತಿಗಳಿಗೆ ಪಾತ್ರಗಳ ಸ್ವಂತ ಅನುಭವದ ಮೂಲಕ ಜೀವಕೊಟ್ಟು, ಆಕಾರದ ಐಕ್ಯವನ್ನು

ಸಾಧಿಸಿ ಈ ಕಾದಂಬರಿಯು ಸಮಕಾಲೀನ ವಸ್ತುವನ್ನು ಕಲೆಯಾಗಿಸುವ ನಿರ್ಲಿಪ್ತಿಯನ್ನು ಪಡೆದಿದೆ."[೧]

ಹೀಗೆ ವಿಶಾಲವಾದ ವ್ಯಾಪ್ತಿಯನ್ನು ಹೊಂದಿರುವ 'ತಂತು' ಕಾದಂಬರಿಯಲ್ಲಿ ಮೂರು ತಲೆಮಾರಿನ ಕಥೆ ಚಿತ್ರಿತವಾಗಿರುವುದು 'ಕಥನಶಿಲ್ಪ'ದ ದೃಷ್ಟಿಯಿಂದ ಗಮನಿಸಬೇಕಾದ ಪ್ರಮುಖ ಅಂಶವಾಗಿದೆ. ಮೊದಲನೆಯ ತಲೆಮಾರಿನ ಕಥೆಯು ನೆನಪುಗಳ ಮೂಲಕ ಕಾದಂಬರಿಯಲ್ಲಿ ಬಂದರೆ, ರವೀಂದ್ರ ಹಾಗೂ ಅವನ ಮಗ ಅನೂಪ್‌ನ ಕತೆಯು ಎರಡು ತಲೆಮಾರಿನ ಸಂಘರ್ಷ -ದೀರ್ಘ ಕಥೆಯಾಗಿ ಕಾದಂಬರಿಯಲ್ಲಿ ಪ್ರಧಾನವಾಗಿ ಚರ್ಚಿತವಾಗಿದೆ. ಈ ಕಾದಂಬರಿಯಲ್ಲಿ ೨ ಆಶಯಗಳಿವೆ. ೧. ಕಳುವು, ೨. ಮಾರಾಟ. ಇವೆರಡೂ ನಮ್ಮ ಆಧುನಿಕ ಭಾರತದಲ್ಲಿ ಕಾಣಿಸುವಂತಹ ೨ ಗುಣಗಳು ಹಾಗೂ ನಮ್ಮನ್ನು ಕಾಡುತ್ತಾ ಇರುವಂತಹ ೨ ಸಮಸ್ಯೆಗಳು. ಹೀಗೆ ನಮ್ಮ ದೇಶದ ಒಳವ್ಯವಸ್ಥೆಯ ಸಮರ್ಥ ಚಿತ್ರಣವನ್ನು 'ತಂತು'ವಿನಲ್ಲಿ ನಿರೂಪಿಸಲಾಗಿದೆ.

ಈ ಕಾದಂಬರಿಯಲ್ಲಿ ವ್ಯಕ್ತಿ-ಕುಟುಂಬ ದೇಶದಲ್ಲಾಗುತ್ತಿರುವ ಬದಲಾವಣೆಗಳು, ಬಸವನಪುರ ಹಳ್ಳಿಯಿಂದ ದೇಶದ ರಾಜಧಾನಿ ದಿಲ್ಲಿಯವರೆಗಿನ ವಿದ್ಯಮಾನಗಳು ವಿದೇಶಿ ಆಡಳಿತದಿಂದ ಮುಕ್ತಗೊಂಡ ಸ್ವತಂತ್ರ ಭಾರತದಲ್ಲಿ ದೇಶಿಯ ಆಡಳಿತದಲ್ಲಿ ಜನರು ಪುನಃ ಸ್ವಾತಂತ್ರ್ಯ ಕಳೆದುಕೊಳ್ಳುವ ಸ್ಥಿತಿಗೆ ಬಂದು ತಲುಪಿದ ರಾಜಕೀಯ ದುರಂತ, ಕೇವಲ ಹಣ-ಅಧಿಕಾರವೇ ಮಾನ್ಯತೆ ಪಡೆದ ಕಾರಣ ಉಂಟಾದ ನೈತಿಕ ಅಧಃಪತನ, ಜಾತೀಯತೆಯ ಹಾವಳಿ, ಭ್ರಷ್ಟತೆ ತನ್ನ ಸಂಸ್ಕೃತಿ-ಪರಂಪರೆಯ ಬಗ್ಗೆ ಅರಿವಿಲ್ಲದ, ಹೆಮ್ಮೆಯಿಲ್ಲದ, ಕಾಳಜಿ ಇಲ್ಲದ ಜನತೆ, ವಿದೇಶಿ ವ್ಯಾಮೋಹ, ಮನುಷ್ಯನ ಸಣ್ಣತನ, ದುಷ್ಟತೆ, ಇವುಗಳ ನಡುವೆ ತಮ್ಮ ಆದರ್ಶಗಳನ್ನು,

---

[೧] 'ತಂತು'- ಮುನ್ನುಡಿ. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೯೩.

ಜೀವನ ಮೌಲ್ಯಗಳನ್ನು ತಮ್ಮ ಕನಸುಗಳನ್ನು ಒಳ್ಳೆಯತನವನ್ನು ಉಳಿಸಿಕೊಳ್ಳಲು ಹೋರಾಡಬೇಕಾಗಿ ಬಂದ, ಹೆಣಗಬೇಕಾಗಿ ಬಂದ, ಅಸಹಾಯಕರು ಇವುಗಳೆಲ್ಲಾ 'ತಂತು'ವಿನ 'ಕಥನಶಿಲ್ಪ'ದಲ್ಲಿ ಬಹು ವಿಸ್ತೃತವಾಗಿ ಚರ್ಚಿತವಾಗಿದೆ. ಈ ಕಾದಂಬರಿಯಲ್ಲಿ ಬರುವ ಒಂದೊಂದು ಪಾತ್ರಗಳು ಕೂಡ ಒಂದೊಂದು ಮೌಲ್ಯವನ್ನು ಪ್ರತಿಪಾದಿಸುವಂತೆ 'ಕಥನಶಿಲ್ಪ'ವನ್ನು ಹೆಣೆಯಲಾಗಿದೆ. 'ತಂತು'ವಿನಲ್ಲಿ ಭೈರಪ್ಪನವರು ಅತ್ಯಂತ ನಿರ್ಲಿಪ್ತತೆಯಿಂದ ಇದ್ದುಕೊಂಡು ಕಥೆಯನ್ನು ಹೇಳಿಕೊಂಡು ಸಾಗಿರುವುದು ಕಥನ ದೃಷ್ಟಿಯಿಂದ ವಿಶಿಷ್ಟವೆನಿಸಿದೆ. ಅಂದರೆ ಇಡೀ ಕಾದಂಬರಿಯಲ್ಲಿ ಲೇಖಕರ ನೆರಳು ಕಾಣಿಸದಿರುವುದು, ಜೊತೆಗೆ ಪಾತ್ರಗಳನ್ನು ಕೈಹಿಡಿದು ನಡೆಸದೇ ಆದಷ್ಟು ಸಹಜವಾಗಿ ಬೆಳೆಯಲು ಬಿಟ್ಟ ಕಥನದಲ್ಲಿ ನಿರ್ಲಿಪ್ತತೆಯನ್ನು ಸಾಧಿಸಿರುತ್ತಾರೆ.

ಸ್ವಾತಂತ್ರ್ಯೋತ್ತರದ ಭಾರತೀಯ ವಿದ್ಯಮಾನಗಳನ್ನು ರಾಜಕೀಯ, ಸಾಮಾಜಿಕ, ನೈತಿಕ, ಶೈಕ್ಷಣಿಕ, ಆಧ್ಯಾತ್ಮಿಕ ದೃಷ್ಟಿಯಿಂದ ಆಳವಾಗಿ ಅಧ್ಯಯನ ನಡೆಸಿ ಆಧರಿಸಿ ರಚಿಸಿರುವ ಕೃತಿ 'ತಂತು'. ಕಾದಂಬರಿಕಾರರು ಪತ್ರಿಕೋದ್ಯಮ ಶಿಕ್ಷಣ, ರಾಜಕಾರಣ, ಗ್ರಾಮಜೀವನದ ಆದರ್ಶಗಳು ಹೇಗೆ ಅವಮಾನಗೊಳ್ಳುತ್ತಿವೆಯೆಂಬುದನ್ನು ಅತ್ಯಂತ ವ್ಯಾಪಕವಾಗಿ ನಿರೂಪಿಸಿರುತ್ತಾರೆ.

'ತಂತು' ಕಾದಂಬರಿಯು ನಿಷ್ಠೆ, ಪ್ರಾಮಾಣಿಕ, ಆದರ್ಶ ಪತ್ರಿಕೋದ್ಯಮಿ ರವೀಂದ್ರನ ಪಾತ್ರದೊಂದಿಗೆ ಆರಂಭಗೊಂಡು ಇಡೀ ರಾಷ್ಟ್ರದ ಸಮಗ್ರ ಪರಿಸ್ಥಿತಿಯನ್ನು ಸಮರ್ಥವಾಗಿ ಪ್ರತಿಬಿಂಬಿಸುವ ಇತರ ಪಾತ್ರಗಳು ಒಂದೊಂದೇ ತಂತುಗಳು ಒಟ್ಟಿಗೆ ಸೇರಿ ಗಟ್ಟಿಯಾದ ವಸ್ತ್ರವಾಗುವಂತೆ, ವೈವಿಧ್ಯಮಯ ಪಾತ್ರ, ಸನ್ನಿವೇಶಗಳು ಒಂದಕ್ಕೊಂದು ಪೂರಕವಾಗಿ ದೊಡ್ಡದೊಂದು ಜಾಲವನ್ನೇ ನಿರ್ಮಿಸಿಕೊಂಡಂತೆ ರಚನೆಗೊಂಡಿದೆ. ಹೀಗಾಗಿ 'ತಂತು'ವಿನ ಕಥನ ಶಿಲ್ಪ ಕಳೆಗಟ್ಟಿದೆ.

೨೭ ಅಧ್ಯಾಯಗಳಲ್ಲಿ ನಿರೂಪಿಸಲ್ಪಟ್ಟಿರುವ ಈ ಕಾದಂಬರಿಯ ವಸ್ತು ಸ್ವಾತಂತ್ರ್ಯೋತ್ತರ ಭಾರತದ, ಅದರಲ್ಲೂ ಇಂದಿರಾಗಾಂಧಿ ಕಾಲದ ರಾಜಕೀಯ, ಸಾಂಸ್ಕೃತಿಕ, ಶೈಕ್ಷಣಿಕ, ಸಂಗೀತ, ಪ್ರತಿಕೋದ್ಯಮ, ಉದ್ಯಮ ಮುಂತಾದ ಸಮಕಾಲೀನ ತಂತುಗಳನ್ನೊಳಗೊಂಡಿದೆ. ಗಾಂಧೀವಾದ ಮತ್ತು ಇಂದಿರಾವಾದಗಳ ನಡುವಿನ ಸಂಘರ್ಷ ಚಿತ್ರಿತಗೊಂಡಿದೆ. ಗಾಂಧೀವಾದದ ಶಿಸ್ತು, ಸಂಯಮ, ತಾಳ್ಮೆ, ಅಹಿಂಸೆ, ಸತ್ಯ ವಿನಯ, ನಿರಾಡಂಬರತೆ, ದೇಶಪ್ರೇಮ, ಗ್ರಾಮೀಣಾವೃದ್ಧಿ ಸ್ವಾವಲಂಬನೆ, ಗೃಹಕೈಗಾರಿಕೆ, ವೃತ್ತಿ ಶಿಕ್ಷಣ, ಪ್ರಾಥಮಿಕ ಹಂತದಲ್ಲಿ ಮಾತೃಭಾಷೆಯ ಮೂಲಕ ಶಿಕ್ಷಣ ಮುಂತಾದ ಆದರ್ಶಗಳು ನೆಹರೂನ ಕಾಲದಲ್ಲಿ ಅಲ್ಪಪ್ರಮಾಣದಲ್ಲಿ ಹಿಸುಕಲ್ಪಟ್ಟು ಮೋಸ, ವಂಚನೆ, ಹಿಂಸೆ, ಜಾತಿ ರಾಜಕೀಯ, ರಾಜಕೀಯ ಗುಂಡಾಗಿರಿ, ಭ್ರಷ್ಟಾಚಾರ, ದೇಶದ್ರೋಹತನ, ಅಪ್ರಮಾಣಿಕತೆ, ಸಂಗ್ರಹಬುದ್ಧಿ, ಪ್ರಜಾಪ್ರಭುತ್ವದ ಹೆಸರಿನಲ್ಲಿ ಸರ್ವಾಧಿಕಾರತ್ವಗಳು ತಾಂಡವಾಡುತ್ತಿದ್ದುದು ಗಮನಾರ್ಹ. ಈ ಹಿನ್ನೆಲೆಯಲ್ಲಿ ಇಲ್ಲಿಯ ಪಾತ್ರಗಳೆಲ್ಲ ಜೀವತಳೆದಿವೆ. ಕಾಲ್ಪನಿಕ ಪಾತ್ರಗಳೊಂದಿಗೆ ಐತಿಹಾಸಿಕ, ರಾಜಕೀಯ ವ್ಯಕ್ತಿಗಳಾದ ನೆಹರು, ಇಂದಿರಾಗಾಂಧಿ, ಸಂಜಯಗಾಂಧಿ, ಮೋರಾರ್ಜಿ ದೇಸಾಯಿ, ಅಟಲ್‌ಬಿಹಾರಿ ವಾಜಪೇಯಿ, ಲಾಲಕೃಷ್ಣ ಅಡ್ವಾನಿ, ಜಾರ್ಜ್‌ಫರ್ನಾಂಡೀಸ್ ಮುಂತಾದವರು ಪ್ರಸ್ತಾಪಗೊಳ್ಳುವಂತೆ ಕಾದಂಬರಿಯ ಶಿಲ್ಪವು ರಚಿತಗೊಂಡಿದೆ.

ಭಾರತೀಯ ಪರಂಪರೆಯ ಸಂಸ್ಕೃತಿ, ಕಲೆ, ರಾಜಕೀಯ ಧೋರಣೆಗಳು, ನೈತಿಕ ಮೌಲ್ಯಗಳು, ಪಾತ್ರಗಳೊಡನೆ ಅಂತರ್ಗತವಾಗಿ ಜೀವಂತ ಚಿತ್ರಗಳಾಗುತ್ತವೆ. ಈ ಕಾದಂಬರಿಯ ಕಥಾನಾಯಕನಾದ ಪತ್ರಕರ್ತ ರವೀಂದ್ರನ ಪಾತ್ರದ ಮೂಲಕ ಪತ್ರಿಕೋದ್ಯಮದ ಧ್ಯೇಯ, ಉನ್ನತ ಆದರ್ಶಗಳು, ಪತ್ರಿಕೋದ್ಯಮದ ಮೇಲೆ ಸರಕಾರದ ಹಿಡಿತಗಳು, ವೃತ್ತಿವೈಷಮ್ಯಗಳು, ಒಳತಂತ್ರಗಳು ಮುಂತಾದ ಸೂಕ್ಷ್ಮ ವಿಷಯಗಳ ಮೇಲೆ ಪ್ರಖರವಾದ ಬೆಳಕನ್ನು ಕಾದಂಬರಿಕಾರರು ಚೆಲ್ಲುತ್ತಾರೆ.

ಪತ್ರಿಕಾಧರ್ಮ, ಪತ್ರಿಕಾ ಸ್ವಾತಂತ್ರ್ಯಗಳು ಪ್ರಜಾಪ್ರಭುತ್ವದ ಮೌಲ್ಯಗಳೇ ಆದರೂ ನೆಹರೂ ಆಳ್ವಿಕೆಯಲ್ಲಿಯೇ ಅದಕ್ಕೆ ಪೆಟ್ಟು ಬಿದ್ದಿತು. ಇಂದಿರಾ ಗಾಂಧಿ ಕಾಲಕ್ಕಂತೂ ಅದು ಮಿತಿ ಮೀರಿತು. ತುರ್ತುಪರಿಸ್ಥಿತಿಯಲ್ಲಿ ಶಿಖರಕ್ಕೇರಿತು. ಅದರ ನೇರವಾದ ಪರಿಣಾಮ ಪ್ರಾಮಾಣಿಕ ಹಾಗೂ ಸ್ವತಂತ್ರ ಮನೋಭಾವ ಪತ್ರಕರ್ತರ ಮೇಲಾಯಿತು. "ಭಾರಿ ಭಾರಿ ಉದ್ಯಮಿಗಳೆಲ್ಲಾ ಆದಿಶಕ್ತಿಯ ಕಡೆಗಿದ್ದಾರೆ. ಬ್ಯಾಂಕುಗಳನ್ನು ಸರ್ಕಾರೀಕರಣ ಮಾಡಿದ ಹಾಗೆ ತಮ್ಮ ಉದ್ಯಮಗಳನ್ನೂ ಆಯಮ್ಮ ಎತ್ತಿ ಬಾಯಿಗೆ ಹಾಕ್ಕಂಡು ಬಿಟ್ಟರೆ ತಮ್ಮ ಗತಿ ಏನು ಅನ್ನೂ ಭಯದಿಂದ, ವೃತ್ತಪತ್ರಿಕೆ ಮಾಲೀಕರಿಗೂ ಅದೇ ಭಯ. ಇನ್ನು ನಿಜ ಬರೆದರೆ ಪ್ರಿಂಟ್ ಮಾಡೋನು ಯಾರು? ಈ ಮಾತು ನ್ಯೂಸ್ ಎಡಿಟರಾಗಿದ್ದ ನನ್ನ ಮೇಲೆ ಎಸೆದ ವೃತ್ತಿಯ ಸವಾಲ್ ಎನ್ನಿಸಿಬಿಟ್ಟಿತು. ಹಾಗೆಂದು ನೀನು ಏನಾದರೂ ಬರೆ. ಅದು ಸತ್ಯವಾಗಿರುವ ತನಕ, ಅಚ್ಚು ಮಾಡುವ ಆಶ್ವಾಸನೆಯನ್ನು ನಾನು ಕೊಡುತ್ತೇನೆ ಎನ್ನುವ ನೈತಿಕ ವೀರತನದ ಮಾತು ನನ್ನಿಂದ ಉಕ್ಕಿ ಬರಲಿಲ್ಲ".[೨]

ಅನೂಪನ ನೆಪದಲ್ಲಿ ಮಾಂಸಾಹಾರಕ್ಕೆ ಸಂಬಂಧಿಸಿ, ಕಾಂತಿಯ ನೆಪದಲ್ಲಿ ಭಾಷೆಗೆ ಸಂಬಂಧಿಸಿ ಸ್ವಾತಂತ್ರ್ಯೋತ್ತರ ನಂಬಿಕೆಗಳು ಬೆಳೆದಿರುವ ರೀತಿಯನ್ನು ಕುತೂಹಲಕರವಾಗಿ ಕಾದಂಬರಿಯಲ್ಲಿ ವಿಸ್ತರಿಸಲಾಗಿದೆ.

"ನನ್ನ ಅನೂಪ ಪಟೌಡಿ ಆಗಬೇಕು. ಬೆಸ್ಟ್ ಬ್ಯಾಟ್ಸ್‌ಮನ್. ಹೀಗೆ," ಎಂದು ತನ್ನ ಬಲ ತೋಳನ್ನು ಬಿಗಿಯಾಗಿ ಮಡಿಸಿ ಉಬ್ಬುವ ಮಾಂಸಖಂಡಗಳನ್ನು ತೋರಿಸುತ್ತಾ ಹೇಳಿದಳು. ಕಾಂತಿ(ತಾಯಿ). ಅದಕ್ಕೆ ಮಗ ಅನೂಪ್ "ನಾನು ಪಟೌಡಿ ಥರ ಆಗಬೇಕಾದರೆ ವಾರಕ್ಕೆ ಎರಡು ದಿನವಾದರೂ ಚಿಕನ್ ತಿನ್ನಬೇಡವಾ? ಅವನು ದನಾ ತಿನ್ನುಲ್ಲವಾ? ಚಿಕ್ಕನ್ ತಿನ್ನದೆ ಕ್ರಿಕೆಟ್‌ನಲ್ಲಿ ಮುಂದೆ ಬಂದಿರೋರು ಯಾರಿದಾರೆ

---

[೨] 'ತಂತು' ಪುಟ ೧೦೬. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೯೩.

ನೀನೇ ಹೇಳು?".[೩] "ಪಂಡಿತ್ ನೆಹರೂ ಚಿಕನ್ ತಿಂತಿದ್ದರಂತೆ ಮಾವರ್ ಅವರ ಮಗಳು, ಮೊಮ್ಮಕ್ಕಳೆಲ್ಲಾ ದನಾ ತಿಂತಾರಂತೆ. ಅದಕ್ಕೇ ಅವರು ಪ್ರೈಮ್ ಮಿನಿಸ್ಟರ್ ಆಗಿರೂದು." "ಮಾಂಸಾಹಾರ ಪಾಪ, ಅನೀತಿ ಅಂತ ಡ್ಯಾಡಿ ಹೇಳುವ ಪುರಾಣಗಳನ್ನ ನೀನು ನಂಬುತೀಯ?" ವಾರಕ್ಕೆರಡು ಸಲ ನಾನು ಚಿಕನ್ ತಿಂತೀನಿ. ಅಷ್ಟು ದುಡ್ಡು ಕೊಟ್ಟು ಬಿಡು. ಡ್ಯಾಡಿಗೆ ಹೇಳಕೂಡದು. ನೀನು ನನ್ನ ಮಮ್ಮಿ ನಾನು ನಿನ್ನ ಪ್ರೀತಿಯ ಮಗ ಅನೂಪ್ . ನಾನು ನಿನ್ನನ್ನ ತುಂಬ ಪ್ರೀತಿಸ್ತೀವಿ ಮಮ್ಮಿ".[೪]

ಮಗ ಚಿಕನ್ ತಿನ್ನುತ್ತಾನೆ. ಅದಕ್ಕೆ ತಾಯಿ ದುಡ್ಡು ಕೊಡುತ್ತಾಳೆಂಬ ಅಂಶದಿಂದಲೇ ಕಾದಂಬರಿಯಲ್ಲಿ ಗಂಡ-ಹೆಂಡಿರ ಪ್ರಸ್ತಾಪ ಪ್ರಾರಂಭವಾಗುತ್ತದೆ. ಅನೂಪ್ ಇನ್ನು ಮನೆಗೆ ಬಂದಿಲ್ಲವೆಂದು ಕಾಂತಿ ಗಂಡನಲ್ಲಿ ಪ್ರಸ್ತಾಪಿಸಿದಾಗ ಆತ "ಬ್ರಿಗೇಡ್ ರೋಡಿನಲ್ಲಿ ಅದ್ಯಾವುದು ಚಿಕನ್ ರೆಸ್ಟೋರಾ... ನಿನಗೇ ಚೆನ್ನಾಗಿ ಗೊತ್ತಿರಬೇಕು, ಹೋಗಿ ಕೇಳು", ಎನ್ನುತ್ತಾನೆ. ಅದಕ್ಕೆ ಕಾಂತಿ ಏನು ನೀವು ಹೇಳೂದು? ನಾನು ಹೋಗಿ ಅಲ್ಲಿ ಚಿಕನ್ ತಿಂತೀನಾ? ಅಥವಾ ಅವನನ್ನ ಕರಕಂಡು ಹೋಗಿ ಕೊಡುಸ್ತೀನಾ? ಈ ಥರ ಚುಚ್ಚು ಮಾತಾಡೂದ ನಾನು ಸಹಿಸುಲ್ಲ ತಿಳಿಕಳಿ". ಎಂದಾಗ ರವೀಂದ್ರ(ಗಂಡ) "ವಾರಕ್ಕೊಂದು ಸಲ ಚಿಕನ್ ತಿನ್ನುಕ್ಕೆ ಅಂತ ಅಪ್ಪನಿಗೆ ಕಾಣದ ಹಾಗೆ ಅವನಿಗೆ ದುಡ್ಡುಕೊಟ್ಟು ಕಳಿಸಿದರೆ ಸಾಲದೆ, ಕರಕಂಡು ಹೋಗಿಯೇ ಕೊಡಿಸಬೇಕೆ? ನಿನಗೂ ತಿನ್ನುವ ಚಪಲ ಹತ್ತಿದಾಗ ಕರಕಂಡು ಹೋಗು ಅಂತ ಅವನನ್ನೇ ಕೇಳ್ತೀಯ"[೫] ಎಂದ. ಇಲ್ಲಿ ತಾಯಿ ಮಗನ ವರ್ತನೆಗೆ ಹೆಮ್ಮೆಯನ್ನು ಪಡುತ್ತಿರಬಹುದು. ಆದರೆ ತಂದೆ ಮಗನ ವರ್ತನೆಯಿಂದಾಗಿ ನಿದ್ರೆ ಮಾಡಲಿಲ್ಲ. "ಒಂದು ಪ್ರಾಣಿಯು ಇನ್ನೊಂದನ್ನೂ ತಿಂದು ಬದುಕುವುದು ಪ್ರಾಣಿ ಸಂಕುಲದಲ್ಲಿ ಇದ್ದರೆ ಶಾಕಾಹಾರಿ ಪ್ರಾಣಿಗಳು ತೀರಾ ವಿರಳ. ಮಾಂಸ ಭಕ್ಷಣೆಯನ್ನು ವಿರೋಧಿಸುವ ಧರ್ಮಗಳೂ ಕಡಿಮೆಯೇ, ವೈದಿಕರು

---

[೩] 'ತಂತು' ಪುಟ ೯೯. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೯೩.
[೪] 'ತಂತು' ಪುಟ ೯೯-೧೦೦. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೯೩.
[೫] 'ತಂತು' ಪುಟ ೧೧೬. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೯೩.

ಮೂಲತಃ ಮಾಂಸಾಹಾರಿಗಳು, ಬುದ್ಧನೂ ವಿನಾಕಾರಣ ಪ್ರಾಣಿಗಳ ಬೇಟೆ ಮಾಡುವ ಕ್ಷತ್ರಿಯರ ಹವ್ಯಾಸವನ್ನು ವಿರೋಧಿಸಿದನೇ ಹೊರತು ಮಾಂಸ ಭಕ್ಷಣೆಯನ್ನು ನಿಲ್ಲಿಸಲಿಲ್ಲ".[೬]

ಕಾಂತಿಯ ಪಾತ್ರದ ಮೂಲಕ ಭಾಷೆಗೆ ಸಂಬಂಧಿಸಿ, ಸ್ವಾತಂತ್ರ್ಯೋತ್ತರ ನಂಬಿಕೆಗಳು ಬೆಳೆದಿರುವ ರೀತಿಯನ್ನು ಕಾದಂಬರಿಯಲ್ಲಿ ವಿಸ್ತರಿಸಲ್ಪಟ್ಟಿದೆ. ಕಾಂತಿ ಕನ್ನಡದವಳೇ. ಈಕೆಯ ತಂದೆ ಇಂಜಿನಿಯರು, ಭೋಪಾಲ್ ಕಾನ್ಪುರ, ಬರೋಡ, ಕಲ್ಕತ್ತಾ, ದಿಲ್ಲಿ–ಹೀಗೆ ಎಲ್ಲಾ ಕಡೆ ವರ್ಗವಾಗುವವರು. ಹಿಂದಿಯೇ ಅಲ್ಲೆಲ್ಲಾ ವ್ಯವಹಾರದ ಭಾಷೆ. ಮನೆಯಲ್ಲಿ ತಂದೆ, ತಾಯಿ ಕನ್ನಡದಲ್ಲಿ ಮಾತನಾಡುತ್ತಿದ್ದರೂ, ಹೊರನಾಡ ಕನ್ನಡಿಗರ ಮಕ್ಕಳು ಮಾಡುವಂತೆ ಇವಳು ಅವರು ಕನ್ನಡದಲ್ಲಿ ಕೇಳಿದರೆ ಹಿಂದಿಯಲ್ಲೇ ಉತ್ತರ ಕೊಡುವ ಪರಿಪಾಠದವಳು. ಮುಂದೆ ರವೀಂದ್ರನ ಜೊತೆಗೆ ಮದುವೆಯಾಗಿ ಬೆಂಗಳೂರಿಗೆ ಬಂದ ನಂತರವು ಗಂಡ ಕನ್ನಡದಲ್ಲಿ ಮಾತನ್ನಾಡಿದರೂ ತಾನು ಇಂಗ್ಲೀಷ್ ಅಥವಾ ಹಿಂದಿಯಲ್ಲಿ ಮಾತನ್ನಾಡುತ್ತಿದ್ದಳು. "ನಾವೀಗ ಬೆಂಗಳೂರಿಗೆ ಬಂದಿದ್ದೀವಿ. ಇಲ್ಲಾದರೂ ಕನ್ನಡದಲ್ಲಿ ಮಾತನಾಡು. ಮಗುವಿಗಾದರೂ ಅಭ್ಯಾಸವಾಗಲೀ ಎಂದು ಗಂಡನೆಂದರೆ, ಬೆಂಗಳೂರು ಹಿಂದೂಸ್ಥಾನದ ಹೊರಗಡೆ ಇದೆಯೇನು? ಇಂಗ್ಲೀಷ್ ಪತ್ರಿಕೆಯ ಸಂಪಾದಕನಾಗಿದ್ದೀಯಾ, ಈ ಬೆಂಗಳೂರು ಸರ್ಕಾರ ನಮ್ಮ ಮಗನಿಗೆ ನೌಕರಿ ಕೊಡುತ್ತದೆಯೇ?[೭] ಎಂದು ಕೇಳುತ್ತಾಳೆ. ರವೀಂದ್ರನ ಸ್ನೇಹಿತರು ಮನೆಗೆ ಬಂದರೂ ತನಗೆ ಕನ್ನಡ ಬರುವುದಿಲ್ಲವೆಂದು ಹಿಂದಿ ಅಥವಾ ಇಂಗ್ಲೀಷ್ ಮಾತನ್ನಾಡುತ್ತಾಳೆ. ಈಕೆಯ ಸ್ನೇಹ ವರ್ಗದವರು ಇಂಥವರೇ ಈಕೆ ದೃಷ್ಟಿಯಲ್ಲಿ ಹಿಂದಿಯಿಲ್ಲದಿದ್ದರೆ ತಾವು ಸ್ವೀಕೃತರಾಗುವುದಿಲ್ಲ; ಇಂಗ್ಲೀಷ್ ಇಲ್ಲದಿದ್ದರೆ ಮೇಲೆ ಏರುವುದಿಲ್ಲ. ಮಗ ಇಂಗ್ಲೀಷಿನಲ್ಲಿ ಮಾತನ್ನಾಡಿದಾಗ ಅವನ ಕೋರಿಕೆಯನ್ನು

---

[೬] 'ಚಿತ್ತ–ಭಿತ್ತಿ' ಪುಟ ೨೧೨ ಡಾ.ಎಸ್.ವಿ.ಪ್ರಭಾವತಿ.

[೭] 'ತಂತು' ಪುಟ ೧೬೧. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೯೩.

ಸುಲಭವಾಗಿ ಮನ್ನಿಸುವ ಮೂಲಕ ಅವಳು ಪ್ರೋತ್ಸಾಹಿಸುವಷ್ಟು ಪರಭಾಷಾ ವ್ಯಾಮೋಹವನ್ನು ಹೊಂದಿರುತ್ತಾಳೆ. ಕಾಂತಿಯ ಪಾತ್ರ ಚಿತ್ರಣದ ಮೂಲಕ ಕಾದಂಬರಿಕಾರರು ಇಲ್ಲಿ ಸ್ವಾತಂತ್ರ್ಯೋತ್ತರ ಭಾರತದಲ್ಲಾದ ಭಾಷಾ ಸಮಸ್ಯೆಯನ್ನು ತಮ್ಮ ಕಥನ ಕ್ರಿಯೆಯಲ್ಲಿ ಅಳವಡಿಸಿಕೊಂಡಿರುವುದನ್ನು ಕಾಣಬಹುದು.

ಅನೂಪ-ರಶ್ಮಿ-ಸಿಂಗಳ ಪಾತ್ರಗಳ ಮುಖಾಂತರವಾಗಿ ಆಧುನಿಕ ಯುವಪೀಳಿಗೆಯ ಧ್ಯೇಯ-ಧೋರಣೆಗಳನ್ನು ಆಶೋತ್ತರಗಳನ್ನು, ವಸ್ತುನಿಷ್ಠವಾಗಿ ವಿಶ್ಲೇಷಿಸುತ್ತಾರೆ. ಅನೂಪನ ಸ್ವಭಾವಕ್ಕೆ ತಂದೆ/ತಾಯಿ ಕಾರಣ ಎಂದು ಅವನ ತಂದೆ, ತಾಯಿಯರಿಬ್ಬರೂ ಪರಸ್ಪರ ದೂಷಣೆಯನ್ನು ಕಾದಂಬರಿಯ ಸಂದರ್ಭದಲ್ಲಿ ಮಾತನ್ನಾಡಿಕೊಂಡರೂ ಕೂಡ ಅದಕ್ಕೆ ಅವರಿಬ್ಬರೂ ಕಾರಣರಾಗಿರುವುದಿಲ್ಲ. ಬದಲಾಗುತ್ತಿರುವ ಪರಿಸ್ಥಿತಿಯೇ ಕಾರಣ ಎಂಬ ಸ್ಪಷ್ಟವಾದ ನಿಲುವನ್ನು ಕಾದಂಬರಿ ನೀಡುತ್ತದೆ. ಶ್ರೀಮಂತ ಹುಡುಗರ ಜೊತೆ ಸೇರಿ ಅವನು ಚಿಕನ್ ತಿನ್ನುತ್ತಾನೆ, ಅದು ತಿನ್ನುವುದು ತಪ್ಪು ಎಂದು ತಂದೆ ಹೇಳಿದರೆ, ತಾಯಿ ಅದಕ್ಕೆ ಕಾಣದಂತೆ ದುಡ್ಡು ಕೊಡುತ್ತಾಳೆ. ಕ್ಯಾಬರೆ ನೋಡಿದ ಎಂಬ ಕಾರಣಕ್ಕೆ ಪೋಲಿಸ್ ಹಿಡಿದಾಗ ಅನೂಪನನ್ನು ರವೀಂದ್ರ ವಿದ್ಯಾಶಾಲೆಗೆ ಸೇರಿಸುತ್ತಾನೆ. ಬೆಳೆಯುವ ಮಕ್ಕಳಿಗೆ ಪರಿಸರವೇ ಮುಖ್ಯವಾದುದರಿಂದ ಅನೂಪ ಅಲ್ಲಿಗೆ ತಕ್ಕಂತೆ ಬದಲಾಗುತ್ತಾನೆ. ಆದರೆ ಕಾಂತಿ ವಿಮಾನ ಪ್ರಯಾಣದ ರುಚಿ ತೋರಿಸಿ ಇಂಜಿನಿಯರಿಂಗ್ ಕಾಲೇಜು ಸೇರಿಸಿರುವುದು. ಅಮ್ಮ ಕೊಡಿಸಿದ ಬುಲೆಟ್, ಅದರಿಂದ ಬಂದ ಸ್ಪೀಡ್ ಕಿಂಗ್ ಬಿರುದು, ಅದರಿಂದ ಆಕರ್ಷಿತಳಾದ ರಶ್ಮಿಸಿಂಗ್, ಅವಳೊಂದಿಗೆ ಕ್ಯಾಬರೆ ನೋಡಿದ್ದು, ನಂತರ ಅನಿತಾ, ಅದು ಸಾಲದೆಂದು ಮಾದೇವಿ, ಕೊನೆಗೆ ಈಗಾಗಲೇ ಒಬ್ಬ ಬಿಳಿಯನನ್ನು ಮದುವೆಯಾಗಿ ಕೈಬಿಟ್ಟ ರಶ್ಮಿಸಿಂಗಳನ್ನೇ ಮದುವೆಯಾಗುತ್ತಾನೆ. ಹೀಗೆ ಅನೂಪ ಭಾರತದ ಬದಲಾಗುತ್ತಿರುವ ಯುವಕರಿಗೆಲ್ಲಾ ಸಂಕೇತವಾಗಿ ಕಾದಂಬರಿಯಲ್ಲಿ ನಿರೂಪಿತಗೊಂಡಿರುತ್ತಾನೆ.

ಕಾದಂಬರಿಯಲ್ಲಿ ನಿರೂಪಿತಗೊಂಡಿರುವ ಮೊದಲಿನ ತಲೆಮಾರಿನ ಕಥೆಯಲ್ಲಿ ಮನಃ ಶಾಂತಿಯ ನೆಲೆಯನ್ನು ಗುರುತಿಸಬಹುದು. ಈ ತಲೆಮಾರಿನ ಪ್ರತಿನಿಧಿ ರವೀಂದ್ರನ ತಂದೆ. ಇವರು ದೊಡ್ಡ ಅಧಿಕಾರದಲ್ಲಿದ್ದವರು; ಒಂದು ಕಾಸೂ ಲಂಚ ಮುಟ್ಟದೆ ಪ್ರಾಮಾಣಿಕ ಜೀವನದ ಕನಸ್ಸನ್ನು ಸಾಕಾರಗೊಳಿಸಿದವರು. ಇವರ ತಂದೆ ವೆಂಕಟಸುಬ್ಬಯ್ಯನವರು ಮತ್ತು ಶಾಂತಮ್ಮನವರು ತಮ್ಮ ಊರಿನಲ್ಲಿ ಆಸ್ಪತ್ರೆಯಾಗಬೇಕೆಂದು ತಾವು ಗಳಿಸಿ ಉಳಿಸಿದ್ದ ಹಣದಲ್ಲಿ ಒಂದು ಲಕ್ಷ ರೂಪಾಯಿ ಹಾಗೂ ತಮ್ಮ ಹೊಲದಲ್ಲಿ ಒಂದೆಕೆರೆ ಭೂಮಿಯನ್ನು ಸರ್ಕಾರಕ್ಕೆ ದಾನವಾಗಿ ಕೊಟ್ಟು ಊರಿಗೆ ಲೋಕಲ್ ಫಂಡ್ ಆಸ್ಪತ್ರೆ ಬರುವಂತೆ ಮಾಡಿದ್ದರು. ತಾವು ದಾನ ಕೊಟ್ಟದ್ದನ್ನು ಬಹಿರಂಗ ಪಡಿಸಬಾರದೆಂದು ಕೇಳಿಕೊಂಡಿದ್ದ ಮಹಾನುಭಾವರು ಅವರು. ಇಂಥವರ ಮಗನೂ ಕೂಡ ಪಿತ್ರಾರ್ಜಿತವಾಗಿ ಬಂದ ಭೂಮಿಯನ್ನು ಗುತ್ತಿಗೆಗೆ ಕೊಟ್ಟು, ಉಳುವವನಿಗೇ ಭೂಮಿ ಎಂಬ ಕಾನೂನು ಜಾರಿಗೆ ಬಂದಾಗಲೂ ತಮ್ಮ ಭೂಮಿಯನ್ನು ಉಳಿಸಿಕೊಳ್ಳಲು ಪ್ರಯತ್ನಿಸಲಿಲ್ಲ. ನಿಸ್ವಾರ್ಥತೆಯಿಂದ ಬದುಕಲು ಕಲಿತ್ತಿರುವ ಈ ತಲೆಮಾರಿನ ಮಂದಿಗಳು ಮನಶಾಂತಿಯನ್ನು ಪಡೆದಿರುತ್ತಾರೆ. ಈ ತಲೆಮಾರಿನ ಕಥೆಯೂ ಕಾದಂಬರಿಯಲ್ಲಿ ನೆನಪುಗಳ ಮರಕಳಿಕೆಯ ಕಥನ ತಂತ್ರದ ಮೂಲಕ ಮೂಢಿ ಬಂದಿದೆ.

ಕಾದಂಬರಿಯಲ್ಲಿ ಬರುವ ಎರಡನೆಯ ತಲೆಮಾರಿನ ಪ್ರತಿನಿಧಿಗಳು ರವೀಂದ್ರ-ಕಾಂತಿ; ಅಣ್ಣಯ್ಯ ಹಾಗೂ ಅವರ ಸಹೋದ್ಯೋಗಿಗಳು. ಸ್ವಾತಂತ್ರ್ಯಪೂರ್ವದ ಕನಸು-ಆದರ್ಶಗಳನ್ನು ಮೈಗೂಡಿಸಿಕೊಂಡಿರುವ ರವೀಂದ್ರ ಕಾದಂಬರಿಯಲ್ಲಿ ಸ್ವಾತಂತ್ರ್ಯಾನಂತರ ಕಾಲದ ಪ್ರತಿನಿಧಿಯಾಗಿ ಕಾಣಿಸಿಕೊಳ್ಳುತ್ತಾನೆ. ಸೂಕ್ಷ್ಮ ಸಂವೇದನೆಯ ರವೀಂದ್ರ ಸಮಕಾಲೀನ ರಾಜಕೀಯ ವೈಪರೀತ್ಯಗಳನ್ನು, ರಾಜಕಾರಣಿಗಳ ಸ್ವಾರ್ಥ, ವೈಯಕ್ತಿಕ ಪ್ರತಿಷ್ಠೆಗಳಿಗೆ ಮಣಿಯದೆ ಅವುಗಳನ್ನು ಬಯಲು ಮಾಡುವ ನಿರ್ಭೀತ

ಪತ್ರಕರ್ತ. ಬಸವನಪುರದ ಹೊಯ್ಸಳ ದೇವಸ್ಥಾನದ ಸರಸ್ವತಿ ವಿಗ್ರಹವನ್ನು ಅಂತರರಾಷ್ಟ್ರೀಯ ವಿಗ್ರಹಚೋರರು ಕದ್ದೊಯ್ದಾಗ ಆ ಬಗ್ಗೆ ಪತ್ರಿಕಾ ತನಿಖಾ ವರದಿ. ಸಿದ್ಧಪಡಿಸಲು ತನ್ನ ಹುಟ್ಟೂರಿಗೆ ಬಂದ ಪತ್ರಕರ್ತನ ಮೂಲಕ ಕಾದಂಬರಿಕಾರರು ಸ್ವಾತಂತ್ರ್ಯಾನಂತರ ಗ್ರಾಮಜೀವನದಲ್ಲಾದ ಬದಲಾವಣೆಯ ವಾಸ್ತವ ಚಿತ್ರಣವನ್ನು ನೀಡುತ್ತಾ ಹೋಗುತ್ತಾರೆ. ಅದರಲ್ಲಿ ಹಳ್ಳಿಯ ಜಾತಿ, ರಾಜಕೀಯ ವ್ಯಕ್ತಿಯನ್ನು ಜಾತಿಯ ಹಿನ್ನೆಲೆಯಲ್ಲಿ ಗುರುತಿಸುವ ಜನರ ಮನೋಭಾವ, ರಾಜಕೀಯ ಶಕ್ತಿಯ ಮೇಲುಗೈ, ರೈತರ ಅಧಃಪತನ ದೇವಸ್ಥಾನದ ಜಾಗದಲ್ಲಿ ಮನೆಕಟ್ಟುವ ಸ್ವೇಚ್ಛಾಪ್ರವೃತ್ತಿ. ಇವೇ ಮೊದಲಾದ ಹಳ್ಳಿಯ ಜನರ ಬದುಕಿನ ವಾಸ್ತವ ಚಿತ್ರ ತೆರೆಯುತ್ತಾ ಹೋಗುತ್ತವೆ.

ಈ ಎರಡನೆಯ ತಲೆಮಾರಿನ ನಾಯಕ ರವೀಂದ್ರನ ಪಾತ್ರದ ಮೂಲಕ ಕಾದಂಬರಿಕಾರರು ರಾಷ್ಟ್ರ ಮತ್ತು ರಾಜ್ಯದಲ್ಲಿನ ರಾಜಕೀಯ ವಿದ್ಯಮಾನಗಳ ಚರ್ಚೆಯನ್ನು ನಡೆಸುತ್ತಾರೆ. ರವೀಂದ್ರ ಪತ್ರಕರ್ತನಾಗಿರುವುದರಿಂದ ಅವನ ವಿಚಾರಧಾರೆಗಳು ನೆಹರೂ ಹಾಗೂ ಇಂದಿರಾಗಾಂಧಿಯ ಆಡಳಿತಾವಧಿಯ ಕಾರ್ಯವೈಖರಿಯನ್ನು ತೀವ್ರವಾಗಿ ಖಂಡಿಸುತ್ತದೆ. ಒಳಗಿನ ದ್ರವ್ಯವೇ ಇಲ್ಲದೆ ನೋಟು ಅಚ್ಚುಮಾಡುವ ಸರ್ಕಾರ ಅಪ್ರಾಮಾಣಿಕವಾದದ್ದಲ್ಲವೆ? ನೆಹರೂನ ಕಲ್ಪನೆಯಲ್ಲಿ ಈ ಅಪ್ರಾಮಾಣಿಕತೆಗೆ ಗಣನೆಯೇ ಇಲ್ಲವೇ?[೮]

"ಅವರ ಅಜ್ಜ(ಇಂದಿರಾಗಾಂಧಿಯ ಅಜ್ಜ ಮೋತಿಲಾಲ್ ನೆಹರು) ಸ್ವಂತಕ್ಕೆ ಕಟ್ಟಿಸಿಕೊಂಡ ಆನಂದಭವನ ಆಗ ಕಾಂಗ್ರೆಸ್ ಕಛೇರಿ ಅಂತ ಒಂದು ಸಲ ಸಮರ್ಪಿತವಾಗಿರಲಿಲ್ಲವೇ ಅದನ್ನು ರಾಷ್ಟ್ರದ ಪ್ರಧಾನಿ ಮತ್ತೆ ರಾಷ್ಟ್ರಕ್ಕೆ ಸಮರ್ಪಿಸೂ ಒಂದು ದೊಡ್ಡ ಸಮಾರಂಭ ಮಾಡಿಕೊಂಡಳಲ್ಲ ಅಲಹಾಬಾದಿನಲ್ಲಿ..."[೯]

---

[೮] 'ತಂತು' ಪುಟ ೯೨. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೯೩.
[೯] 'ತಂತು' ಪುಟ ೯೫. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೯೩.

"....ಈ ದೇಶದಲ್ಲಿ ಪ್ರಜಾಪ್ರಭುತ್ವದ ನಡಾವಳಿಕೆಗಳು ಬೇರು ಬಿಟ್ಟಿಲ್ಲ. ಬೇರು ಬಿಡುವ ಹಾಗೆ ಬೆಳೆಸುವ ಮಹಾನ್ ಐತಿಹಾಸಿಕ ಜವಾಬ್ದಾರಿ ನಮ್ಮ ನಾಯಕರ ಮೇಲಿದೆ. ಆಕೆ(ಇಂದಿರಾಗಾಂಧಿ) ಇಂಗ್ಲೆಂಡ್ ಅಮೇರಿಕೆಗಳ ಸಂಸ್ಕೃತಿಯನ್ನು ಹೀರಿಕೊಂಡವಳು. ಸಾಮಾನ್ಯಳೇನಲ್ಲ. ಹಾಗಿದ್ದೂ ತನ್ನ ಮಗನಿಗೆ ಪಟ್ಟ ಕಟ್ಟುವ ಸನ್ನಾಹವನ್ನೇ ಯಾಕೆ ಸದಾ ಮಾಡ್ತಿದ್ದಾಳೆ? ಪ್ರಜಾಪ್ರಭುತ್ವದ ಮಾದರಿಯನ್ನೇಕೆ ಭದ್ರವಾಗಿ ಬೆಳೆಸಿಲ್ಲ?".[೧೦]

ಅಲಹಾಬಾದ್ ಉಚ್ಚ ನ್ಯಾಯಾಲಯದ ತೀರ್ಮ ಇಂದಿರಾಗಾಂಧಿಯ ವಿರುದ್ಧ ಹೊರಬಂದಾಗ ದೆಹಲಿಯಲ್ಲಿ ಬಾಡಿಗೆ ಜನರ ಜಾಥಾ ಇಂದಿರಾಗಾಂಧಿ ಪರವಾಗಿ ಕೂಗು ಹಾಕಿದುದು; ಕಾಂಗ್ರೆಸ್ ಇಬ್ಭಾಗವಾಗುವ ಸಂದರ್ಭದಲ್ಲಿ ಸಿಂಡಿಕೇಟ್ ವಿರುದ್ಧ ಇಂಡಿಕೇಟ್‌ನವರು ನಡೆಸಿದ ಬಹಿರಂಗ ಪ್ರಚಾರ; ದೇಶದ ಆಂತರಿಕ ಭದ್ರತೆಗೆ ಅಪಾಯ ತಲೆದೋರಿದೆ ಎಂಬ ನೆಪದಲ್ಲಿ ತುರ್ತು ಪರಿಸ್ಥಿತಿಯ ಘೋಷಣೆ ಮಾಡಿ ಇಂದಿರಾಗಾಂಧಿ ತನ್ನ ವಿರುದ್ಧ ನಿಂತವರನ್ನು ದನಿ ಎತ್ತಿದವರನ್ನು ತನ್ನ ಪ್ರಬಲ ವಿರೋಧಿಗಳನ್ನು ಬಂಧಿಸಿದುದು. ಹೀಗೆ ದೇಶದ ರಾಜಕೀಯದ ಹಳೆಯ ನೆನಪುಗಳು ಕಾದಂಬರಿಯಲ್ಲಿ ಮರುಕಳಿಸಿದಂತೆ ಚಿತ್ರಿತಗೊಂಡಿದೆ.

ರಾಜ್ಯದ ರಾಜಕೀಯದಲ್ಲಿ ದೇವರಾಜ ಅರಸರವರು ತಮ್ಮ ಅಧಿಕಾರ ಉಳಿಸಿಕೊಳ್ಳಲು, ಅಲ್ಪಸಂಖ್ಯಾತರ ಏಳಿಗೆಯನ್ನು ತಮ್ಮ ಬಂಡವಾಳವನ್ನಾಗಿ ಮಾಡಿಕೊಂಡು ಟೆನೆನ್ಸಿ ಆಕ್ಟನ್ನು ಜಾರಿಗೆ ತಂದರು. ಉಳುವವನೇ ಭೂಮಿಯ ಒಡೆಯ ಎಂಬ ನೀತಿ ಜಾರಿಗೆ ಬಂದದ್ದರ ಪರಿಣಾಮವಾಗಿ ಹಳ್ಳಿಗಳ ಸಾಮಾಜಿಕ ಜೀವನದಲ್ಲಿ

---

[೧೦] 'ತಂತು' ಪುಟ ೧೨೦. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೯೩.

ಆದಂತಹ ಏರುಪೇರುಗಳ ವಾಸ್ತವ ಚಿತ್ರಗಳು ಕಾದಂಬರಿಯ ಕಥಾ ಚೌಕಟ್ಟಿನಲ್ಲಿ ಅವಕಾಶ ಪಡೆದುಕೊಂಡಿದೆ.

ಕಾದಂಬರಿಯ ಮುಖ್ಯ ಕಥಾವಾಹಿನಿಯಲ್ಲಿ ಸ್ವಾತಂತ್ರ್ಯಾನಂತರದ ಕಾಲಮಾನದ ರಾಜಕಾರಣಿಗಳ ಕರಾಳಲೀಲೆಯನ್ನು ಚಿತ್ರಿಸುವುದರ ಮೂಲಕ, ಗಾಂಧೀಯುಗದ ನಂತರದ ಭ್ರಷ್ಟಚಾರವನ್ನು ಪರಿಚಯಿಸುತ್ತಾರೆ.

ಶಿಕ್ಷಣ ಕ್ಷೇತ್ರದ ಅಶಿಸ್ತು ಹಾಗೂ ಶಿಕ್ಷಣ ಕ್ಷೇತ್ರದ ವ್ಯಾಪಾರೀಕರಣದ ಚಿತ್ರಣವನ್ನು ಕಾದಂಬರಿಯ ಚೌಕಟ್ಟಿನಲ್ಲಿ ತಂದಿರಿಸಲಾಗಿದೆ. ಸ್ವಾತಂತ್ರ್ಯಾನಂತರ ನಮಗೆ ಗುಮಾಸ್ತರನ್ನು ಸೃಷ್ಟಿಸುವ ಶಿಕ್ಷಣಬೇಕೋ ಅಥವಾ ನಮ್ಮ ದೈನಂದಿನ ಅಗತ್ಯಗಳನ್ನು ಗಮನದಲ್ಲಿರಿಸಿಕೊಂಡು ರಾಷ್ಟ್ರವನ್ನು ಕಟ್ಟುವ, ಮುನ್ನಡೆಸುವ ಸಂಸ್ಕೃತಿ ಸಂಪನ್ನವಾದ ಅಂತರಂಗದ ವಿಕಸನದ ಕಡೆಗೆ ಗುರಿಯಿರುವ ಶಿಕ್ಷಣ ಬೇಕೋ? ಎಂಬ ಚಿಂತನೆ ಕಾದಂಬರಿಯ ಪ್ರಧಾನ ಕೇಂದ್ರ ವಿಷಯವಾಗಿ ಮೂಡಿಬಂದಿದೆ. ಕಾದಂಬರಿಯಲ್ಲಿ ಬರುವ ಅಣ್ಣಯ್ಯ ಹಾಗೂ ಆತನ ಗೆಳೆಯರಿಗೆ ನಮಗೆ ಅಗತ್ಯವಿರುವ ಶಿಕ್ಷಣದ ಮೂಲಭೂತ ಕಲ್ಪನೆ ಗಾಂಧೀವಾದದ್ದು. ಅವರ ಕನಸು ಮಕ್ಕಳ ಮನಸ್ಸನ್ನು ರೂಪಿಸುವ, ಆದರೆ ಇಂದಿನ ಅಗತ್ಯಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಮುಂದೆ ಸಾಗುವ ಒಂದು ದಿವ್ಯ ಆದರ್ಶ ಅವರ ಮುಂದಿದೆ. ವಿವೇಕಾನಂದ ವಿದ್ಯಾಶಾಲೆ ಅವರ ಕನಸಿನ, ಆದರ್ಶದ ಪ್ರಯೋಗ ಶಾಲೆ. ಸ್ವಾರ್ಥಿಗಳ, ರಾಜಕೀಯ ಪುಢಾರಿಗಳು ಶಿಕ್ಷಣದ ಮೂಲಭೂತ ಕಲ್ಪನೆಯೇ ಇಲ್ಲದೇ, ಶಿಕ್ಷಣದ ವ್ಯಾಪಾರೀಕರಣಕ್ಕೆ ತೊಡಗುತ್ತಾರೆ. ಇದರಿಂದಾಗಿ ಅಣ್ಣಯ್ಯ ಹಾಗೂ ಗೆಳೆಯರು ಕಟ್ಟಿದ ಕನಸು ಛಿದ್ರವಾಗುತ್ತದೆ. ಅವರ ಆದರ್ಶದ ಹಿಂದಿರುವ ನೈತಿಕ ಶಕ್ತಿ ಬಲಹೀನವಾಗುತ್ತದೆ. ಅವರ ಶಿಕ್ಷಣದ ಉದಾರೀಕರಣವೂ ಮಾತೃಭಾಷೆಯ ಮೂಲಕ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡಬೇಕೆಂಬ ಅಣ್ಣಯ್ಯ ಹಾಗೂ ಅವರ ಗೆಳೆಯರ

ಧ್ಯೇಯ ಹುಸಿಯಾಗುತ್ತದೆ. ಇಂಗ್ಲೀಷ್ ಮಾಧ್ಯಮದ ಬಳಕೆ ಅವರು ಇಷ್ಟವಿಲ್ಲದಿದ್ದರೂ ಒಪ್ಪಬೇಕಾದ ಪರಿಸ್ಥಿತಿ ನಿರ್ಮಾಣವಾಗುತ್ತದೆ.

ಇದರೊಂದಿಗೆ ವಿದ್ಯಾರ್ಥಿಗಳ ಜೀವನದಲ್ಲಿ ಶಿಸ್ತು, ಆದರ್ಶ, ನೈತಿಕತೆ ಇಂದು ನಶಿಸುತ್ತಿರುವ ಬಗೆಗೂ ಕಾದಂಬರಿ ಬೆಳಕು ಚೆಲ್ಲುತ್ತದೆ. ವಿದ್ಯಾರ್ಥಿಗಳ ಅರಾಜಕತೆಯನ್ನೂ ಪರಿಣಾಮಕಾರಿಯಾಗಿ ಕಾದಂಬರಿಕಾರರು ಕಾಶಿಯಲ್ಲಿ ನಡೆದ ಘಟನೆಯೊಂದನ್ನು ಹಿನ್ನೆಲೆಯಾಗಿಟ್ಟುಕೊಂಡು ವಿವರಿಸಿರುತ್ತಾರೆ. ಕಾದಂಬರಿಕಾರರ ಪ್ರಕಾರ ಅಶಿಸ್ತು ಕಾಶಿಗೆ ಮಾತ್ರ ಸೀಮಿತವಾಗಿಲ್ಲ. ಅದು ದೇಶದ ಎಲ್ಲಾ ತಂದೆ-ತಾಯಿಗಳನ್ನು ಕಾಡುತ್ತಿಥುವ ಸಮಸ್ಯೆಯಾಗಿದೆ.

ಅನೂಪನ ಪಾತ್ರ ಚಿತ್ರಣದ ಮೂಲಕ ಕಾದಂಬರಿಕಾರರು ವಿದ್ಯಾರ್ಥಿ ಜೀವನದ ವೈಪರೀತ್ಯಗಳ ದರ್ಶನವನ್ನು ಮಾಡಿಸುತ್ತಾರೆ. ಅನೂಪನಲ್ಲಿ ಹೆಡೆಬಿಚ್ಚಿದ ಕಾಮ, ಅದಕ್ಕೆ ಪೂರಕವಾಗಿ ಒದಗಿಬಂದಿರುವ ಮುಕ್ತ ಸ್ವಾತಂತ್ರ್ಯ ಹಾಗೂ ಆರ್ಥಿಕ ಸ್ವಾತಂತ್ರ್ಯ ಆತನನ್ನು ಸ್ವೇಚ್ಛಾ ಪ್ರವೃತ್ತಿಯಲ್ಲಿರಿಸಿತು. ಇದರಿಂದಾಗಿ ಅವನು ಬಟ್ಟೆ ಬದಲಿಸುವಷ್ಟೇ ಸಲೀಸಾಗಿ ತನ್ನ ದೈಹಿಕ ಕಾಮತೃಷೆಗಾಗಿ ಹೆಣ್ಣುಗಳನ್ನು ಭೋಗಿಸಿ-ಭೋಗಿಸಿ ಬದಲಿಸಿದ. ಅನೂಪನು ಸುಖವನ್ನು ಅರಸಿ ಹೊರಟು ನಡೆಸಿದ ಸಾಹಸಗಳು ಹಾಗೂ ಅದರಿಂದ ಉದ್ಭವವಾದ ಸಮಸ್ಯೆಗಳು ಅವನನ್ನಷ್ಟೇ ಬಲಿತೆಗೆದುಕೊಳ್ಳಲಿಲ್ಲ; ಇತರರನ್ನು ಪೇಚಿಗೆ ಸಿಕ್ಕಿಸಿತು ಎನ್ನುವ ವಿವರಗಳು ಕಾದಂಬರಿಯ ಚೌಕಟ್ಟಿನಲ್ಲಿ ಸೇರಿಕೊಳ್ಳುತ್ತವೆ.

ಕಾದಂಬರಿಯಲ್ಲಿ ಸಾರ್ವತ್ರಿಕ ಹಾಗೂ ಸಾರ್ವಜನಿಕ ವಿಚಾರಗಳು ಪ್ರಸ್ಥಾಪಿಸಿಗೊಂಡಂತೆ ವೈಯಕ್ತಿಕ ಸ್ವಾರ್ಥ, ಕೌಟುಂಬಿಕ ಅಶಾಂತಿ, ಪಾಶ್ಚಾತ್ಯ ಮತ್ತು ಪೌರಾತ್ಯ ಸಂಸ್ಕೃತಿಯೂ ಪ್ರಸ್ಥಾಪಗೊಂಡಿದೆ. ವೈಯಕ್ತಿಕವಾದ ಸ್ವಾರ್ಥ ಎಷ್ಟರಮಟ್ಟಿಗೆ

ಸಂಬಂಧಗಳ ಟೊಳ್ಳುತನವನ್ನು ಪ್ರಕಟಿಸುತ್ತದೆ ಎಂಬುದಕ್ಕೆ ಕಾದಂಬರಿಯಲ್ಲಿ ಚಿತ್ರಿತಗೊಂಡಿರುವ ಕಾಂತಿ ಹಾಗೂ ಶೀತಲಳು ಉತ್ತಮ ಉದಾಹರಣೆಯಾಗಿ ಕಂಡುಬರುತ್ತಾರೆ. ಅವರಿಬ್ಬರ ಸ್ನೇಹ ಹಾಗೂ ವ್ಯಾವಹಾರಿಕ ಸಂಬಂಧ ಪರಸ್ಪರ ಈರ್ಷೆ ಹಾಗೂ ಅನುಮಾನಗಳಲ್ಲಿ ವ್ಯಕ್ತಗೊಳ್ಳುತ್ತದೆ. ಶೀತಲ್‌ಳ ಮೂಲಕವೇ ವ್ಯಾವಹಾರಿಕ ಬದುಕಿನ ರಂಗಪ್ರವೇಶ ಮಾಡಿ ಗಂಡನಿಂದ ಲಭ್ಯವಾಗದ ಆರ್ಥಿಕ ಸ್ವಾತಂತ್ರ್ಯವನ್ನು ತನ್ನ ಸಾಹಸಿ ಪ್ರವೃತ್ತಿಯಿಂಧ ಪಡೆದ ಕಾಂತಿ ತನ್ನ ಉದ್ಯಮದ ಸಹಭಾಗಿತ್ವದಿಂದ ತೆಗೆದುಹಾಕುವಳು. ಅಷ್ಟೇ ಅಲ್ಲದೆ ಕಾಂತಿ ಹೇಮಂತನ ಜೊತೆಗಿನ ಅನೈತಿಕ ಸಂಬಂಧವನ್ನು ಮುಚ್ಚಿಟ್ಟು, ಹೇಮಂತ ಸಾಧ್ಯವಾದಷ್ಟು ಶೀತಲಳ ಜೊತೆ ಸ್ನೇಹ ಬೆಳೆಸದಂತೆ ಎಚ್ಚರಿಕೆಯಿಂದ ವ್ಯವಹರಿಸುವಳು. ಇದು ಶೀತಲಳ ಕೋಪಕ್ಕೆ ಕಾರಣವಾಗುತ್ತದೆ. ಹೇಮಂತ ಹಾಗೂ ಕಾಂತಿಯ ಅನೈತಿಕ ಸಂಬಂಧವನ್ನು ಕುರಿತು ರವೀಂದ್ರ, ಅನೂಪ, ಕಾಂತಿಯ ತಂದೆ-ತಾಯಿಯರಿಗೆ ಅನಾಮಧೇಯ ಪತ್ರ ಬರೆಯುವ ಮೂಲಕ ಶೀತಲ್ ತನ್ನ ಸೇಡು ತೀರಿಸಿಕೊಳ್ಳುವಳು.

ಕಾದಂಬರಿಯಲ್ಲಿ ನಿರೂಪಿತಗೊಂಡಿರುವ ಕೌಟುಂಬಿಕ ಅಶಾಂತಿಯು ರವೀಂದ್ರ ಹಾಗೂ ಕಾಂತಿಗೆ ಸಂಬಂಧಿಸಿರುವುದಾಗಿದೆ. ಪತ್ರಕರ್ತ ರವೀಂದ್ರನ ಮೂಲಕ ಕಾದಂಬರಿಕಾರರು ಇಡೀ ಸ್ವಾತಂತ್ರ್ಯೋತ್ತರ ಭಾರತವನ್ನು ಚಿತ್ರಿಸಿರುತ್ತಾರೆ. ಅದರಂತೆ ರವೀಂದ್ರನ ವ್ಯಕ್ತಿತ್ವ ಸಂಸಾರಕ್ಕೆ ಸಂಬಂಧಿಸಿದ ವಿಚಾರವನ್ನು ಚಿತ್ರಿಸಿ ಆ ಪಾತ್ರಕ್ಕೆ ನ್ಯಾಯವನ್ನು ಒದಗಿಸಿಕೊಟ್ಟಿರುತ್ತಾರೆ[೧೧]. ಎರಡು ಭಿನ್ನ ಸಂಸ್ಕೃತಿಗಳಲ್ಲಿ ಬೆಳೆದ ವಿದ್ಯಾವಂತ ದಂಪತಿಗಳು ಸಾಮರಸ್ಯದ ಬದುಕಿನಿಂದ ದೂರ ನಿಂತು ತಮ್ಮದೇ ಆದ ವೈಯಕ್ತಿಕ ಪ್ರತಿಷ್ಠೆಗಳಿಂದ ಪರಸ್ಪರ ಅಸುಖಿಗಳಾಗುವರು. "ತನ್ನ ಜೊತೆ ಸ್ಪಂದಿಸದ, ಸಂಪಾದನೆ ಮಾಡುವ ಪ್ರತಿಯೊಂದು ಮಾರ್ಗವನ್ನೂ ಕುಕ್ಕಿ ಮಾತನ್ನಾಡುವ, ಹೆಂಡತಿ

---

[೧೧] ಸಂದರ್ಶನದ ವೇಳೆಯಲ್ಲಿ ಕಾದಂಬರಿಕಾರರೇ ತಮ್ಮ ಪಾತ್ರನಿರ್ಮಿತಿ ಕುರಿತು ಹೇಳಿದ ಮಾತು.

ಮಗನನ್ನು ದಾರಿದ್ರ್ಯ ಗೋಳಿನಲ್ಲಿಡುವುದರಲ್ಲಿ ಸುಖ ಕಾಣುವವನ ಮೇಲೆ ಎಂಥ ಪ್ರೀತಿ ಬರುಕ್ಕೆ ಸಾಧ್ಯ"[೨೨]. ಎಂಬುದು ಕಾಂತಿಯ ನಿಲುವು.

ಸಾಮಾಜಿಕ ಸ್ತರದ ಮೇಲೆ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವವನ್ನು ಕಾದಂಬರಿಯ ಚೌಕಟ್ಟಿನಲ್ಲಿ ಬಳಸಲಾಗಿದೆ. ಆಧುನಿಕ ಚಿಂತನೆಯ ಪರಿಣಾಮವಾಗಿ ಮೂಲಭೂತ ವಿಚಾರಗಳಲ್ಲಿ ಮಹತ್ತರವಾದ ಬದಲಾವಣೆಗಳನ್ನು ಕಾದಂಬರಿಯ ಕಥನ ಪ್ರಕ್ರಿಯೆಯಲ್ಲಿ ಗುರುತಿಸಲಾಗುವುದು. ಗಂಡು-ಹೆಣ್ಣುಗಳ ಲೈಂಗಿಕ ಆಕರ್ಷಣೆ ಹಾಗೂ ಮಿಲನಕ್ಕೆ ಸಂಬಂಧಿಸಿದ ಮಡಿವಂತ ಮನೋಭಾವ ಬದಲಾದ ಕ್ರಮವನ್ನು ಕಾಂತಿ, ಶೀತಲ್, ಅನೂಪ್-ಈ ಮುಂತಾದ ಪಾತ್ರಗಳ ಮೂಲಕ ಹಿಡಿದಿಡಲಾಗಿದೆ.

ಡಾ. ಎಸ್. ವಿದ್ಯಾಶಂಕರ ಅವರು ಅಭಿಪ್ರಾಯ ಪಡುವಂತೆ- "ಓರ್ವ ವೈಚಾರಿಕ ಮನೋಭಾವದ ಲೇಖಕ ತನ್ನ ಸಮಕಾಲೀನ ಜೀವನದ ಗತಿಸ್ಥಿತಿಯನ್ನು ಎಚ್ಚರದಿಂದ ನೋಡುತ್ತ, ಅದರ ಸೋಲು-ಗೆಲುವುಗಳನ್ನು ವಿಚಾರ ಮಾಡುತ್ತಾ, ತನ್ನದೇ ಧಾಟಿಯಲ್ಲಿ ವಿಶ್ಲೇಷಿಸುವ ರೀತಿ ಮೆಚ್ಚುವಂತಹದು. ಬದಲಾವಣೆಯ ಎಲ್ಲ ಆಯಾಮಗಳನ್ನೂ ದಾಖಲಿಸಬೇಕೆನ್ನುವ ಉತ್ಸಾಹದಲ್ಲಿ ಭೈರಪ್ಪ ಒಮ್ಮೊಮ್ಮೆ ವಾಚಾಳಿಯಾಗಿ ಬಿಡುವರು. ಈ ನಿಟ್ಟಿನಲ್ಲಿ ಸ್ವಲ್ಪ ಸಂಯಮ ವಹಿಸಿದ್ದರೆ ಕಾದಂಬರಿ ಇನ್ನಷ್ಟು ಸಹನೀಯವಾಗುತ್ತಿತ್ತು. ನಿಜವಾಗಿಯೂ ಒಂದು ದೊಡ್ಡ ಧ್ಯೇಯ ಈ ಕಾದಂಬರಿಯ ರಚನೆಯ ಹಿಂದಿದೆ. ಚರಿತ್ರೆ ಎನ್ನುವುದು ಮರೆತುಹೋದ ಸಂಗತಿಗಳ ದಾಖಲೆಯಷ್ಟೇ ಅಲ್ಲ, ಅದು ಒಂದು ಕಾಲದ ಆದರ್ಶದ ಕನಸುಗಳ ತೂಗುತೊಟ್ಟಿಲು; ವ್ಯವಸ್ಥೆಯ ಜೊತೆಗಿನ ವ್ಯಕ್ತಿಗಳ ಸೋಲು-ಗೆಲುವಿನ ದಾಖಲು; ಕೇವಲ ಮನುಷ್ಯರಾದವರ ನಡವಳಿಯ ದಾಖಲು; ಹಾಗೆಯೇ ಮಾನವೀಯ ಸಂಬಂಧಗಳಲ್ಲಿ ತಮ್ಮ ನೋವು ಮರೆತು ಲೋಕದ ಮಂದಹಾಸವಲ್ಲಿ ತಮ್ಮನ್ನು ಕಂಡುಕೊಂಡ ದಿವ್ಯ

---

[೨೨] 'ತಂತು' ಪುಟ ೩೨೦ - ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೯೩.

ಚೇತನಗಳ ಹೆಜ್ಜೆ ಗುರುತುಗಳು. ಈ ಹಿನ್ನೆಲೆಯಲ್ಲಿ ಕಾದಂಬರಿ ದಾಖಲಿಸುತ್ತಿರುವುದು ಸಮಕಾಲೀನ ಇತಿಹಾಸವನ್ನು.”[೧೩].

ಪತ್ರಿಕೋದ್ಯಮವನ್ನು ಒಂದು ನೆಪವಾಗಿ ತೆಗೆದುಕೊಂಡ ಕಾದಂಬರಿ ತನ್ನ ಭೂಗೋಳ, ಚರಿತ್ರೆ ಮತ್ತು ಸಾಮಾಜಿಕ ವಿಜ್ಞಾನಗಳಲ್ಲಿ ದೇಶಾದ್ಯಂತ ವ್ಯಾಪಿಸುತ್ತದೆ. ಈ ನೆಪದಲ್ಲಿ ಕತೆ ತನ್ನಿಂತಾನೆ ಹಿಗ್ಗುತ್ತ ಭೌಗೋಳಿಕವಾಗಿ ಬೆಂಗಳೂರು, ಮೈಸೂರು, ದಿಲ್ಲಿ, ಕಾಶಿ, ಪಟ್ಣ ಮತ್ತು ಅಮೇರಿಕದವರೆಗೂ ವ್ಯಾಪಿಸುತ್ತದೆ. ಚಾರಿತ್ರಿಕವಾಗಿ ಸ್ವಾತಂತ್ರ್ಯೋತ್ತರದ ನೆಹರೂ ಕಾಲದಿಂದ ತುರ್ತುಪರಿಸ್ಥಿತಿಯವರೆಗೂ ತನ್ನ ಸ್ಥಾನಗಳನ್ನು ಗುರುತಿಸಿಕೊಳ್ಳುತ್ತದೆ. ಹೀಗೆ ಗುರುತಿಸಿಕೊಳ್ಳುವಾಗ ದೇಶದ ರಾಜಕೀಯ ಶಕ್ತಿಯು ಹೇಗೆ ನಾಡಿನ ಬೇರೆ ಬೇರೆ ಕ್ಷೇತ್ರಗಳನ್ನು ಅನಿವಾರ್ಯವಾಗಿಯೇ ಪ್ರವೇಶಿಸಿ ಪ್ರಭಾವಿಸುತ್ತದೆ ಎಂಬುದು ಸ್ಪಷ್ಟವಾಗಿ ಮತ್ತು ನಿರ್ಭಿಡೆಯಿಂದ ನಿರೂಪಿತವಾಗುತ್ತದೆ. ಒಂದು ದೇಶದ ರಾಜಕಾರಣ, ಆಡಳಿತಶಾಹಿ, ಶಿಕ್ಷಣ, ಸಂಗೀತ ಕಲೆ, ವಾಣಿಜ್ಯ, ಕಡೆಗೆ ಕೌಟುಂಬಿಕ ವ್ಯವಸ್ಥೆಗಳು ಸಮಕಾಲೀನ ಭಾರತದಲ್ಲಿ ಯಾವ ಅವನತ ಸ್ಥಿತಿಯನ್ನು ತಲುಪಿವೆ ಎಂಬುದನ್ನು ವ್ಯವಸ್ಥಿತವಾಗಿ ಮತ್ತು ಯಥಾರ್ಥವಾಗಿ 'ತಂತು' ಕಾದಂಬರಿಯು ಬಿಂಬಿಸುತ್ತದೆ.

ಒಟ್ಟಿನಲ್ಲಿ "ತಂತು" ಕಾದಂಬರಿ ಒಂದು ನಿರ್ದಿಷ್ಟ ಸಮಕಾಲೀನ ಕಾಲಘಟ್ಟದ, ಒಂದು ಸಮಾಜದ, ದೇಶದ ಆಗು-ಹೋಗುಗಳನ್ನು ನಾನಾ ಆಯಾಮಗಳಲ್ಲಿ ಹಿಡಿದಿಡಲು ಪ್ರಯತ್ನಿಸಿರುವ ಕಾದಂಬರಿಯಾಗಿ ರಚನೆಗೊಂಡಿದೆ. 'ಕಥನಶಿಲ್ಪ'ದ ಬಂಧ ಉಳಿದ ಕಾದಂಬರಿಗಳಿಗಿಂತ ಭಿನ್ನವಾಗಿದ್ದು ಆಕರ್ಷಕವಾಗಿ ಸುಂದರವಾಗಿ ನಿರಾವರಣಗೊಂಡಿದೆ ಎನ್ನಬಹುದು.

---

[೧೩] ಎಸ್.ಎಲ್.ಭೈರಪ್ಪ ಅವರ ಕೃತಿಗಳ ವಿಮರ್ಶೆ ಪುಟ ೩೫೫ ಸಂ.ಡಾ॥ಸುಮತೀಂದ್ರ ನಾಡಿಗ್- ಸುಂದರ ಪ್ರಕಾಶನ ೨೦೦೨.

'ತಂತು' ಅನೇಕ ಆಶಯಗಳನ್ನೊಳಗೊಂಡ, ಸಮಕಾಲೀನ ಭಾರತದ ಜನಜೀವನದ ಕನ್ನಡಿಯಾಗುತ್ತದೆ. ಡಾ।ಎಲ್.ವಿ.ಶಾಂತಕುಮಾರಿ ಅವರು ಅಭಿಪ್ರಾಯಪಡುವಂತೆ–"ಭಾರತದ ಬೃಹತ್ ಭಿತ್ತಿಯ ಮೇಲೆ, ಈ ರಾಷ್ಟ್ರಜೀವನದಲ್ಲಿ ಹಾಸು ಹೊಕ್ಕಾಗಿ ಬೆಸೆದುಕೊಂಡಿರುವ ಅಸಂಖ್ಯ ತಂತುಗಳನ್ನು ಹಿಡಿದು, ತುಡಿಸಿ, ಮಿಡಿಸಿ, ನೂರು ಸ್ವರ ಮೂಡಿಸಿ, ಅದಕ್ಕೊಂದು ಸಾಮರಸ್ಯದ, ಸಾಮಂಜಸ್ಯದ ರೂಪು ಕೊಟ್ಟಿರುವ, ಈ ಅಗಾಧ ಪ್ರಯತ್ನದ, 'ತಂತು' ಕಾದಂಬರಿಯನ್ನೋದುವಾಗ ಈ ಉಪಮೇಯಗಳು ಕಣ್ಣೆದುರು ಮೂಡುತ್ತವೆ. ಭಾರತದ ಬೃಹತ್ ಭಿತ್ತಿ, ಎದುರಿನಲ್ಲಿ ಒಬ್ಬ ಅಪೂರ್ವ ಕಲಾವಿದ, ಭಿತ್ತಿಯಷ್ಟೇ ಬೃಹತ್ ಕಲಾಕೃತಿಯನ್ನು ಆ ಭಿತ್ತಿಯ ಮೇಲೆ ಮೂಡಿಸಲು ಸಜ್ಜಾಗಿ, ವಿವಿಧ ವರ್ಣಗಳ ಹತ್ತಿ, ರೇಶಿಮೆ, ಉಣ್ಣೆ, ನೈಲಾನ್ ನೂಲುಗಳ ಉಂಡೆಗಳನ್ನಿಟ್ಟುಕೊಂಡು, ನಡುವೆ ಬಂಗಾರದೆಳೆಗಳನ್ನು ಸೇರಿಸುತ್ತಾ ಪ್ರತಿಭೆ ಮತ್ತು ಕಲ್ಪನೆಗಳ ಹೆಣಿಗೆ ಕಡ್ಡಿಗಳಿಗೆ, ತನ್ನ ಅಪಾರ ಅನುಭವ, ಪರಂಪರೆ ಹಾಗೂ ವರ್ತಮಾನಗಳ ಸಂಬಂಧಗಳ ಸ್ಪಷ್ಟ ಅರಿವು ಮತ್ತು ಪಾತ್ರಗಳ, ಸನ್ನಿವೇಶಗಳ ಬಗೆಗಿನ ತೀಕ್ಷ್ಣ ಒಳನೋಟಗಳನ್ನು ಲೇಪಿಸುತ್ತಾ, ಅಭೂತಪೂರ್ವ ಎನಿಸುವಂತೆ ಚಿತ್ರ ಹೆಣೆಯುತ್ತಿದ್ದಾನೆ. ಯಾವ ಎಳೆ ಎಲ್ಲಿ ಮೂಡುವುದೋ, ಮತ್ತೆಲ್ಲಿ ಮಾಯವಾಗುವುದೋ, ಮತ್ತೆ ಎಲ್ಲಿ ಕಾಣಿಸಿಕೊಳ್ಳುವುದೋ ಕಡೆ ತನಕ ತಿಳಿಯುವುದಿಲ್ಲ. ಆ ಬಣ್ಣ, ಈ ಬಣ್ಣ, ಆ ಎಳೆ, ಈ ಎಳೆ, ಎಲ್ಲಿಯದೆಲ್ಲಿಗೋ ಸೇರಿಕೊಂಡು, ಕಡೆಗೊಂದು ಪರಿಪೂರ್ಣ ಚಿತ್ತಾರದ ಹೆಣಿಗೆಯಾಗುವ ಕಲೆಯ ಚಮತ್ಕಾರ ಇಲ್ಲಿದೆ".[೧೪]

ಬೃಹತ್‌ಗಾತ್ರ, ವೈವಿಧ್ಯಮಯ ಪಾತ್ರಗಳು, ವಿವಿಧವಸ್ತು, ಆಶಯಗಳು, ಎಲ್ಲವೂ ಒಂದು ಚೌಕಟ್ಟಿನಲ್ಲಿ ಮೂರ್ತಗೊಂಡಿರುವ ರೀತಿ, ನೂರಾರು ರಾಗಗಳು, ನೂರಾರು ವಾದ್ಯಗಳನ್ನೊಳಗೊಂಡು, ಒಮ್ಮೊಮ್ಮೆ ಕರ್ಕಶವಾದ ಸ್ವರಗಳೂ ಸಹ ಮೂಲ

---

[೧೪] 'ಯುಗಸಾಕ್ಷಿ'– ಎ.ಎಲ್.ಶಾಂತಕುಮಾರಿ. ಸಾಹಿತ್ಯ ಭಂಡಾರ. ಬೆಂಗಳೂರು. ೨೦೦೯.

ಸ್ವರಮೇಳದಲ್ಲಿ ಹೊಂದಿಕೊಂಡು ಅಧ್ಭುತ ಪರಿಣಾಮ ಮೂಡಿಸುವ ಸ್ವರಮೇಳದ ಅನುಭವ ಕೊಡುತ್ತದೆ.

'ಸ್ವತಂತ್ರವಾಗಿ, ಸ್ವಸಂಪೂರ್ಣವಾಗಿ ಬೆಳೆಯಬಲ್ಲ ಅನೇಕ ಘಟಕಗಳನ್ನು, ಬೇರೆ ಬೇರೆ ಎಳೆಗಳಿಂದ ಬಂಧಿಸಿ, ಒಂದು ಬೃಹತ್ ಘಟಕವನ್ನಾಗಿ ಪರಿವರ್ತಿಸುವ ರೀತಿ ಟಾಲ್‌ಸ್ಟಾಯಿಯ 'ಅನ್ನಾಕರೆನೀನಾ' ದೊಸ್ತವ್‌ಸ್ಕೀಯ ಕೆಲವು ಬೃಹತ್ ಕಾದಂಬರಿಗಳನ್ನು ರಚನೆಯನ್ನು ನೆನಪಿಸುತ್ತದೆ.

ರವೀಂದ್ರ ಕಾಂತಿಯರ ವಿಷಮ ದಾಂಪತ್ಯ, ಹದಿನಾಲ್ಕು ವರ್ಷದವರೆಗೂ ಮುಂದುವರಿದು, ಹದಿನಾಲ್ಕು ವರ್ಷದ ಮಗನೂ ಇದ್ದು, ನಂತರ ಮುರಿದು ಬೀಳುವುದೊಂದು ಘಟಕ. ಇದಕ್ಕೆ ಅನುಷಂಗಿಕವಾಗಿ ರವೀಂದ್ರನ ತಂದೆ ಅಜ್ಜ, ಅಜ್ಜಿ ಅವರ ಜೀವನದ ಹಿನ್ನೆಲೆಯ ಚಿತ್ರಣವಿದೆ.

ಎರಡನೆಯ ಘಟಕ, ರವೀಂದ್ರ ಕಾಂತಿರಯರ ಮಗ ಅನೂಪ, ಅವನ ವಿದ್ಯಾಭ್ಯಾಸ, ಹದಿಹರೆಯದ ಹಗರಣಗಳು ಅವನ ಅಮೇರಿಕಾ ಮೋಹ- ಇತ್ಯಾದಿ, ಬಾಲಕನೊಬ್ಬನ ಜೀವನದ ರೀತಿಯನ್ನು ಮತ್ತು ಅವನು ಯುವಕನಾಗಿ, ಪುರುಷನಾಗಿ, ಜೀವನದಲ್ಲಿ ಸ್ಥಾಪಿತಗೊಳ್ಳುವುದರ ಚಿತ್ರಣವನ್ನೊಳಗೊಂಡಿದೆ.

ಮೂರನೆಯ ಘಟಕವಾಗಿ ಹೇಮಂತ ಹೊನ್ನತ್ತಿಯ ಪರಿಸರ, ತಂದೆ-ತಾಯಿ, ವಿದ್ಯಾಭ್ಯಾಸ ಉದ್ಯೋಗ, ಅನಂತರ ಸಂಗೀತಕ್ಕಾಗಿ ಎಲ್ಲವನ್ನೂ ಬಿಟ್ಟುಬರುವುದು. ನಾಲ್ಕನೆಯದಾಗಿ ಅಣ್ಣಯ್ಯನವರ ವಿದ್ಯಾಶಾಲೆ, ಆತನ ಜೀವನ, ವಿದ್ಯಾಭ್ಯಾಸಗಳ ವಿವರಗಳು ಇದರ ಜೊತೆಯಲ್ಲಿ ಬೆಸೆದುಕೊಂಡಿರುವ, ಸಮಕಾಲೀನ ರಾಜಕೀಯ ತಂತುಗಳು, ಪತ್ರಿಕೋದ್ಯಮ ಮತ್ತು ಇತರ ಉದ್ಯಮದ ತಂತುಗಳು, ಲೈಂಗಿಕ ಸ್ವಚ್ಛಂದತೆಗಳು, ಎಲ್ಲವೂ ಎಳೆ ಎಳೆಯಾಗಿ ಬೆಸೆದುಕೊಂಡು ತಮ್ಮ

ಪ್ರತ್ಯೇಕತೆಯನ್ನು ಅಳಿಸಿಕೊಂಡುಬಿಡುತ್ತವೆ. ಈ ವಿಶ್ವದಲ್ಲಿ ಹೇಗೆ ಒಂದಕ್ಕೊಂದು ಸಂಬಂಧವಿರದ ಯಾವ ವಸ್ತುವೂ ಇಲ್ಲವೋ, ಹಾಗೆಯೇ ಈ ಕಾದಂಬರೀ ಪ್ರಪಂಚದಲ್ಲಿ ಎಲ್ಲವೂ ಎಲ್ಲರೂ ಅಂತರ್‌ಸಂಬಂಧಿ ಆಗಿ ಬಿಡುತ್ತಾರೆ. ಭೈರಪ್ಪನವರು 'ಭೀತ್ತಿ'ಯಲ್ಲಿ ಬರೆದಿರುವಂತೆ, 'ಒಬ್ಬ ಪತ್ರಕರ್ತನನ್ನು ಮುಖ್ಯಪಾತ್ರವಾಗಿ ಮಾಡಿಕೊಂಡರೆ ವರದಿ ಊಹೆ, ಸಂದರ್ಶನ, ಹಳೆಯ ಪೇಪರ್ ಕಟಿಂಗ್ ಇಂತಹ ತಂತ್ರಗಳನ್ನು ಬಳಸಿ ವ್ಯಾಪಕ ವಿಷಯಗಳನ್ನು ಸಂಕ್ಷಿಪ್ತವಾಗಿ ತರುವ ಅನುಕೂಲವಿರುತ್ತೇ ಎಂಬುದು ಮುಖ್ಯವಾಹಿನಿಯಾಗಿತ್ತು...... ಪತ್ರಕರ್ತ ಇಡೀ ದೇಶದಲ್ಲಿ ಸಂಚರಿಸಬಹುದು, ಬೇಕಾದ ರಾಜಕಾರಣಿಗಳನ್ನು ಸಂದರ್ಶಿಸಬಹುದು ಎಂಬ ತಾಂತ್ರಿಕ ಸಾಧ್ಯತೆಯು ಕಾದಂಬರಿಯ ವಸ್ತುವಿನ ವ್ಯಾಪಕತೆಯನ್ನು ಹಿಗ್ಗಿಸಿ ತೋರಿಸುತ್ತಿತ್ತು. ಇಪ್ಪತ್ತೈದು ಅಧ್ಯಾಯಗಳನ್ನು ಒಳಗೊಂಡಿರುವ ಈ ಕಾದಂಬರಿಯ ವಸ್ತು ಮತ್ತು ವಿಷಯದ ಗಾತ್ರ ಗಹನತೆಗಳಿಗನುಗುಣವಾಗಿ ವಿಂಗಡಗೊಂಡು ರಚನೆಗೊಂಡಿದೆ. ಅತ್ಯಂತ ವಿಸ್ತಾರವಾದ ವಸ್ತು, ಅತಿಸೂಕ್ಷ್ಮ ಹೆಣಿಗೆಯಿದ್ದರೂ, ಎಲ್ಲಿಯೂ ಗೋಜಲು, ಅಸ್ಪಷ್ಟತೆಗಳಿಗೆಡೆಯಿಲ್ಲ. ನೇರ ನಿರೂಪಣೆಗಳು, ಹಿನ್ನೋಟಗಳು, ವರದಿಗಳು, ವರದಿಯನ್ನು ಸಂಪಾದಿಸುವಾಗಿನ ನಾಟಕೀಯ, ಸಿನಿಮೀಯ ವಿಧಾನಗಳು ಕೆಲವೊಮ್ಮೆ ಕಥನ ಶೈಲಿ, ಕೆಲವು ಬಾರಿ ಚರ್ಚೆ, ಸಂವಾದಗಳ ಮಾದರಿ, ಪುರಾಣಕಲ್ಪನೆ, ಎಲ್ಲವೂ ತಾಂತ್ರಿಕ ವಿನ್ಯಾಸಗಳಾಗಿ ಸಮರ್ಥವಾಗಿ ಬಳಸಲ್ಪಟ್ಟಿವೆ.

***********

## 'ಸಾರ್ಥ'–ಕಥನಕ್ರಿಯೆ.

ಎಸ್.ಎಲ್.ಭೈರಪ್ಪನವರ 'ಸಾರ್ಥ' ಒಂದು ಐತಿಹಾಸಿಕ ಕಾದಂಬರಿ. 'ಸಾರ್ಥ' ಎಂದರೆ ಪ್ರವಾಸ ಮಾಡುವ ಪ್ರಯಾಣಿಕರ ಗುಂಪು. ಇದೊಂದು ವಾಣಿಜ್ಯ ಪದ್ಧತಿಯೂ ಆಗಿತ್ತು. ಆನೆ ಕುದುರೆ ಹೇಸರಗತ್ತೆ ನೂರಾರು ಗಾಡಿಗಳ ಮೇಲೆ ವಾಣಿಜ್ಯ ಪದಾರ್ಥಗಳನ್ನು ಹೇರಿಕೊಂಡು ವ್ಯಾಪಾರ ಮಾಡುತ್ತಾ ದೂರ ದೂರ ದೇಶಗಳಲ್ಲಿ ಸಂಚರಿಸುವುದನ್ನು ಆ ಕಾಲದಲ್ಲಿ (ಕ್ರಿ.ಶ.೮ನೇ ಶತಮಾನ) 'ಸಾರ್ಥ' ಎನ್ನುತ್ತಿದ್ದರು[೧].

'ಸಾರ್ಥ' ಕಾದಂಬರಿಯು ಇತಿಹಾಸದ ಒಂದು ಎಳೆಯನ್ನು ಆಧರಿಸಿ ರೂಪುಗೊಂಡಿರುವ ಕಾದಂಬರಿ. ಕ್ರಿಶ ೮ನೆಯ ಶತಕದಲ್ಲಿ ನಡೆದಿರಬಹುದಾದ ಈ ಇತಿಹಾಸ ಕಥನದಲ್ಲಿ ರಾಜಕೀಯ– ಸಾಮಾಜಿಕ ಪರಿಸ್ಥಿತಿಯೊಳಗೆ ಸಿಲುಕಿಕೊಂಡ ಸನಾತನಧರ್ಮ, ಬೌದ್ಧಧರ್ಮ, ಶಿಲ್ಪ, ನಾಟಕ ಕಲೆ, ನಾಲಂದ ವಿದ್ಯಾ ಸಂಸ್ಥೆ, ವಾಮಾಚಾರ, ಆರ್ಥಿಕ ವ್ಯವಹಾರ ಮತ್ತು ವಾಯುವ್ಯಗಡಿಯಿಂದ ಬಂದ ಆಕ್ರಮಣಕಾರೀ ಅರಬ್ ಶಕ್ತಿಗಳು ಗಂಭೀರ– ರೀತಿಯಲ್ಲಿ ಅಡಕವಾಗಿವೆ.

'ಸಾರ್ಥ'ದ ಕಥಾ ಹಂದರ ಇಂತಿವೆ. ಈ ಕಾದಂಬರಿಯ ಕೇಂದ್ರ ವ್ಯಕ್ತಿ ನಾಗಭಟ್ಟ. ಈತ ತಾರಾವತಿ ಎಂಬಲ್ಲಿ ರಾಜ್ಯವಾಳುತ್ತಿದ್ದ ಅಮರುಕ ರಾಜನ ಆಪ್ತಮಿತ್ರನಾಗಿದ್ದವನು. ಇಬ್ಬರು ಮಾಹಿಷ್ಮಿಯ ವೈದಿಕ ಧರ್ಮ ವಿಶಾರದನಾದ ಮಂಡನ ಮಿಶ್ರರಲ್ಲಿ ಸಹಪಾಠಿಗಳಾಗಿದ್ದರು. ಇಬ್ಬರಿಗೂ ವಿವಾಹವಾಯಿತು. ಆದರೆ ನಾಗಭಟ್ಟನ ಹೆಂಡತಿ ಶಾಲಿನಿ ಸ್ಫುರದ್ರೂಪಿ. ರಸಿಕನಾದ ಅಮುರುಕನ ಕಣ್ಣು ಅವಳ ಮೇಲೆ ಬೀಳುತ್ತದೆ. ತನ್ನ ಸ್ನೇಹಿತನ ಮಡದಿಯನ್ನು ತನ್ನಡೆಗೆ ಸೆಳೆದುಕೊಳ್ಳಬೇಕು ಎಂಬ ದುರಾಲೋಚನೆಯಿಂದ ಅಮರುಕ ಒಂದು ತಂತ್ರ ಮಾಡುತ್ತಾನೆ. ತಮ್ಮದೇ ರಾಜ್ಯದ

---

[೧] 'ಸಾರ್ಥ' 'ಮುನ್ನುಡಿ'–ಕಾದಂಬರಿಕಾರರ ವಿವರಣೆಯಂತೆ.

ಒಂದು ವಿಶಿಷ್ಟ ಸಾರ್ಥವನ್ನು ಕಟ್ಟಬೇಕು. ಇದರಿಂದ ಬೊಕ್ಕಸಕ್ಕೆ ಹೆಚ್ಚು ಆದಾಯ ಬರುತ್ತದೆ. ಇದರಿಂದ ಸಾರ್ಥದ ಒಳಮರ್ಮವನ್ನರಿಯಲು, ಉನ್ನತ ವ್ಯಾಸಂಗಕ್ಕಾಗಿ ಕಾಶಿಗೆ ಹೋಗುವ ನೆಪದಲ್ಲಿ ನಾಗಭಟ್ಟನನ್ನು ಯಾವುದಾದರೊಂದು ಸಾರ್ಥದೊಂದಿಗೆ ಕಳುಹಿಸಿಕೊಡಬೇಕು ಎಂಬುದಾಗಿ ತೀರ್ಮಾನಿಸಿ ಬುಧಶ್ರೇಷ್ಠಿಯ ಸಾರ್ಥದೊಂದಿಗೆ ಸಾಗ ಹಾಕುತ್ತಾನೆ.

ಹೀಗೆ ಸಾರ್ಥದೊಂದಿಗೆ ಸಾಗಿದ ನಾಗಭಟ್ಟನು ಸಾರ್ಥದೊಂದಿಗೆ ಪ್ರಯಾಣ ಮಾಡುತ್ತಾ, ತನ್ನ ಗುಟ್ಟನ್ನು ಬಿಟ್ಟುಕೊಡದೇ, ಸಾರ್ಥದ ಗುಟ್ಟನ್ನೆಲ್ಲಾ ತಾನು ತಿಳಿಯುತ್ತಾ ವಾಣಿಜ್ಯದ ದೊಡ್ಡ ಕೇಂದ್ರವಾದ ಮಥುರೆಯನ್ನು ಸೇರುತ್ತಾನೆ. ಅಲ್ಲಿಗೆ ಬಂದ ಬುಧಶ್ರೇಷ್ಠಿಯ ಸಾರ್ಥ ಕಾಶಿಯೆಡೆಗೆ ಸಾಗದೇ ಬೇರೆ ಮಾರ್ಗವಾಗಿ ಸಾಗಬೇಕಾಗುತ್ತದೆ. ಅವರದೇ ಆದ ಇನ್ನೊಂದು ಸಾರ್ಥ ಮಥುರೆಗೆ ತಲುಪಿ ಕಾಶಿಯೆಡೆಗೆ ಹೋಗುವುದಿತ್ತು. ಅದು ಬರುವವರಿಗೆ ನಾಗಭಟ್ಟನಿಗೆ ಮಥುರೆಯಲ್ಲಿ ವಜ್ರಪಾದ ಭಿಕ್ಷುವಿನಲ್ಲಿ ಉಳಿಯುವಂತೆ ವ್ಯವಸ್ಥೆಮಾಡುತ್ತಾನೆ. ಇದರಿಂದಾಗಿ ಕಥಾನಾಯಕ ನಾಗಭಟ್ಟ ಮಥುರೆಯಲ್ಲಿಯೇ ಉಳಿಯುತ್ತಾನೆ. ಆತನನ್ನು ನೆಲೆ ನಿಲ್ಲಿಸಿಕೊಂಡ ವಜ್ರಪಾದರು ಮಥುರೆಯ ಬೌದ್ಧಧರ್ಮದ ಮುಖ್ಯಸ್ಥರು. ಈತ ಸಾರ್ಥದವರನ್ನು ಬೌದ್ಧರನ್ನಾಗಿ ಮಾಡಿಸುತ್ತಿದ್ದ. ಮಥುರೆಯಲ್ಲಿ ವಜ್ರಪಾದನೊಂದಿಗಿದ್ದ ನಾಗಭಟ್ಟನಿಗೆ ಪ್ರತಿಹಾರ ರಾಜಪ್ರತಿನಿಧಿಯಾದ ಜಯಸಿಂಹನೊಂದಿಗೆ ಸಖ್ಯ ಬೆಳೆಯುತ್ತದೆ. ಆತನ ಒತ್ತಾಯಕ್ಕೆ ಮಣಿದು ಸತತ ಏಳು ರಾತ್ರಿ ಕೃಷ್ಣ ಪಾತ್ರಧಾರಿಯಾಗಿ ಕೃಷ್ಣನ ವಿವಿಧ ಲೀಲೆಗಳ ನಾಟಕವಾಡುತ್ತಾನೆ. ಇದರಿಂದ ಮಥುರೆಯ ಸುತ್ತಲಿನ ಪ್ರದೇಶಗಳಲ್ಲಿ ಸಾಕ್ಷಾತ್ ಕೃಷ್ಣನೆಂಬಂತೆ ಭಕ್ತಿ ಜನಾನುರಾಗವನ್ನು ಗಳಿಸುತ್ತಾನೆ. ಇದನ್ನು ಕಂಡ ವಜ್ರಪಾದರು ನಾಗಭಟ್ಟನಿಗೆ ಬುದ್ಧನ ಪಾತ್ರ ಹೊರಿಸಿ ನಾಟಕವಾಡಿಸಿ ಬೌದ್ಧಧರ್ಮ ಪ್ರಚಾರ ಮಾಡಲು ಯೋಚಿಸುತ್ತಾನೆ. ಆದರೆ ವೈದಿಕ ಮತಾಭಿಮಾನಿಯಾದ ನಾಗಭಟ್ಟನು ನಿರಾಕರಿಸುತ್ತಾನೆ.

ಇಷ್ಟರಲ್ಲಿಯೇ ನಾಗಭಟ್ಟನೊಂದಿಗೆ ರಾಧೆ-ರುಕ್ಮಿಣಿಯ ವೇಷ ಮಾಡುತ್ತಿದ್ದ ಚಂದ್ರಿಕೆಯ ಜೊತೆಗೆ ಪ್ರೇಮ ಉಂಟಾಗುತ್ತದೆ. ಆದರೆ ಸನ್ಯಾಸ ದೀಕ್ಷೆವಹಿಸಿದ ಆಕೆ ಕೃಷ್ಣನ ಭೌತಿಕ ಅನುರಕ್ತಿಗೆ ನಿರಾಕರಿಸುತ್ತಾಳೆ. ಇದರಿಂದ ನಾಗಭಟ್ಟನ ಮನಸ್ಸಿಗೆ ಶೂನ್ಯ ಆವರಿಸುತ್ತದೆ. ಶೂನ್ಯ ನಿವಾರಣೆಗಾಗಿ ಸಾಧುಗಳನ್ನು ಹಿಡಿದು ತಾನು ಧ್ಯಾನ ಮಾಡುವುದನ್ನು ಕಲಿತುಕೊಂಡ. ಗುರುವಿನ ಉಪದೇಶದ ಉಲ್ಲಂಘನೆ ಮಾಡಿದ್ದರಿಂದ ಮತ್ತೇ ಧ್ಯಾನ ಸಾಧಿಸದೇ ಶೂನ್ಯನಾಗುತ್ತಾನೆ. ಅದೇ ಸಂದರ್ಭದಲ್ಲಿ ಆಕಸ್ಮಿಕವಾಗಿ ಒಬ್ಬ ವಾಮಾಚಾರಿ ಮಾಂತ್ರಿಕನ ಭೇಟಿಯಾಗುತ್ತದೆ. ಮತ್ತೇ ಧ್ಯಾನ ಸಾಧ್ಯವಾಗುತ್ತದೆ. ಯೋನಿ ಪೂಜೆಯ ನೆವದಿಂದ ಮತ್ತೇ ಪಾಟಲೀಪುತ್ರಕ್ಕೆ ಬಂದು ಚಂದ್ರಿಕೆಯನ್ನು ಕಂಡು ಒಪ್ಪಿಸಿ ಅದನ್ನು ಪೂರೈಸುತ್ತಾನೆ. ದೈಹಿಕ ಸಂಬಂಧ ನಿರಾಕರಿಸಿ ಕೇವಲ ಪ್ರೇಮ ಸಂಬಂಧದಿಂದಿರಲು ಚಂದ್ರಿಕೆ ಹೇಳಿದಾಗ ಮತ್ತೇ ಶೂನ್ಯ. ಕೊನೆಗೆ ವಜ್ರಪಾದ ಅವರ ಸಲಹೆಯಂತೆ ಅಧ್ಯಯನದ ಸಲುವಾಗಿ ನಲಂದಾ ವಿಶ್ವವಿದ್ಯಾನಿಲಯಕ್ಕೆ ಹೋಗುತ್ತಾನೆ. ನಲಂದಾದ ಪ್ರಸಿದ್ಧ ಬೌದ್ಧ ವಿದ್ಯಾ ಸಂಸ್ಥೆಯಲ್ಲಿ ಬೌದ್ಧೇತರ ವಿದ್ಯಾರ್ಥಿಗಳಿಗೂ ಕಲಿಯಲು ಅವಕಾಶವಿತ್ತು. ನಲಂದಾದಲ್ಲಿ ಬೌದ್ಧ ಚೈತ್ಯಗಳಲ್ಲಿ ಶಿಲ್ಪಿಗಳ ಕೆತ್ತನೆಗೆಂದು ವಸ್ತುವನ್ನು ಅರಸುತ್ತಿದ್ದ ವಿಶ್ವಕರ್ಮ ಸ್ಥಪತಿಯ ಜೊತೆಯಲ್ಲಿ ಬೌದ್ಧ ತಾಂತ್ರಿಕಾಚಾರಗಳ ಪರಿಚಯವನ್ನು ಮಾಡಿಕೊಂಡ.

ನಲಂದಾ ವಿದ್ಯಾ ಸಂಸ್ಥೆಯಲ್ಲಿ ಪ್ರಸಿದ್ಧ ವೈದಿಕ ವಿದ್ವಾಂಸ ಹಾಗೂ ಬೌದ್ಧ ಮತವನ್ನು ಖಂಡಿಸುವುದರಲ್ಲಿ ಹೆಸರಾಗಿದ್ದ ಕುಮಾರಿಭಟ್ಟರನ್ನು ಅವಮಾನಿಸಿ, ಅಲ್ಲಿಂದ ಹೊರಹಾಕಲಾದ ಸನ್ನಿವೇಶಕ್ಕೆ ನಾಗಭಟ್ಟ ಸಾಕ್ಷಿಯಾಗಿ ನಿಲ್ಲುತ್ತಾನೆ. ನಲಂದಾದಿಂದ ಹೊರಟು ಹೋದ ಕುಮಾರಿಭಟ್ಟರನ್ನು ಹುಡುಕಿಕೊಂಡು ಹೊರಟ ನಾಗಭಟ್ಟ ಪ್ರಯಾಗದಲ್ಲಿ ಮತ್ತೇ ಕಾಣುತ್ತಾನೆ. ಆಗ ಅವರ ತಂಗಿ ಭಾರತೀದೇವಿ ಮತ್ತು ಭಾವ ಮಂಡನಮಿಶ್ರರ ಪರಿಚಯವಾಗುತ್ತದೆ.

ಮುಂದೆ ಜಯಸಿಂಹನ ಜೊತೆಗೆ ಮಥುರೆಗೆ ಬಂದ ನಾಗಭಟ್ಟ ಸಾರ್ಥಗಳು ಬೀಡು ಬಿಡುವ ಸ್ಥಳಕ್ಕೆ ಹೋದಾಗ ತಿಳಿಯುತ್ತದೆ 'ಆ ಕಡೆ ಎಲ್ಲ ಮ್ಲೇಚ್ಛರ ಆಡಳಿತ ನಿಮ್ಮವರ ಸಾರ್ಥದ ಸರಕುಗಳನ್ನು ಅವರಿಗೆ ಕೊಟ್ಟು ಅವರು ಕೊಡುವ ಬೆಲೆಗಳನ್ನು ಪಡೆದು ಹಿಂತಿರುಗಬೇಕು. ನೇರವಾಗಿ ಮಿಶ್ರ, ರೋಮಕಗಳೊಡನೆ ವ್ಯಾಪಾರವನ್ನು ತಡೆದಿದ್ದಾರೆ.' ಎಂಬುದಾಗಿ ಇದರಿಂದಾಗಿ ಸಾರ್ಥದಲ್ಲಿ ನಾಗಭಟ್ಟ ಯಾವ ಕಡೆಗೂ ಸಾಗದೇ ಮಥುರೆಯಲ್ಲಿಯೇ ಉಳಿಯಬೇಕಾಗಿ ಬಂತು.

ಅದೇ ಸಂದರ್ಭದಲ್ಲಿ ವಾಯವ್ಯ ಭಾಗಗಳಲ್ಲಿ ಮ್ಲೇಚ್ಛರ ಉಪಟಳ ಹೆಚ್ಚುತ್ತಿರುವುದನ್ನು ಗಮನಿಸಿ, ಹೇಗಾದರೂ ಜನತೆಯನ್ನು ಎಚ್ಚರಿಸಿ ರಾಜ್ಯವನ್ನು ಉಳಿಸಿಕೊಂಡು, ಧರ್ಮವನ್ನು ರಕ್ಷಿಸಬೇಕೆಂಬ ಗುರಿಯಿಂದ ಜಯಸಿಂಹನ ನೆರವು ಪಡೆದು, ನಾಟಕಗಳ ಮುಖಾಂತರ ಜನತೆಗೆ ತಿಳುವಳಿಕೆ ನೀಡಲು ಸಿದ್ಧನಾದ. ಈ ಕಾರಣದಿಂದ ನಾಟಕಗಳ ಮುಖಾಂತರವಾಗಿ ಕೃಷ್ಣಾನಂದ (ನಾಗಭಟ್ಟ) ಮತ್ತು ಚಂದ್ರಿಕೆಯರು ಮತ್ತೇ ಒಂದಾಗುತ್ತಾರೆ. ಆದರೆ ಶತ್ರುಗಳ ಕೈಗೆ ಸಿಕ್ಕಿ ಬೀಳುತ್ತಾರೆ. ಒಂದೆಡೆ ಏನೆಲ್ಲ ಹಿಂಸೆಗೂ ಜಗ್ಗದೆ, ಅವರು ಹೇಳಿದಂತೆ ಕೇಳಲು ಮತ್ತು ಧರ್ಮಾಂತರಗೊಳ್ಳಲು ನಿರಾಕರಿಸಿ, ಶಿಕ್ಷೆಯನ್ನನುಭವಿಸಿದ ನಾಗಭಟ್ಟನಾದರೆ, ಮತ್ತೊಂದೆಡೆ ಚಂದ್ರಿಕೆಯು ಅತ್ಯಾಚಾರಕ್ಕೆ ಗುರಿಯಾಗಿ ಗರ್ಭಧರಿಸುತ್ತಾಳೆ. ಚಂದ್ರಿಕೆಯ ಮಾನ ಪ್ರಾಣವನ್ನು ಉಳಿಸುವ ಸಲುವಾಗಿ ನಾಗಭಟ್ಟ ಆಕೆಯನ್ನು ವರಿಸಿ, ಗೃಹಜೀವನವನ್ನು ಪ್ರಾರಂಭಿಸುತ್ತಾನೆ.

ಹೀಗೆ ಹೆಂಡತಿಯನ್ನು ಆಗಲಿ, ಹೆಚ್ಚಿನ ವಿದ್ಯಾರ್ಜನೆಯ ನೆಪದಿಂದ, ಹುಚ್ಚಿನಿಂದ ತನ್ನದಲ್ಲದ ವೈಶ್ಯ ವಿದ್ಯೆಯನ್ನು ತಿಳಿಯುವ ಸಲುವಾಗಿ, ಗೆಳೆಯನ ಮಾತಿನಂತೆ ಸಾರ್ಥದ ಜೊತೆ ಹೊರಟ ನಾಗಭಟ್ಟ, ಮಥುರೆ ಪಾಟಲೀಪುತ್ರ ಮತ್ತು

ನಲಂದಾಗಳಲ್ಲಿ ಇದ್ದು, ಹೊರ ಪ್ರಪಂಚವನ್ನು ತಿಳಿಯಲು ಪ್ರಯತ್ನಿಸಿ, ತನ್ನ ಮೂಲಕ್ಷೇತ್ರವಾದ ತಾರಾವತಿ ಮತ್ತು ವಿದ್ಯಾಕ್ಷೇತ್ರವಾದ ಮಾಹಿಷ್ಮತಿಗಳಲ್ಲಿ ಮತ್ತೆ ತನ್ನನ್ನು ತಾನು ತಿಳಿಯಲು ಪ್ರಯತ್ನಿಸಿ, ಎಲ್ಲ ಕಡೆಯೂ ಸೋತು, ಕೊನೆಗೆ ಚಂದ್ರಿಕೆಯ ಜೊತೆ ಗೃಹಸ್ಥ ಜೀವನ ನಡೆಸುತ್ತಾನೆ.

'ಸಾರ್ಥ' ಮತ್ತು ಅದರೊಂದಿಗೆ ಪ್ರಯಾಣ ಮಾಡುವ ನಾಗಭಟ್ಟನನ್ನು ನೆಪವಾಗಿಸಿಕೊಂಡು ಭೈರಪ್ಪನವರ ಈ ಕಾದಂಬರಿಯ ವಿನ್ಯಾಸವು ಬಿಚ್ಚಿಕೊಳ್ಳುತ್ತದೆ. ಕಾದಂಬರಿಯಲ್ಲಿ 'ಸಾರ್ಥ' ಎಂಬ ಪದವು ಇಡೀ ಬದುಕನ್ನು ಸಾರ್ಥದಂತೆ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗುವ ಯಾತ್ರೆಯಾಗಿಯೂ ಇದು ಸಂಕೇತಿಸುತ್ತದೆ.

೮ನೇ ಶತಮಾನದ ಸಾಮಾಜಿಕ ಹಿನ್ನೆಲೆಯಲ್ಲಿ ಈ ಕಾದಂಬರಿಯು ರೂಪಿತವಾಗಿರುವುದರಿಂದಾಗಿ ಒಂದು ಕಡೆ ಶಂಕರಾಚಾರ್ಯ, ಮಂಡನಮಿಶ್ರ, ಭಾರತಿದೇವಿ, ಕುಮಾರೀಭಟ್ಟ ಇವರು ಬಂದರೆ ಇನ್ನೊಂದು ಕಡೆಯಲ್ಲಿ ಮೂಲಸ್ಥಾನವನ್ನು ಆಕ್ರಮಿಸಿದ ನವಾಬರು ಬರುತ್ತಾರೆ. ವೈದಿಕಧರ್ಮವು, ಬೌದ್ಧಾಧರ್ಮವು ಕೊಡುತ್ತಿದ್ದ ಪೆಟ್ಟಿನಿಂದ ತತ್ತರಿಸುತ್ತಿರೂವಾಗಲೇ ಇಸ್ಲಾಂ ಧರ್ಮದ ಹೊಡೆತಕ್ಕೂ ಸಿಕ್ಕುತ್ತಿರುವುದರ ಪೂರ್ವ ಸೂಚನೆಗಳು ಕಾದಂಬರಿಯಲ್ಲಿ ಕಾಣಿಸಿಕೊಳ್ಳುತ್ತದೆ.

ಆಧ್ಯಾತ್ಮ, ನೀತಿ, ಮತಧರ್ಮ, ಕಲೆ, ರಾಷ್ಟ್ರದ ಆರ್ಥಿಕ ಮುಖಗಳು, ಗಂಡು-ಹೆಣ್ಣಿನ ಪ್ರೀತಿಯ ಸ್ವರೂಪಗಳು ಮುಂತಾದ ಮನುಷ್ಯ ಜೀವನದ ಪ್ರಮುಖ ಆಶಯಗಳೆಲ್ಲ 'ಸಾರ್ಥ' ಕಾದಂಬರಿಯಲ್ಲಿ ಚಿತ್ರಿತವಾಗಿದೆ. ಇಲ್ಲಿ ಕಾದಂಬರಿಕಾರರು ನಾಗಭಟ್ಟನ ಪರ್ಯಟನೆಯನ್ನೇ ಕಥಾತಂತ್ರವಾಗಿ ಬಳಕೆಮಾಡಿಕೊಂಡಿದ್ದಾರೆ. ಉತ್ತಮ ಪುರುಷ ಶೈಲಿಯಲ್ಲಿ ಕಾದಂಬರಿಯು ನಿರೂಪಣೆಗೊಂಡಿದೆ.

ಈ ಕಾದಂಬರಿಯ ಆದಿ-ಅಂತ್ಯದ ಕುರಿತು ಹೇಳುವುದಾದರೆ- 'ವಂಶವೃಕ್ಷ', 'ಗೃಹಭಂಗ', 'ದಾಟು' ಕಾದಂಬರಿಗಳು ಪ್ರಯಾಣದೊಂದಿಗೆ ಮುಕ್ತಾಯವಾದರೆ, 'ಸಾರ್ಥ'ದ ಕತೆ ಪ್ರಯಾಣದೊಂದಿಗೆ ಪ್ರಾರಂಭಗೊಂಡು ಪ್ರಯಾಣದ ನಿಲುಗಡೆಯಿಂದ ಕೊನೆಗೊಳ್ಳುತ್ತದೆ. ಕಾದಂಬರಿಯ ನಾಯಕ-ನಾಯಕಿಯರಾದ ನಾಗಭಟ್ಟ ಮತ್ತು ಚಂದ್ರಿಕಾ ಇವರಿಬ್ಬರೂ ಭಾರತದ ನೆಲದ ಎಲ್ಲ ವಿದ್ಯಮಾನಗಳ ನೋಟ, ನಡಿಗೆಯ ಕೊನೆಗೆ ಬಂದು ಅಲ್ಲಿಗೆ ಯಾರಿಗೋ ಗರ್ಭಿಣಿಯಾದ ಚಂದ್ರಿಕಾ ಮಗುವನ್ನು ಪಡೆದು, ನಾಗಭಟ್ಟನೊಂದಿಗೆ ಒಂದು ಕಡೆ ನೆಲೆಸಿ ಜೀವನವನ್ನು ತೊಡಗುವ ವಿವರದೊಂದಿಗೆ ಕಾದಂಬರಿ ಮುಕ್ತಾಯವಾಗುತ್ತದೆ. ನಾಗಭಟ್ಟ ತನ್ನ ಧೀರ್ಘ ಪ್ರಯಾಣದಲ್ಲಿ ಬಹುವಿಧ ಧಾರ್ಮಿಕ ಸಂಗತಿಗಳು, ಅನೇಕ ವರ್ಗ-ವರ್ಣದ ಜನಗಳ ನಡುವೆ ನುಗ್ಗಿ ಬಂದವನಾಗಿರುತ್ತಾನೆ. ಕಲಾವಿದೆ ಚಂದ್ರಿಕಾಳ ಸ್ಥಿತಿಯು ಅದೇ ಆಗಿದೆ.

ಎರಡನೇ ಘಟ್ಟದ ಕೊನೆ ಕಾದಂಬರಿಯಾದ ಸಾರ್ಥಕ್ಕೂ ಮೂರನೇ ಘಟ್ಟದ ಮೊದಲ ಕಾದಂಬರಿಯಾದ 'ಮಂದ್ರ'ಕ್ಕೂ ಕಥಾ ಸಂಗತಿಗೆ ಸಂಬಂಧಿಸಿ ಒಂದು ಅಂತರಂಗ ಸಂಬಂಧವಿರುವಂತೆ ಕಂಡು ಬರುತ್ತದೆ. 'ಸಾರ್ಥ'ದ ಕಥಾನಾಯಕ ನಾಗಭಟ್ಟ ಧಾರ್ಮಿಕ ಸಂಸ್ಥೆಗಳ ಮೂಲಕ ಪ್ರಯಾಣ ಹೊರಟರೆ 'ಮಂದ್ರ'ದ ನಾಯಕ ಮೋಹನ್‌ಲಾಲ್ ಕಲಾಸಾಧನೆಯ ಬೆನ್ನು ಹತ್ತಿ ಹೊರಡುತ್ತಾನೆ. ಈ ಕಾದಂಬರಿಯ ನಾಯಕಿ ಚಂದ್ರಿಕಾ ನೃತ್ಯಕಲೆಯ(ನಾಟಕ ಕಲೆ) ಹಿಂದೆ ಬೆನ್ನುಹತ್ತಿ ಎಲ್ಲಿಯೂ ನಿಲ್ಲದವಳಾಗಿ ಪ್ರಯಾಣ ಹೊರಟರೆ, 'ಮಂದ್ರ'ದಲ್ಲಿ ಮಧುಮಿತಾ ಉತ್ತರಾದಿ ಸಂಗೀತವನ್ನು ತನ್ನದಾಗಿರಿಸಿಕೊಳ್ಳಲು ಹೊರಟು ವಾಪಾಸು ಬಂದು ಮುಂಬೈನ ಆಚೆಯ ಪ್ರಾಕೃತಿಕ ಪ್ರದೇಶದಲ್ಲಿ ಸಾಧನೆಗೆ ತೊಡಗುತ್ತಾಳೆ. ಚಂದ್ರಿಕಾ ತನ್ನ ಗರ್ಭವನ್ನು ಇಳಿಸಿಕೊಂಡು ನಾಗಭಟ್ಟನೊಂದಿಗೆ ಬ್ದುಕುವುದು ಕಥನದ ಕೊನೆಯ ವಿವರವಾದರೆ,

ಮಂದ್ರದಲ್ಲಿ ಮಧುಮಿತಾ ಶ್ರಮಪೂರ್ಣ ಸಾಧನೆಯಿಂದ ತನ್ನ ಅಂತರಂಗದಾಳದಿಂದ ಹುಟ್ಟಿ ಬಂದ ರಾಗವನ್ನು ಗಂಡನಾಗಿದ್ದ ವಿಕ್ರಂ ಕೇಳಿಸಿಕೊಳ್ಳಬೇಕಿತ್ತೆಂಬ ಅತಿಭಾವುಕ ನೆಲೆಯಲ್ಲಿ ಕಾದಂಬರಿ ಕೊನೆಗೊಳ್ಳುತ್ತದೆ.

ಹೀಗೆ ಭೈರಪ್ಪನವರ ಕಾದಂಬರಿಗಳು ಯಾವಾಗಲೂ ಗ್ರಾಮೀಣ ಸಂಗತಿಯ ಅಥವಾ ಯಾವುದೇ ಪಾತ್ರಗಳ ಬಹಿರಂಗ ವಿವರದೊಂದಿಗೆ ಆರಂಭವಾಗುತ್ತಾ ಅದು ಅಂತರಂಗ ಪ್ರವೇಶದ ಮೂಲಕ ಕೊನೆಯಾಗುವ ಮಟ್ಟವನ್ನು ಮುಟ್ಟುವುದರಿಂದಲೇ ಅವರು ಈ ಕಥನತಂತ್ರದ ಮೂಲಕ ಅಪಾರ ಸಂಖ್ಯೆಯ ಓದುಗರನ್ನು ಪಡೆದಿರುತ್ತಾರೆ.

ಒಟ್ಟಿನಲ್ಲಿ 'ಸಾರ್ಥ'ದ ಒಳ-ಹೊರಗುಗಳನ್ನು ತಿಳಿಯಲು ಹೊರಟ ನಾಗಭಟ್ಟನ ಪ್ರವಾಸವೇ 'ಸಾರ್ಥ'. ತನ್ನ ಯಾವ ಗುರಿಯನ್ನು ಸಾಧಿಸಲಾಗದೆ ವಿಫಲನಾಗಿ ಬದುಕನ್ನು ಅದು ಬಂದಂತೆಯೇ ಎದುರಿಸುವ ನಾಗಭಟ್ಟನ ಜೀವನದ ಒಂದು ವೃತ್ತಾಂತವಾಗಿ ಈ ಕಾದಂಬರಿ ರಚನೆಗೊಂಡಿದೆ.

***************

## ಮೂರನೇ ಘಟ್ಟದ ಕಾದಂಬರಿಗಳು:

ಎಸ್.ಎಲ್.ಭೈರಪ್ಪನವರ 'ಮಂದ್ರ' ಹಾಗೂ 'ಆವರಣ' ಇವೆರಡು ಕಾದಂಬರಿಗಳನ್ನು ಮೂರನೆಯ ಘಟ್ಟದ ಕಾದಂಬರಿಗಳೆಂದು ಪರಿಗಣಿಸಲಾಗಿದೆ. ಭೈರಪ್ಪನವರ ಮೊದಲನೆಯ ಘಟ್ಟದ ಕಾದಂಬರಿಗಳು ಕಥನ ಪ್ರಧಾನ ಕಾದಂಬರಿಗಳಾಗಿ ಕಂಡು ಬಂದರೆ, ಎರಡನೆಯ ಘಟ್ಟದ ಕಾದಂಬರಿಗಳು ಪಾತ್ರ ಪ್ರಧಾನವಾದ ಲಕ್ಷಣಗಳನ್ನು ಪಡೆದುಕೊಂಡು ರಚನೆಗೊಂಡಿರುವುದನ್ನು ಕಾಣಬಹುದು. ಆದರೆ ಇವರ ಕಾದಂಬರಿಗಳ ಮೂರನೆಯ ಘಟ್ಟ ಇನ್ನು ಪ್ರಾರಂಭಿಕ ಹಂತದಲ್ಲಿರುವುದರಿಂದ ಅದರ ಲಕ್ಷಣಗಳನ್ನು ಸಾಮಾನ್ಯ ರೀತಿಯಲ್ಲಿ ಸೂತ್ರೀಕರಿಸಲು ಕಷ್ಟಸಾಧ್ಯವಾಗಿದೆ.

### 'ಮಂದ್ರ'-ಕಥನಕ್ರಿಯೆ.

"ಕತೆಯನ್ನು ನೋಡಿದಾಗ ಸ್ವರ್ಗ ಪ್ರವೇಶಿಸಿದ ಹಾಗಾಗುತ್ತೇ, ಕಲಾವಿದನ ಒಳಹೊಕ್ಕಾಗ ಬೇರೇಯೇ ಇರುತ್ತದೆ. ಯಾಕೆ ಈ ಕಾಂಟ್ರಾಡಿಕ್ಷನ್". – ಕಾಮವೇ ಪ್ರಧಾನವಾಗಿ ಕಂಡು ಬರುವ 'ಮಂದ್ರ' ಕಾದಂಬರಿಯಲ್ಲಿ ಬೋನ್ಲೆ ಪಾತ್ರದ ಒಳಹೊಕ್ಕು ಕಾದಂಬರಿಕಾರರು ಹೇಳಿರುವ ಈ ಮಾತು ಇಡೀ ಕಾದಂಬರಿಗೆ ಒಂದು ರೀತಿಯಲ್ಲಿ ಭಾಷ್ಯ ಬರೆದಂತಿದೆ.

"ಮೋಹನ್‌ಲಾಲ್ ಎಂಬ ಒಬ್ಬ ಅನಾಥ ಬಾಲಕ ರೈಲ್ವೇ ನಿಲ್ದಾಣದಲ್ಲಿ ಭಿಕ್ಷೆ ಬೇಡುತ್ತಾ ಜನರನ್ನು ಆಕರ್ಷಿಸಲು ಹಾಡುವಲ್ಲಿಂದ ತೊಡಗಿ, ಇಂಡಿಯಾ ದೇಶದ ಬಹುದೊಡ್ಡ ಸಂಗೀತಗಾರರಾಗಿ 'ತಾನ್‌ಸೇನ್ ಪ್ರಶಸ್ತಿ' ಪಡೆದು ಕೊನೆಯಲ್ಲಿ ಒಂದು ಸಂಗೀತ ಕಛೇರಿಯಲ್ಲಿ ಹಾಡಲಾಗಿದೆ ಶಿಷ್ಯಳಿಗೆ ಸೋಲುವ ಕತೆ ಈ ಕಾದಂಬರಿಯಲ್ಲಿ

ಬರುತ್ತದೆ. ಇಷ್ಟೇ ವಸ್ತುವನ್ನು ಇಟ್ಟುಕೊಂಡು ಕಾದಂಬರಿಕಾರರು ಕಾದಂಬರಿಯನ್ನು ರಚಿಸುವಾಗ ವಿಶಾಲವಾದ ಭಿತ್ತಿಯನ್ನು ನಿರ್ಮಿಸಿಕೊಂಡಿರುತ್ತಾರೆ.

'ಮಂದ್ರ' ಎಂದರೆ ಸಂಗೀತದಲ್ಲಿ ಬರುವ ತಗ್ಗುಧ್ವನಿ, ಇಲ್ಲಿ ಕಾದಂಬರಿಕಾರರು ಸಂಗೀತದ ಒಂದು ಭಾಗವಾದ 'ಮಂದ್ರ'ವನ್ನು ಜೀವನಕ್ಕೆ ಹೋಲಿಸಿ ನೋಡಿದ್ದಾರೆ. ಹೀಗೆ ತಗ್ಗುಧ್ವನಿಯ ಅರ್ಥದಲ್ಲಿ 'ಮಂದ್ರ' ಬಂದಿದೆ. ಅದೇ ರೀತಿ ಒಬ್ಬ ಕಲಾವಿದನ ತಗ್ಗುವಿಕೆಯನ್ನು ಮೋಹನ್‌ಲಾಲ್ ಪಾತ್ರದ ಮೂಲಕ ತೋರಿಸಿದ್ದಾರೆ. ಕಲಾವಿದನಿಗೂ ಕಲೆಗೂ ಇರುವ ಸಂಬಂಧವನ್ನು ವಿಸ್ತರಿಸುತ್ತಾ ಕಾದಂಬರಿಯನ್ನು ಬೆಳೆಸುತ್ತಾರೆ.

ಮೋಹನ್‌ಲಾಲ್ ತನ್ನ ಎಪ್ಪತ್ತು ವರ್ಷಗಳ ಬದುಕಿನಲ್ಲಿ ಮದುವೆಗೆ ಮುಂಚೆ ಸೇರಿದ ಚುನ್ನಿಬಾಯಿ, ಮದುವೆಯಾದ ರಾಮಕುಮಾರಿ ಮತ್ತು ಚಂಪಾ, ಶಿಷ್ಯಳಾದ ಮಧುಮಿತಾ ಲಾರೆನ್ಸ್, ನೃತ್ಯಗಾರ್ತಿ ಮನೋಹರಿದಾಸ್, ಕೊನೆಯಲ್ಲಿ ಭೇಟಿಯಾದ ಪ್ರಭಾ ಇವರೆಲ್ಲರ ಜೊತೆಗಿನ ಅವನ ಸಂಬಂಧದ ಎಳೆಗಳು ಕತೆಯ ಎಳೆಗಳೊಂದಿಗೆ ಒಳನೇಯ್ಗೆ ಹೊಂದಿ ಕಾದಂಬರಿಯ ಕಥನ ಭಿತ್ತಿ ನಿರ್ಮಿತಗೊಂಡಿದೆ. ಆದರೆ ಕಾದಂಬರಿಯಲ್ಲಿ ಸಂಭವಿಸುವ ಘಟನೆಗಳು ಉತ್ತರ ಇಂಡಿಯಾದ ಹರಿದ್ವಾರದಿಂದ ಪ್ರಾರಂಭವಾಗಿ ಮುಂಬಯಿ ಮಹಾರಾಷ್ಟ್ರದ ಊರುಗಳಲ್ಲಿ ಸಂಚರಿಸಿ, ಅಮೇರಿಕಾ ಇಂಗ್ಲೆಂಡಿನಂತಹ ದೇಶಗಳಲ್ಲಿ ತಿರುಗಿ ಕೊನೆಗೆ ಹರಿದ್ವಾರಕ್ಕೆ ಬಂದು ನಿಲ್ಲುತ್ತದೆ. ಹೀಗೆ ಕಥಾ ಚೌಕಟ್ಟನ್ನು ಪ್ರಜ್ಞಾಪೂರ್ವಕವಾದ ರೀತಿಯಲ್ಲಿ ರಚಿಸಿಕೊಂಡಿರುವ ಕಾದಂಬರಿಕಾರರು, ಕಾದಂಬರಿಯ ನಾಯಕಿ ಪಾತ್ರವಾದ ಮಧುಮಿತಾಳಿಂದ ಕಾದಂಬರಿಯನ್ನು ಪ್ರಾರಂಭಿಸಿ ಅವಳಿಂದಲ್ಲೇ ಕಾದಂಬರಿಯನ್ನು ಮುಗಿಸಿದ್ದಾರೆ.

ಕಾದಂಬರಿ ಪ್ರಾರಂಭವಾಗುವಾಗ ಮಧುಮಿತಾ ಇನ್ನೂ ಸಂಗೀತ ಕಲಿತಿಲ್ಲ, ಕಲಿಯಬೇಕೆಂಬ ಅಪಾರವಾದ ಆಕೆಯ ಬಯಕೆಗೆ ಪ್ರತಿಯಾಗಿ ಮೋಹನ್‌ಲಾಲ್ ಅವಳನ್ನೇ ಕೇಳಿದ್ದಾನೆ. ಆಕೆಯ ಮದುವೆ ವಿಕ್ರಮ್‌ನೊಂದಿಗೆ ನಡೆದಾದ ಮೇಲೂ ಅವಳನ್ನು ಬಯಸುತ್ತಾನೆ. ಆಗ ಅವಳು ನಿರಾಕರಿಸುತ್ತಾಳೆ. ಅದಕ್ಕೆ ಅವನು ಕೋಪಗೊಳ್ಳುತ್ತಾನೆ ಎಂಬಲ್ಲಿಂದ ಕಾದಂಬರಿಯು ಮೊದಲುಗೊಳ್ಳುತ್ತದೆ. ಕತೆಯ ಕೊನೆಯಲ್ಲಿ ಅವಳು ಎದುರಿಗೆ ಕುಳಿತಿರುವಳೆಂದೆ ಕಸಿವಿಸಿಗೆ ಗುರುವಿಗೆ ಹಾಡಲಾಗಲಿಲ್ಲ. ಸ್ಫೂರ್ತಿಗಾಗಿ ಎಂದು ಅವಳನ್ನು ಅಲ್ಲಿ ಕೂರಿಸಿಕೊಂಡಿರುವ ಅವನಿಗೆ ಹಾಡಲಾಗುವುದಿಲ್ಲವೆಂಬ ಅನುಭವವಾಗುವುದು. ಅದರಿಂದಾಗಿ ಆಕೆಯನ್ನು ಅಲ್ಲಿಂದ ಎಬ್ಬಿಸುತ್ತಾನೆ. ಅವಳು ಎದ್ದ ನಂತರವು ಅವನಿಂದ ಹಾಡಲಾಗಲಿಲ್ಲ. ಕೊನೆಗೆ ಆಕೆಯೇ ಕಲ್ಯಾಣರಾಗವನ್ನು ಹಾಡುತ್ತಾಳೆ ಮಧುಮಿತಾ–ಮೋಹನ್‌ಲಾಲ್‌ರ ಕಾಮ ಸಂಬಂಧದ ಎಳೆ ಒಂದೆಡೆಯಾದರೆ ಸಂಕೀರ್ಣವಾದ ಇತರ ಎಳೆಗಳನ್ನು ಕಾದಂಬರಿಯ ಉದ್ದಕ್ಕೂ ತಂದಿರುತ್ತಾರೆ. ಚುನ್ನಿ, ಚಂಪಾ, ರಾಂಕುಮಾರಿ ಮನೋಹರಿ, ಭೂಪಾಲಿ ಮುಂತಾದ ಪಾತ್ರಗಳೊಂದಿಗೆ ಮೋಹನ್‌ಲಾಲ್‌ನ ಪಾತ್ರವನ್ನು ತಂದು ಆಯಾಯ ಎಳೆಯನ್ನು ಕಾದಂಬರಿಯಲ್ಲಿ ಹೆಣೆದಿರುತ್ತಾರೆ.

'ಶಿಲ್ಪ'ದ ದೃಷ್ಟಿಯಿಂದ ವಿವೇಚಿಸುವುದಾದರೆ ಕಾದಂಬರಿಯ ಕತೆಯ ಒಂದು ತುದಿಯಲ್ಲಿ ಮಧುಮಿತಾಳನ್ನು ತಂದರೆ, ಇನ್ನೊಂದು ತುದಿಯಲ್ಲಿ ಮನೋಹರಿಯನ್ನು ತಂದಿರುತ್ತಾರೆ. ಇವರಿಬ್ಬರ ವ್ಯಕ್ತಿತ್ವ ಉತ್ತರ–ದಕ್ಷಿಣ ಧ್ರುವ . ಒಬ್ಬಳು ಸಂಗೀತಗಾರ್ತಿಯಾದರೆ ಇನ್ನೊಬ್ಬಳು ಎಲ್ಲಾ ಬಲ್ಲ ಪ್ರಬುದ್ಧೆ. ಒಬ್ಬಳು ಗಂಡನಿಗೆ ಮೋಸ ಮಾಡಲು ಮನಸ್ಸೊಪ್ಪದೇ ಅವನನ್ನು ಬಿಟ್ಟು ಬಂದವಳು. ಇನ್ನೊಬ್ಬಳು ವೃದ್ಧ ಗಂಡನ ಎದುರೇ ಅವನಿಗೆ ತಿಳಿಯದಂತೆ ಪ್ರಿಯಕರನನ್ನು ಸೇರುವವಳು. ಇಂತಹ ಇಬ್ಬರ ವ್ಯಕ್ತಿತ್ವವನ್ನು ಮೋಹನ್‌ಲಾಲ್‌ರ ವ್ಯಕ್ತಿತ್ವದೊಂದಿಗೆ ಘರ್ಷಿಸುತ್ತಾ ಹೋಗುವಂತೆ

ಕಾದಂಬರಿಯ ಕಥಾತಂತ್ರವನ್ನು ಬೆಳೆಸುತ್ತಾರೆ. ಈ ಮಧ್ಯೆ ಚಂಪಾ, ರಾಂಕುಮಾರಿ ಒಂದು ತುದಿಯಲ್ಲಿ ನಿಂತರೆ ಲಾರೆನ್ಸ್ ಇನ್ನೊಂದು ತುದಿಯಲ್ಲಿ ಕಾಣಿಸಿಕೊಳ್ಳುತ್ತಾಳೆ. ಆದರೆ ಚುನ್ನೀಬಾಯಿಯನ್ನು ಬರೀ ನೆನಪಾಗಿ ಮಾತ್ರ ಉಳಿಸುತ್ತಾರೆ.

'ಮಂದ್ರ' ಕಾದಂಬರಿಯ 'ಶಿಲ್ಪ'ದಲ್ಲಿ ಗುರುತಿಸಿಬಹುದಾದ ಇನ್ನೊಂದು ಪ್ರಮುಖವಾದ ಅಂಶವೆಂದರೆ ನಾಯೆಕ ಮತ್ತು ಖಳನಾಯಕ ಎರಡು ಪಾತ್ರಗಳನ್ನು ಒಬ್ಬನೇ- ನಿರ್ವಹಸುವಂತೆ ರಚಿಸಿರುವುದು. ಕಲೆಯಿಂದ ಉತ್ತುಂಗ ಶಿಖರಕ್ಕೆ ಏರಿರುವ ಮೋಹನ್‌ಲಾಲ್ ನಾಯಕನಾಗಿ ಕಂಡು ಬಂದರೆ, ಸ್ತ್ರೀ ಲೋಲುಪತೆಯಿಂದ ಕೆಳಗೆ ಇಳಿಯುವುದರ ಮೂಲಕ ಖಳನಾಯಕನಂತೆ ತೋರುತ್ತದೆ. ಅದೇ ಮೋಹನ್‌ಲಾಲ್‌ನನ್ನು ಕೇಂದ್ರವಾಗಿಟ್ಟುಕೊಂಡು ಕಾದಂಬರಿಕಾರರು ಚುನ್ನಿ, ಚಂಪಾ, ರಾಂಕುಮಾರಿ, ಮನೋಹರಿ, ಮಧುಮಿತಾ ಭೂಪಾಲಿ ಎಂಬ ಇತರ ಪಾತ್ರಗಳನ್ನು ಬೆಳೆಸಿದ್ದಾರೆ.

ಕಾದಂಬರಿಯ ನಾಯಕಿ ಪಾತ್ರದಲ್ಲಿ ಮಧುಮಿತಾಳನ್ನು ತರುತ್ತಾರೆ. ಇದರಿಂದಲೇ ಕಾದಂಬರಿಯ ಪ್ರಾರಂಭ ಹಾಗೂ ಕೊನೆ ಈ ಪಾತ್ರದೊಂದಿಗೆ ಏರ್ಪಡುವ ಘಟನೆಗೆ ಸಂಬಂಧಿಸಿ ಬರುವಂತೆ ಕಾದಂಬರಿಕಾರರು ಕಾದಂಬರಿಯ 'ಕಥನಶಿಲ್ಪ'ವನ್ನು ರಚಿಸಿದ್ದಾರೆ. ಹಾಗೇಯೇ ಮೋಹನ್‌ಲಾಲ್ ಮತ್ತು ಮಧುಮಿತಾಳ ಪಾತ್ರದೊಂದಿಗೆ ಸಂಗೀತವು ಒಂದು ಜೀವಂತ ಪಾತ್ರವಾಗಿ ನಾಯಕನ ಸ್ಥಾನವನ್ನು ಪಡೆದುಕೊಂಡಿರುವಂತೆ ತೋರಿಬರುತ್ತದೆ. ಸಂಗೀತ (ಕಲೆ) ಎಂದೂ ನಿಲ್ಲುವುದಿಲ್ಲ, ಅವನತಿ ಹೊಂದುವುದಿಲ್ಲ ಎಂಬಂತೆ ಕಾದಂಬರಿಯಲ್ಲಿ ಒಂದು ಪರಂಪರೆಯಿಂದ ಇನ್ನೊಂದು ಪರಂಪರೆಗೆ ಮುಂದುವರಿಸಿಕೊಂಡು ಹೋಗುವಂತೆ ರಚಿಸಿದ್ದಾರೆ. ಮೋಹನ್‌ಲಾಲ್ ಸಂಗೀತದಲ್ಲಿ ಹಿಮ್ಮುಖಗೊಂಡಾಗ ಆತನ ಶಿಷ್ಯೆ ಮಧುಮಿತಾ ಸಂಗೀತದಲ್ಲಿ ಒಮ್ಮುಖವಾಗಿ ಕಾಣಿಸಿಕೊಳ್ಳುವಂತೆ ಕಥೆಯನ್ನು ಕಟ್ಟಿರುತ್ತಾರೆ.

'ಮಂದ್ರ' ಕಾದಂಬರಿಯನ್ನು ಕಾದಂಬರಿಕಾರರು ಸಾಹಿತ್ಯದ ಭಾಷೆಯಲ್ಲಿ ನಿರೂಪಿಸದೇ ಸಂಗೀತದ ಭಾಷೆಯಲ್ಲಿ ನಿರೂಪಿಸಿರುವುದು ಕೂಡ ಶಿಲ್ಪದ ದೃಷ್ಟಿಯಿಂದ ವಿಶೇಷವಾಗಿದೆ. "ಸಭಿಕರ ನಾಡಿ ನನಗೆ ಗೊತ್ತು. ಮುಂಬಯಿ ಸಭಿಕರದಂತೂ ನನಗಿಂತ ಬೇರೆಯರಿಗೆ ಗೊತ್ತು.? ನಿಧಾನವಾಗಿ ವಿಸ್ತಾರವಾಗಿ ಹಾಡಬೇಕು. ಇಂಥ ಶುದ್ಧ ಕಲ್ಯಾಣವನ್ನು ಹಿಂದೆ ಎಂದು ಎಲ್ಲಿಯೂ ಕೇಳಿಲ್ಲ ಅನ್ನುವ ಹಾಗೆ. ಮಂದ್ರಕ್ಕೆ ಇಳಿಯುವಾಗ ವಿಮಲ ಅವಕಾಶ ಅಲ್ಲಿಂದ ಏರುವಾಗ ಭೂಪಾಲಿ, ಉತ್ಸಾಹ ಅವಳು ಸರಿ ಯಾವಾಗಲೂ ಉತ್ಸಾಹ ಕಳೆದುಕೊಳ್ಳುವುದಿಲ್ಲ, ನಸೆನಸೆ ಇಲ್ಲ, ಹೋಗಿಬಿಟ್ಟಳು, ಹೋಗದೇ ಏನು ಮಾಡ್ತಾಳೆ ಇರು ಅನ್ನುವ ಇಟ್ಟುಕೊಳ್ಳುವ ಮನಸ್ಸು ನನಗೆ ಇಲ್ಲದಾಗ ಎಂಥ ಉತ್ಸಾಹವಿದ್ದರೂ ಮಂದ್ರಕ್ಕೆ ಇಳಿಯಲಾರಳು, ಇಳಿಸಲಾರಳು ಇಳಿಸುವ ಶಕ್ತಿ ಇರೂದು ಕಲ್ಯಾಣಿಗೆ ಮಾತ್ರ. ಇಳಿದಷ್ಟು ತಳ ಮುಟ್ಟಿದಷ್ಟೂ, ತಳದ ಪಡ್ಜ ಮಟ್ಟಿದಷ್ಟೂ ರಾಗದ ದರ್ಶವಾಗುತ್ತದೆ"[೧]. ಕಾದಂಬರಿಯ ಕೊನೆಯಲ್ಲಿ ಮೋಹನ್‌ಲಾಲ್‌ನಿಗೆ ಜ್ಞಾನೋದಯವಾಗುವ ಪರಿ ಇದು. ಆತ ಹತ್ತಾರು ಹೆಣ್ಣು ಮಕ್ಕಳ ಸಂಬಂಧವನ್ನಿಟ್ಟುಕೊಂಡವ ಅವರಿಗೆಲ್ಲಾ ಸಂಗೀತದ ಭಾಷೆಯ ಹೆಸರುಗಳನ್ನೆ ಇಟ್ಟುಕೊಂಡು ಕರೆಯುತ್ತಿದ್ದ. ಹಾಗಿರುವಾಗ ಇತರ ಎಲ್ಲಾ ಹೆಣ್ಣುಗಳಿಂದ ಕಲ್ಯಾಣಿ ಎಂಬ ಹೆಸರಿನ ಮಧುಮಿತಾಳ ಜೊತೆಗಿನ ಸಂಬಂಧ ಈತನಿಗೆ ಗಾಢವಾಗುವುದೂ ಮತ್ತು ಸಂಗೀತದಲ್ಲಿ ಕಲ್ಯಾಣಿರಾಗವೂ ಬಹು ಎತ್ತರದ ಧ್ವನಿ.

ಆದರೆ ಅದನ್ನು ಈ ಸಂದರ್ಭದಲ್ಲಿ ಆತನಿಗೆ ಅವರೋಹಣ ಮಾಡಲು ಕಷ್ಟವಾಗುತ್ತದೆ. ಆದರೆ ಕಾದಂಬರಿಯ ನಾಯಕಿ ಮಧುಮಿತಾ ಸಂಗೀತ ಕಲಿಕೆಗಾಗಿ ತನ್ನ ಕನ್ಯತ್ವವನ್ನು, ಸಾಧನೆಗಾಗಿ ದಾಂಪತ್ಯವನ್ನು ತ್ಯಾಗ ಮಾಡುತ್ತಾಳೆ. ಕಾದಂಬರಿಯ ಕೊನೆಯಲ್ಲಿ ಮಧುಮಿತಾಳ ಗೆಲುವುವೆಂದರೆ ಸಂಗೀತದ ಗೆಲುವು ಎಂಬುದಾಗಿ

---

[೧] 'ಮಂದ್ರ' ಪುಟ ೫೮೯ —ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೨೦೦೨.

ಕಾದಂಬರಿಕಾರರು ಅಂದುಕೊಂಡಿದ್ದಾರೆ. ಇಲ್ಲಿ ಕಾದಂಬರಿಕಾರರಿಗೆ ಕಲೆಯನ್ನು ಗೆಲ್ಲಿಸಬೇಕಾಗಿತ್ತೇ ಹೊರತು ಕಲಾವಿದನ ಜೀವನವನ್ನೆಲ್ಲ. ಕಲೆ ಬದುಕಿಗೆ ಹತ್ತಿರವಾಗಬೇಕು. ಕಲೆಯನ್ನು ಆರಾಧಿಸಬೇಕು. ಕಲಾಕಾರನಲ್ಲಿ ನಾವು ಕಲೆಯನ್ನು ನೋಡಬೇಕೆ ಹೊರತು ಕಲಾಕಾರನ ಜೀವನವನ್ನಲ್ಲ ಎನ್ನುವ ಸಾಮಾನ್ಯ ಧೋರಣೆಗೆ ತಕ್ಕುದಾಗಿ ಕಾದಂಬರಿಯ ಪಾತ್ರ ಘಟನೆಗಳನ್ನು ಸಂಯೋಜಿಸಿರುವಂತೆ ಹೊರನೋಟಕ್ಕೆ 'ಮಂದ್ರ'ದ ಕಥಾತಂತ್ರ ರೂಪುಗೊಂಡಿದೆ. ಆದರೆ ಆಂತರ್ಯದಲ್ಲಿ ಕಾಮದ ಹುಚ್ಚು ಹೊಳೆಯಲ್ಲಿ ತೇಲಿ ಹೋದ ಕಲಾವಿದನ ವಿಕೃತ ಕಾಮದ ಬದುಕಿನಿಂದ ಕಲೆಗೆ ಅಪಚಾರವಾದ ಸಂಗತಿ ಹಾಗಾಗಬಾರದು ಎನ್ನುವ ವಿಷಾದ ಅಂತರ್ಗತವಾಗಿದೆ. ಈ ದೃಷ್ಟಿಯಿಂದ 'ಮಂದ್ರ' ಭೈರಪ್ಪನವರ ಇತರ ಕಾದಂಬರಿಗಳಿಗಿಂತ ಭಿನ್ನವಾಗಿ ಕಲಾಜಗತ್ತಿನ ಬಗೆಗಿನ ಕಾಳಜಿಯಿಂದ ನಿರ್ಮಿತಿಗೊಂಡಂತೆ ತೋರಿಬರುತ್ತದೆ.

ಒಟ್ಟಿನಲ್ಲಿ 'ಮಂದ್ರ' ಕಾದಂಬರಿಯು ಸಂಪೂರ್ಣವಾಗಿ ಸಂಗೀತದ ಪರಿಭಾಷೆಯಲ್ಲಿಯೇ ರಚನೆಗೊಂಡಿದೆ ಎಂದು ಹೇಳಬಹುದು. ಸಂಗೀತದಲ್ಲಿ ಆರೋಹಣ-ಅವರೋಹಣಗಳು ಇರುವಂತೆ ಇಲ್ಲಿನ ನಾಯಕನ ಬದುಕಿನ ಚಿತ್ರಣವನ್ನು ಅದೇ ಕ್ರಮದಲ್ಲಿ ತಂದಿರುವುದು ಕಾದಂಬರಿಯ ಶಿಲ್ಪದ ದೃಷ್ಟಿಯಿಂದ ವಿಶೇಷವಾಗಿರುವುದು. ದೇಶಕುಲವರ್ಣಿಯವರ ಅಭಿಪ್ರಾಯದಲ್ಲಿ ಹೇಳುವುದಾದರೆ – "ಮೋಹನ್‌ಲಾಲ್ ತನ್ನ ಸಂಗಾತಿಗಳನ್ನ ಒಮ್ಮುಖದಲ್ಲಿ ಕ್ರಮಿಸಿ ಶಿಖರವನ್ನು ಮುಟ್ಟುತ್ತಿದ್ದಂತೆಯೇ, ಕಾದಂಬರಿಯ ಕೊನೆಗೆ ಹಿಮ್ಮುಖವಾಗಿ ನಡೆದು ಅವರನ್ನು ಸಂಪರ್ಕಿಸುತ್ತಾ, ಹಿಂತಿರುಗುವಾಗ ಅವರೆಲ್ಲರಿಂದಲೂ ಒಂದಲ್ಲ ಒಂದು ರೀತಿಯಲ್ಲಿ ಪರಾಭವ ಹೊಂದುವ ಗತಿಯು ಆರೋಹಣ ಅವರೋಹಣಗಳ ಪ್ರತಿಮಾತ್ಮಕ

ನಿರೂಪಣೆಯಾಗಿ ಕಾದಂಬರಿಯ ವಿನ್ಯಾಸದಲ್ಲಿ ಒಟ್ಟು ಸಂಗೀತ ಧ್ವನಿಯನ್ನು ಹೊಮ್ಮಿಸುತ್ತದೆ[೨].

ಸಂಗೀತದ ಶ್ರೇಷ್ಠತೆ, ಪ್ರಭಾವ, ಜೀವನದಲ್ಲಿ ಸಂಗೀತದ ಸ್ಥಾನದ ಬಗೆಗೆ ಈ ಕಾದಂಬರಿಯಲ್ಲಿ ಅದ್ಭುತ ಕಾಣ್ಕೆಗಳಿವೆ. ಇಲ್ಲಿ ಕಾಣ್ಕೆ ಪಾತ್ರದ ಕ್ರಿಯೆಗಳಲ್ಲಿ ಲೀನವಾಗಿ, ಪಾತ್ರಗಳ ಅನಿಭವವಾಗಿ, ರಾಗಭಾವಗಳಾಗಿ ಹರಿಯುತ್ತದೆ. ಈ ಕಾದಂಬರಿಯು ವರ್ತಮಾನದ ಚೌಕಟ್ಟಿನಲ್ಲಿ ಭೂತದ ಘಟನೆಗಳು ಪಾತ್ರಗಳ ಮನಸ್ಸಿನ ಮೂಲಕ, ಹಿನ್ನೋಟಗಳು, ಪ್ರಜ್ಞಾಪ್ರವಾಹದ ಮೂಲಕ ನಮ್ಮ ಮುಂದೆ ತೆರೆದುಕೊಳ್ಳುತ್ತವೆ. ಅಂದರೆ ಕಥೆಯ ನಿರೂಪಣೆ ವರ್ತಮಾನಕ್ಕೆ ಸೀಮಿತವಾಗಿದ್ದರೂ, ವರ್ತಮಾನದಲ್ಲಿ ಕಾಲ ಸ್ಥಗಿತಗೊಂಡು, ಆ ಚೌಕಟ್ಟಿನಲ್ಲಿ ಭೂತದ ಘಟನೆಗಳು ಚಲನಶೀಲತೆಯನ್ನು ಪಡೆದುಕೊಳ್ಳುತ್ತವೆ.

---

[೨] 'ಭೈರಪ್ಪಾಭಿನಂದನ' ಪುಟ ೧೭೭ – ಕೊಂಡಜ್ಜಿ ಕೆ.ವೆಂಕಟೇಶ. ಕೊಂಡಜ್ಜಿ ಪ್ರಕಾಶನ. ಬೆಂಗಳೂರು. ೧೯೯೩.

## 'ಆವರಣ'–ಕಥನಕ್ರಿಯೆ.

'ಆವರಣ' ಭೈರಪ್ಪನವರ 'ಮಂದ್ರ' ಕಾದಂಬರಿಯ ನಂತರದ ಮಹತ್ವದ ಬರವಣಿಗೆ. ಇದೊಂದು ಐತಿಹಾಸಿಕ ಅನ್ವೇಷಣೆಯ ಕಾದಂಬರಿ. ಈ ಕಾದಂಬರಿಯಲ್ಲಿನ ಕಥನ ಕ್ರಿಯೆ ಎರಡು ಪಾತಳಿಗಳಲ್ಲಿ ರೂಪಿತವಾಗಿದೆ, ಒಂದು ಪಾತಳಿ ೧೭ ನೇ ಶತಮಾನಕ್ಕೆ ಸಂಬಂಧಿಸಿದ್ದರೆ ಇನ್ನೊಂದು ಪಾತಳಿ ಸಮಕಾಲೀನ ಸಾಮಾಜಿಕ ಸಾಂಸ್ಕೃತಿಕ ಚರಿತ್ರೆಯಾಗಿದೆ. ೧೪- ೧೭ ನೇ ಶತಮಾನಗಳ ಹಿಂದೂಗಳು ಮತ್ತು ಮುಸ್ಲಿಮರ ಸಂಬಂಧವನ್ನು ವಸ್ತುವನ್ನಾಗಿರಿಸಿಕೊಂಡು ರಚಿತಗೊಂಡಿರುವ 'ಆವರಣ' ಕಾದಂಬರಿಯು ಎರಡು ನಾಗರೀಕತೆಗಳ ಎರಡು ಸಂಸ್ಕೃತಿಗಳ ಸಂಘರ್ಷದ 'ಕಥನಶಿಲ್ಪ'ವನ್ನು ಒಳಗೊಂಡಿದೆ.

'ಆವರಣ' ಕಾದಂಬರಿಯ 'ಕಥನಶಿಲ್ಪ'ದ ಹಂದರ ಹೀಗಿದೆ. ನರಸಾಪುರವೆಂಬ ಒಂದು ಹಳ್ಳಿಯಲ್ಲಿ ಗೌಡರ ಮನೆತನದಲ್ಲಿ ಹುಟ್ಟಿ ಬೆಳೆಯುವ ಲಕ್ಷ್ಮೀ ಆಧುನಿಕ ಶಿಕ್ಷಣವನ್ನು ಪಡೆದು, ಪುಣೆಯ ಫಿಲ್ಮ ಇನ್ಸ್ಟ್ಯೂಟ್‌ನಲ್ಲಿ ತರಬೇತಿ ಪಡೆಯುವಾಗ ಸಹಪಾಠಿಯಾಗಿದ್ದ ಅಮೀರ್ ಎಂಬ ಮುಸ್ಲಿಂ ಯುವಕನನ್ನು ಪ್ರೀತಿಸಿ ಮತಾಂತರಗೊಂಡು, ಅವನನ್ನು ಮದುವೆಯಾಗಿ ತನ್ನ ಹೆಸರನ್ನು ರಜಿಯಾ ಎಂದು ಬದಲಾಯಿಸಿಕೊಳ್ಳುತ್ತಾಳೆ. ಕಾಲಕ್ರಮದಲ್ಲಿ ತನ್ನ ಗಂಡನ ಮನೆಯ ಸಾಂಪ್ರದಾಯಿಕ ಮುಸ್ಲಿಂ ಮತಾಚರಣೆ – ನಂಬಿಕೆಗಳಿಂದ ಮತ್ತು ನೇರವಾಗಿ ಅವಳ ಪಕ್ಷವನ್ನು ವಹಿಸಿದ ಅಮೀರನ ವರ್ತನೆಯಿಂದ ಅವಳ ವೈವಾಹಿಕ ಜೀವನ ದುರ್ಭರವಾಗುತ್ತದೆ. ಈ ಸಂದರ್ಭದಲ್ಲಿಯೇ ಅವಳ ತಂದೆಯ ಸಾವಿನಿಂದಾಗಿ ಅವಳು ಊರಿಗೆ ಹೋದಾಗ, ಅಲ್ಲಿ ಅವಳ ತಂದೆ ಒಂದು ಚಾರಿತ್ರಿಕ ಕೃತಿಯನ್ನು ಬರೆಯಲು ಸಂಗ್ರಹಿಸಿದ್ದ, ಮಧ್ಯಕಾಲೀನ ಭಾರತವನ್ನು ಕುರಿತ ಗ್ರಂಥಗಳನ್ನು ಕಂಡು ಚಕಿತಳಾಗುತ್ತಾಳೆ. ಅವುಗಳನ್ನು ಓದುತ್ತಾ ಹೋದಂತೆ ತನ್ನ ತಂದೆ ಬರೆಯಬೇಕೆಂದಿದ್ದ ಚರಿತ್ರೆಗೆ ಬದಲು ಅದೇ

ವಸ್ತುವನ್ನು ಬಳಸಿಕೊಂಡು ಅವಳು ಒಂದು ಕಾದಂಬರಿಯನ್ನು ಬರೆಯುತ್ತಾಳೆ. ಆ ಕಾದಂಬರಿ ೧೬ನೆಯ ಶತಮಾನದ ರಾಜಕುಮಾರನು ಒಂದು ಸಂದರ್ಭದಲ್ಲಿ ಮುಸ್ಲಿಂ ದಾಳಿಗೆ ತುತ್ತಾಗಿ ಅವರಿಗೆ ಸೆರೆ ಸಿಕ್ಕಿ ಅವರ ಬಲಾತ್ಕಾರದಿಂದ ಹಿಜಡಾ ಆಗಿ, ಅನೇಕ ಅಂತಃಪುರಗಳಲ್ಲಿ ಸೇವೆ ಮಾಡುತ್ತ ಆ ಕಾಲಘಟ್ಟದಲ್ಲಾಗುವ ಮುಸ್ಲಿಂ ನವಾಬ್ ಬಾದಷಹರುಗಳ ಅನೇಕ ಕೃತ್ಯಗಳ ಸಾಕ್ಷಿಯಾಗುತ್ತಾನೆ. ಕೊನೆಗೆ ತನ್ನ ಪತ್ನಿಯೂ ಅಂತಹುದೇ ಅಂತಃಪುರವೊಂದರಲ್ಲಿ ದಾಸಿಯಾಗಿರುವುದು ಗೊತ್ತಾಗಿ ಇಬ್ಬರೂ ಅಲ್ಲಿಂದ ತಪ್ಪಿಸಿಕೊಂಡು ಓಡಿ ಹೋಗುವ ನಿರ್ಧಾರವನ್ನು ತಳೆಯುತ್ತಾರೆ. ಈ ಕಾದಂಬರಿಯನ್ನು ಪ್ರಕಟಿಸಲು ಯಾರೂ ಮುಂದೆ ಬರದಿದ್ದಾಗ ಲಕ್ಷ್ಮೀ ತಾನೇ ಪ್ರಕಟಿಸಿ ಗ್ರಂಥ ಭಂಡಾರಗಳಿಗೆ ಕೊಡುತ್ತಾಳೆ. ಆ ಕಾದಂಬರಿಯನ್ನು ಸಾಮಾಜಿಕ ಸಾಮರಸ್ಯಕ್ಕೆ ಧಕ್ಕೆ ತರುತ್ತಿದೆನ್ನುವ ಕಾರಣ ಕೊಟ್ಟು ಸರ್ಕಾರ ಮುಟ್ಟುಗೋಲು ಹಾಕಿಕೊಳ್ಳುತ್ತದೆ. ಲೇಖಕಿ ಲಕ್ಷ್ಮೀಯನ್ನು ಬಂಧಿಸುವ ಸಾಧ್ಯತೆಯಿರುವ ವಾತಾವರಣದಲ್ಲಿ ಅಮೀರ್ ಅಲ್ಲಿಗೆ ಬಂದು ಲಕ್ಷ್ಮೀಯನ್ನು ಸುರಕ್ಷಿತ ಸ್ಥಳಕ್ಕೆ ಕರೆದೊಯ್ಯುತ್ತಾನೆ. ತಾನೆ ಬರೆದಿರುವ ಕಾದಂಬರಿಯ ನಿಷೇಧದ ಪ್ರಶ್ನೆ ನ್ಯಾಯಾಲಯದ ಮೆಟ್ಟಿಲನ್ನೇರಿದರೆ, ತನ್ನ ಸಮರ್ಥನೆಯನ್ನು ಮಾಡಿಕೊಳ್ಳಲು ಲಕ್ಷ್ಮೀ ಸಿದ್ಧವಾಗುತ್ತಿರುವಲ್ಲಿಗೆ ಕಾದಂಬರಿ ಕೊನೆಗೊಳ್ಳುತ್ತದೆ.

ಕಾದಂಬರಿಯಲ್ಲಿ ನಿರೂಪಿತವಾಗಿರುವ ಹಿಂದು-ಮುಸ್ಲಿಮ್ ಘರ್ಷಣೆಯು ಎರಡು ಕಾಲಘಟ್ಟಗಳಲ್ಲಿ ನಡೆಯುತ್ತದೆ. ಕಥಾನಾಯಕಿ ಲಕ್ಷ್ಮೀ ಉರೂಫ್ ರಜಿಯಾ, ಅವಳ ಗಂಡ ಅಮೀರ್, ಬಾಬರಿ ಮಸೀದಿಯ ಧ್ವಂಸ ಇತ್ಯಾದಿ, ಪಾತ್ರ, ಘಟನೆಗಳನ್ನು ಒಳಗೊಳ್ಳುವ ಆಧುನಿಕ ಕಾಲ ಮತ್ತು ಲಕ್ಷ್ಮೀ ಬರೆಯುವ ಕಾದಂಬರಿಯು ಚಿತ್ರಿಸುವ ೧೭-೧೮ನೆಯ ಶತಮಾನಗಳ ಕಾಲಘಟ್ಟ. 'ಆವರಣ' ಕಾದಂಬರಿಯಲ್ಲಿ ಭೈರಪ್ಪನವರೇ ಕೃತಿಯೊಳಗೊಂದು ಕೃತಿಯ ತಂತ್ರವನ್ನು ಬಳಸಿರುತ್ತಾರೆ.

ಡಾ॥ ಸುಮತೀಂದ್ರ ನಾಡಗರು 'ಆವರಣ' ಕಾದಂಬರಿಯ ರಚನೆಗೆ ಸಂಬಂಧಿಸಿ ಈ ರೀತಿಯಾಗಿ ಅಭಿಪ್ರಾಯಪಡುತ್ತಾರೆ. "ಸಮಕಾಲಿನ ಕೋಶದೊಳಗೊಂದು ಐತಿಹಾಸಿಕ ಕೋಶವಿರುವ ಈ ಕಾದಂಬರಿಯನ್ನು ಐತಿಹಾಸಿಕ ಕಾದಂಬರಿಯೆಂದು ಕರೆಯುವುದು ಸರಿಯೇ? ಇದರಲ್ಲಿ ಸಾಮಾಜಿಕ–ಐತಿಹಾಸಿಕ ವಸ್ತುಗಳೆರಡು ಸೇರಿರುವುದರಿಂದ ಇದೊಂದು ರೀತಿಯ ಜರದಾರು ಅಥವಾ ಸಕ್ಕರೆ ಬಾದಾಮಿಯ ಹಾಗೆ, ಮೇಲೆ ಸಿಹಿಯಾದ ಮೃದುವಾದ ಕವಚ, ಅದರೊಳಗೆ ಗಟ್ಟಿ ಸಿಪ್ಪೆಯ ಒಳಗೆ ಬಾದಾಮಿಯ ಜೀವ, ಮೊದಲು ಇದರ ಆಕೃತಿ ಹೊರಗೆ ಸೇರಿರುವ ತೆಂಗಿನ ಮೊಟ್ಟೆಯ ಒಳಗೆ ಕರಟದೊಳಗೆ ತಿರುಳು ಮತ್ತು ಎಳನೀರಿರುವ ತೆಂಗಿನ ಕಾಯಿಯ ಹಾಗೆ ಅನ್ನಿಸಿತ್ತು. ಆದರೆ ಈ ಕಾದಂಬರಿಯ ಹೊರಕವಚವು ಶೋಚಕವಾಗಿರುವುದರಿಂದ ತೆಂಗಿನ ಮೊಟ್ಟೆಯ ಹೋಲಿಕೆ ಸರಿಯಲ್ಲವೆನ್ನಿಸಿತು. ಇದನ್ನು ಸಕ್ಕರೆ ಬಾದಾಮಿಗೆ ಯಾಕೆ ಹೋಲಿಸುತ್ತೇನೆಂದರೆ ಆ ರೀತಿಯ ಸಾವಯವತೆ ಈ ಕಾದಂಬರಿಯಲ್ಲಿದೆ"[೧].

'ಆವರಣ' ಕಾದಂಬರಿಯ ರಚನ ತಂತ್ರದಲ್ಲಿ ಭೈರಪ್ಪನವರು ತನ್ನ ಇದುವರೆಗಿನ ಯಾವ ಕಾದಂಬರಿ ರಚನೆಯಲ್ಲಿಯೂ ಕೂಡ ಬಳಸದ ಒಂದು ವಿಶಿಷ್ಟತ ತಂತ್ರವನ್ನು ಹೆಣೆದಿದ್ದಾರೆ. "ಕಾದಂಬರಿಗೊಂದು ಪ್ರವೇಶ" ಅಧ್ಯಾಯದಲ್ಲಿ ಲೇಖಕರು ತಮ್ಮ ಕೃತಿಯ ಹೆಸರು, ವಸ್ತು ಮತ್ತು ಕಾದಂಬರಿಯ ಉದ್ದೇಶವನ್ನು ಸ್ಪಷ್ಟಪಡಿಸಿದ್ದಾರೆ. ಚರಿತ್ರೆಯ ವಿವಿಧ ಘಟ್ಟಗಳನ್ನು ವಿವಿಧ ಸಂದರ್ಭಗಳನ್ನು ಬೇರೇ ಬೇರೇ ಚಾರಿತ್ರಿಕ ವ್ಯಕ್ತಿಗಳನ್ನು ವ್ಯಾಖ್ಯಾನಿಸಲು ಸಾಧನವಾಗಿ ಸಮಕಾಲೀನ ಕತೆಯೊಂದರ ಚೌಕಟ್ಟನ್ನು ಕಾದಂಬರಿಗೆ ಕಲ್ಪಿಸಿಕೊಳ್ಳಲಾಗಿದೆ.

---

[೧] 'ಆವರಣ'. ಪುಟ ಸಂಖ್ಯೆ ೬೭. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೨೦೦೭.

"ಸತ್ಯವನ್ನು ಮರೆಮಾಚುವ ಕಾರ್ಯವೇ 'ಆವರಣ' ಕಾದಂಬರಿಕಾರರ ಪ್ರಕಾರ ಸೆಕ್ಯುಲರ್ವಾದಿ ಚರಿತ್ರೆಗಾರರು ಸತ್ಯವನ್ನು ಮರೆಮಾಚಿದ್ದಾರೆ. ಅದನ್ನು ಸರಿಪಡಿಸಲು ಈ ಕಾದಂಬರಿ ರಚಿಸಲಾಗಿದೆ ಎಂದಿದ್ದಾರೆ. 'ಆವರಣ' ಕಾದಂಬರಿಯನ್ನು ಭೈರಪ್ಪನವರು ಮೂರು ಕಥಾನಕಗಳಿಂದ ಹೆಣೆದಿದ್ದಾರೆ. ಮೊಧಲ ಕಥಾನಕ ಕಾದಂಬರಿಯ ಕೇಂದ್ರ ಪಾತ್ರ ಲಕ್ಷ್ಮೀ/ರಜಿಯಾಳಿಗೆ ಸಂಬಂಧಿಸಿ ಬರುತ್ತದೆ. ಮೊದಲ ಕಥಾನಕಕ್ಕೆ ಹೊಂದಿಕೊಂಡೇ ಎರಡನೇ ಕಥಾನಕ ನಿರ್ಮಾಣಗೊಂಡಿರುತ್ತದೆ. ಇಲ್ಲಿ ಲಕ್ಷ್ಮೀ/ರಜಿಯಾಳ ಪಾತ್ರಕ್ಕೆ ಹೊಂದಿಕೊಂಡು ಸಮಾನಾಂತರವಾಗಿ ಪ್ರೊ.ಶಾಸ್ತ್ರಿಯವರ ಪಾತ್ರ ಸೃಷ್ಟಿಯಾಗಿರುತ್ತದೆ. ಮೂರನೇ ಕಥಾನಕದಲ್ಲಿ ಲಕ್ಷ್ಮೀ ರಚಿಸಿದ ಕಿರು ಕಾದಂಬರಿಯೊಂದರ ಉಪಕಥೆಯೂ 'ಆವರಣ'ದ ಕಥಾ ಚೌಕಟ್ಟಿನಲ್ಲಿ ಸಮ್ಮಿಲನಗೊಂಡಿದೆ.

ಈ ಕಾದಂಬರಿಯ ಕಥಾರಂಭ ಹಂಪಿಯಲ್ಲಾಗುತ್ತದೆ. ಹೊಸಪೇಟೆಯ ತುಂಗಭದ್ರಾ ಅಣೆಕಟ್ಟೆಯ ಸರ್ಕಾರಿ ಅತಿಥಿಗೃಹದಲ್ಲಿ ತಂಗಿದ್ದ, ಹಂಪಿಯ ಬಗೆಗೆ ಸಾಕ್ಷ್ಯಚಿತ್ರ ತಯಾರಿಸಲು ಬಂದಿದ್ದ ಲಕ್ಷ್ಮೀ ಅಮೀರನ ಚರ್ಚೆಯ ಮೂಲಕ ಆರಂಭವಾಗಿ ಮುಂದೆ ಸಾಗುತ್ತದೆ.

"ಪ್ರಸ್ತಾವನೆ, ಹಿನ್ನೆಲೆಯ ವ್ಯಾಖ್ಯಾನ ಹೇಳುವುದು ಅಷ್ಟು ಸುಲಭವಲ್ಲ. ಕ್ಯಾಮರದಲ್ಲಿ ವಾಸ್ತವ ಸಂಗತಿಗಳನ್ನು ತೋರಿಸುವಾಗ ಅವುಗಳ ನಿಜವಾದ ಕಾರಣವನ್ನು ವ್ಯಾಖ್ಯಾನದಲ್ಲಿ ಹೇಳಲೇ ಬೇಕಾಗುತ್ತದೆ. ಇಲ್ಲದಿದ್ದರೆ ಇವರದು ಸುಳ್ಳು ವ್ಯಾಖ್ಯಾನ ಅಂತ ಪ್ರೇಕ್ಷಕರು ತಕ್ಷಣ ನಿರ್ಧರಿಸಿ ಬಿಡ್ತಾರೆ. ಮನುಷ್ಯನ ಕಣ್ಣುಗಳಿಗಿಂತ ಕ್ಯಾಮರಾದ ಕಣ್ಣು ಸಾವಿರಪಾಲು ಶಕ್ತಿಶಾಲಿ. ಈ ಮುಜುಗರಬೇಡ ಅನ್ನೋದಾದರೆ ಅಂಥ ವಾಸ್ತವ ಸಂಗತಿಗಳನ್ನೆಲ್ಲ ಕೈ ಬಿಡಬೇಕು. ಅವನ್ನು ಕೈ ಬಿಟ್ಟು ಹಂಪಿಯನ್ನು ಕುರಿತು ಎಂಥ ಸಾಕ್ಷ್ಯಚಿತ್ರ ತಯಾರಿಸುವುದಕ್ಕೆ ಸಾಧ್ಯ? ಅವಳು ಮಾತನ್ನಾಡಿದ್ದರಿಂದ ಅವನಿಗೆ ತಾನು

ನಿರಾಳವಾಯಿತು. ಉದಾಹರಣೆ ಕೊಟ್ಟು ನೇರವಾಗಿ ಹೇಳು, ಮಜುಗರ, ಸುಳ್ಳು ನಿಜಗಳ ಪ್ರಶ್ನೆಯನ್ನು ಬಗೆಹರಿಸಿಕೊಳ್ಳುವ ಶಕ್ತಿ ಕಲಾವಿದನಿಗೆ ಇರುವಷ್ಟು ಬೇರೇ ಯಾರಿಗೂ ಇಲ್ಲ ಅನ್ನೂದು ನನಗೂ ಗೊತ್ತಿದೆ"[೨]. ಹೀಗೆ ಮುನಿಸು ಚರ್ಚೆಯಲ್ಲಿ ಪ್ರಾರಂಭಗೊಳ್ಳುವ ಕಾದಂಬರಿಯು ಮುಂದೆ ಲಕ್ಷ್ಮೀಯ ನೆನೆಪುಗಳು, ಆಲೋಚನೆಗಳು, ಸ್ವಗತಗಳ ಮೂಲಕ ಒಂದು ಆಕಾರ ಪಡೆಯುತ್ತ ಹೋಗುತ್ತದೆ.

"ಕಣ್ಣುಮುಚ್ಚಲಿ, ಬಿಡಲಿ ಕತ್ತಲೆಯಲ್ಲೂ, ಕೈಕಾಲುಗಳನ್ನು ತುಂಡರಿಸಿ ಭಿನ್ನ ಮಾಡಿದ ಆ ದೊಡ್ಡ ನರಸಿಂಹನಮೂರ್ತಿ ದೃಷ್ಟಿಯನ್ನು ತುಂಬಿಕೊಂಡಿತ್ತು. ನರಸಿಂಹನೆಂದರೆ ತೊಡೆಯ ಮೇಲೆ ಹಾಕಿಕೊಂಡು ಕರುಳನ್ನು ಬಗೆಯುತ್ತಿರುವ ಹಿರಣ್ಯಕಶ್ಯಪ ರಾಕ್ಷಸನಿರಬೇಕು. ಆದರೆ ಇಲ್ಲಿ ಅದನ್ನು ಒಡೆದು ಇಲ್ಲದಂತೆ ಮಾಡಿದ್ದಾರೆ. ಹಂಪಿಯಲ್ಲಿ ವಿಘ್ನಗೊಂಡ ಸಾವಿರಾರು ವಿಗ್ರಹಗಳಲ್ಲಿ ಇದೊಂದೇ ಯಾಕೆ ಒಂದೇ ಸಮನೆ ನೆನಪನ್ನು ಕಾಡುತ್ತಿದೆ.? ಇಪ್ಪತ್ತೆಂಟು ವರ್ಷವಾದ ಮೇಲೆ ಇವತ್ತು ಯಾಕೆ ಕೈಕಾಲು ಮುರಿಸಿಕೊಂಡು ಮುಕ್ಕಾದ ಈ ಹಂಪಿಯ ನರಸಿಂಹನು, ಅವನ ಮೂಲಕ ತನ್ನ ಹುಟ್ಟೂರಿನ ಸಂಬಂಧ ಸತ್ತುಹೋದ ತೌರಿನ ನರಸಿಂಹದೇವರು ನನ್ನನ್ನು ಏಕೆ ಕಾಡಬೇಕು? ಎಂದು ಮನಸ್ಸನ್ನು ತಡಕಿಕೊಂಡಳು"[೩].

'ಆವರಣ' ಕಾದಂಬರಿಯು ಕಥೆಯೊಳಗೊಂದು ಕಥೆಯ ಸ್ವರೂಪದಲ್ಲಿ ರಚನೆಗೊಂಡಿದೆ. ಒಂದು ಕಥೆಯ ನಿರೂಪಕಿ ಲಕ್ಷ್ಮೀ/ರಜಿಯಾಳೇ ಕಥಾನಾಯಕಿ. ಇದು ನಾಯಕಿ ಪ್ರಧಾನವಾದ ಕಥೆ. ಇನ್ನೊಂದು ಕಥೆ ಔರಂಗಜೇಬನ ಸೈನ್ಯಕ್ಕೆ ಯುದ್ಧದಲ್ಲಿ ಸೆರೆಸಿಕ್ಕ ರಜಪೂತ್ ರಾಜಕುಮಾರನ ಕಥೆ. ನಿರೂಪಕನಾಗಿ ಸ್ವತಃ ತೆರೆದುಕೊಳ್ಳುವ ಅವನು ಅನುಭವಿಸಿದ ಸಂಕಷ್ಟಗಳ ಸರಮಾಲೆ ಕಥೆಯಲ್ಲಿ ನಿರೂಪಿತವಾಗಿದೆ. ಎರಡು

---

[೨] 'ಆವರಣ' ಪುಟ ಸಂಖ್ಯೆ ೧೬ ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೨೦೦೭.
[೩] 'ಆವರಣ' ಪುಟ ಸಂಖ್ಯೆ ೧೯ ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೨೦೦೭

ಕಥೆಗಳಿಂದ ಕಟ್ಟಲ್ಪಟ್ಟಿರುವ 'ಆವರಣ' ಕಾದಂಬರಿಯ ವಸ್ತು ಮತ್ತು ಕ್ರಿಯೆ ಸಮಕಾಲೀನ ಮತ್ತು ೧೭ ನೇ ಶತಮಾನದ ಸಂಕೀರ್ಣವಾದ ಕಾಲಘಟ್ಟದಲ್ಲಿನ ಸಂಗತಿಗಳನ್ನು, ಸನ್ನಿವೇಶಗಳನ್ನು, ಘಟನೆಗಳನ್ನು ಒಳಗೊಂಡಿದ್ದು ಎರಡು ಧಾರೆಗಳಾಗಿ ಸಮಾನಾಂತರದಲ್ಲಿ ಪ್ರವಹಿಸುತ್ತದೆ.

ರಜಿಯಾ ಅಮೀರರ ಪ್ರೇಮ ವಿವಾಹ, ದಾಂಪತ್ಯ, ವಿರಸ, ನರಸಿಂಹೇಗೌಡರ ಐತಿಹಾಸಿಕ ಅನ್ವೇಷಕ ಬದುಕು ತತ್ವ ನಿಷ್ಠೆ ಕೇವಲ ಪ್ರಚಾರ ಪ್ರಿಯತೆಗೆ ಒಳಗಾದ, ಪೀಡೋ ಇಂಟೆಲೆಕ್ಚುಯಲ್ ಆಗಿ ಕಾಣುವ ಶಾಸ್ತ್ರಿಯ ನೆಲೆ ನಿಲ್ಲದ ಅಲೆದಾಟ ಇತ್ಯಾದಿ ಸಮಕಾಲೀನ ಧಾರೆಯ ಅಂತರ್ಗತ ಭಾಗಗಳಾದರೆ, ಔರಂಗಜೇಬನ ಆಡಳಿತದಲ್ಲಿನ ಕ್ರೌರ್ಯ, ಮತಾಂಧತೆಯಿಂದಾಗಿ ಹಿಂದುಗಳು ಅನುಭವಿಸಿದ ಹಿಂಸೆ, ಯಾತನೆ ಇವುಗಳ ಚಿತ್ರಣ ಮತ್ತೊಂದು ಧಾರೆಯಾಗಿದೆ.

ಹಿಂದೂವಾಗಿದ್ದ ಲಕ್ಷ್ಮೀ ಮತಾಂತರದ ಮೂಲಕ ಮುಸ್ಲಿಮಳಾದ ರಜಿಯಾ ಮೇಲೆ ಹೇಳಿದಂತೆ ಈ ಎರಡೂ ಧಾರೆಗಳನ್ನು ಗತಿಶೀಲವಾಗಿ ಮುನ್ನಡಿಸುವ ಚಾಲಕ ಶಕ್ತಿಯಾಗುತ್ತಾಳೆ. ಕಥಾನಾಯಕಿಯ ಮೂಲಕ ಚರಿತ್ರೆಯ ವಿವಿಧ ಸಂಗತಿಗಳನ್ನು, ವ್ಯಕ್ತಿವಿವರಗಳನ್ನು, ವಿವಿಧ ಎಳೆಗಳನ್ನು ಜೋಡಿಸುವ ಪರಿಣತ ನೇಕಾರರಂತೆ ಸಂದರ್ಭ, ಸನ್ನಿವೇಶಕ್ಕನುಗುಣವಾಗಿ ಕಾದಂಬರಿಕಾರರು ಕಾದಂಬರಿಯ 'ಕಥನಶಿಲ್ಪ'ವನ್ನು ರೂಪಿಸಿದ್ದಾರೆ.

'ಆವರಣ'ದ ಎಲ್ಲಾ ಪಾತ್ರಗಳು ಓದುಗರತ್ತ ಮುಖ ಮಾಡಿ ಭಾಷಣಗಳಂತಹ ಸಂಭಾಷಣೆಗಳನ್ನು ಒಪ್ಪಿಸುವುದು ಶಿಲ್ಪದ ದೃಷ್ಟಿಯಿಂದ ಗುರುತಿಸಲ್ಪಡುವ ವಿಚಾರ. ತನ್ನ ತಾಯಿಯನ್ನು ಉದ್ದೇಶಿಸಿ ನಜೀರ್ ಹೇಳುತ್ತಾನೆ. "ಅಮ್ಮಾಜಾನ್, ಅಷ್ಟು ದೂರದಿಂದ ಬಂದು ತಾಯಿಯ ಹತ್ತಿರ ಧಾರ್ಮಿಕ ವಿಷಯದ

ವಾಗ್ವಾದ ಹೂಡುವುದು ಸಂತೋಷದ ವಿಷಯವಲ್ಲ"[೪] ಪ್ರಸಂಗದಲ್ಲಿ ವಾಸ್ತವವಾಗಿ ರಜಿಯಾ/ಲಕ್ಷ್ಮೀ ಮತ್ತು ಅವಳ ಮಗ ನಜೀರ ಪರಸ್ಪರ ಮಾತಾಡಿಕೊಳ್ಳುತ್ತಿಲ್ಲ. ಅವರಿಬ್ಬರೂ ಓದುಗರ ಉದ್ದೇಶಿಸಿ ಮಾತಾಡುವಂತೆ ತೋರುತ್ತದೆ.

"ಹಿಂದುಗಳು ಮತ್ತು ಮುಸಲ್ಮಾನರು ಹೀಗೆ ಬದುಕಿದರೆ ಸಮಾಜದಲ್ಲಿ ಮತ್ತು ದೇಶದಲ್ಲಿ ಶಾಂತಿ ನೆಲಸುತ್ತದೆಂದು ತೋರಿಸುವುದು ಭೈರಪ್ಪನವರ 'ಆವರಣ' ಕಾದಂಬರಿಯ ತಿರುಳಾಗಿದೆ. ಹಾಗಂತ ಇದು ಸರಳವಾದ ನೀತಿಯನ್ನು ಬೋಧಿಸುವುದಿಲ್ಲ. ಸಹಬಾಳ್ವೆಗೆ, ಸತ್ಯನಿಷ್ಠೆ ಬೇಕು ಮತ್ತು ತ್ಯಾಗಬೇಕು. ಆದರೆ ಹಿಂದೆ ವಿಚಾರವಂತಿಕೆ ಬೇಕು. ಪರೇಂಗಿತಜ್ಞತೆ ಬೇಕು. ಯಾವುದೇ ಆಗಲಿ ಪ್ರಶ್ನಿಸುವ ಬುದ್ಧಿಬೇಕು. ಇನ್ನೊಬ್ಬರ ಅಭಿಪ್ರಾಯವನ್ನು ರೀತಿ- ನೀತಿಯನ್ನು ನಂಬಿಕೆಗಳನ್ನು ತಿಳಿದುಕೊಳ್ಳುವ ಆಸಕ್ತಿ ಬೇಕು ಮತ್ತು ಪರಮತ ಸಹಿಷ್ಣುತೆ ಬೇಕೆನ್ನುವುದನ್ನು ಪಾತ್ರಗಳ ಸರಿ ನಡವಳಿಕೆಗಳ ಪರಿಣಾಮಗಳ ಮೂಲಕ ಈ ಕಾದಂಬರಿ ತೋರಿಸುತ್ತದೆ."[೫]

ಮೇಲಿನ ವಿಶ್ಲೇಷಣಾತ್ಮಕ ಪ್ರಕ್ರಿಯೆಯ ನೆಲೆಯಲ್ಲಿ 'ಆವರಣ'ವನ್ನು ಗಮನಿಸಿದಾಗ ಸಮಕಾಲೀನ ಸಾಮಾಜಿಕ ಸಮಸ್ಯೆಯೊಂದಕ್ಕೆ ಕಾದಂಬರಿಕಾರರಾಗಿ ಭೈರಪ್ಪನವರು ತಡಕಾಡಿ ಕಂಡುಕೊಂಡ ಉತ್ತರದಂತೆ ಸಮಗ್ರ ಕಾದಂಬರಿಯ ಓದು ನಮಗೆ ಹೊಸ ಅನುಭವವೊಂದನ್ನು ದಕ್ಕಿಸಿಕೊಡುತ್ತದೆ. ಭಯೋತ್ಪಾದನೆ, ಮತೀಯ ವೈಷಮ್ಯ ಇವುಗಳಿಂದ ನಲುಗಿರುವ ಹಿಂದು ಮುಸ್ಲಿಂ ಸಮುದಾಯ ಸಮರಸತೆಯತ್ತ ಮುಖಮಾಡಬೇಕಾದ ಅನಿವಾರ್ಯತೆಯನ್ನು 'ಆವರಣ' ಹೇಳುವಂತೆ ತೋರುತ್ತದೆ. ಹಿಂದೂ-ಮುಸ್ಲಿಂ ದ್ವೇಷ ಭಾವವನ್ನು ಈ ಕಾದಂಬರಿ ಕೆಣಕುತ್ತವೆ ಎನ್ನುವ ಅಭಿಪ್ರಾಯದ ಪ್ರತಿಕ್ರಿಯೆ ಈ ಕಾದಂಬರಿಗೆ ದಕ್ಕಿರುವುದುಂಟು. ಆದರೆ ಈ ಅರಿಸ್ಟಾಟಲ್

---

[೪] 'ಆವರಣ' ಪುಟ ಸಂಖ್ಯೆ ೧೨೯ ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೨೦೦೭.

[೫] ವಿಜಯ ಕರ್ನಾಟಕ ದಿನಪತ್ರಿಕೆ ಭಾನುವಾರ ೧೮ ಫೆಬ್ರವರಿ ೦೮.

ಹೇಳಿರುವ ಕಥಾತಂತ್ರ ಈ ಕಾದಂಬರಿಯ ಓದನ್ನು ಸಹ್ಯವಾಗಿಸಬಹುದೆನೋ ಅನಿಸುತ್ತದೆ.

ಈ ಕಾದಂಬರಿಯ ನಡೆಯನ್ನು ಮುಖ್ಯವಾಗಿ ಮೂರು ಎಳೆಗಳು ನಿಯಂತ್ರಿಸುತ್ತವೆ. ರಜಿಯಾ-ಲಕ್ಷ್ಮೀ ಮತ್ತು ಅಮೀರರ ಪ್ರೇಮ ವಿವಾಹ, ಚಿತ್ರ ಜಗತ್ತು ಪ್ರೊಫೆಸರ್ ಶಾಸ್ತ್ರಿಯವರ ಸಾಮಾಜಿಕ ಬೌದ್ಧಿಕ ಚಟುವಟಿಕೆಗಳು ಮತ್ತು ಸೋಗಿನ ಬೌದ್ಧಿಕತೆ ವಿದೇಶೀ ಹುಡುಗಿಯೊಡನೆ ಅವರ ವಿವಾಹ ಇತ್ಯಾದಿ, ಈ ಎರಡೂ ವಿವಾಹಗಳಿಂದಾಗಿ ಸಮಕಾಲೀನ ಸಮಾಜದಲ್ಲಿನ ಬುದ್ಧಿ ಜೀವಿಗಳೆನಿಸಿ ಕೊಳ್ಳುವವರ ವಿಚಾರಗಳ ವಿಶ್ಲೇಷಣೆಯೊಂದಿಗೇ, ಅಂತರ್ಧರ್ಮಿಯ ವಿವಾಹಗಳ ಚಿತ್ರವೂ ದೊರೆಯುತ್ತದೆ. ವಿಭಿನ್ನ ಸಮುದಾಯಗಳ ಜೀವನ ಶೈಲಿಯ ದಟ್ಟ ವಿವರಗಳು ತೆರೆದುಕೊಳ್ಳುತ್ತವೆ. ಲಕ್ಷ್ಮೀ ಅಮೀರರ ವಿವಾಹದಿಂದಾಗಿ, ಮುಸ್ಲಿಂ ಜನಾಂಗದ ನಿತ್ಯ ಜೀವನದಲ್ಲಿನ ಪರಿಮಿತಿಗಳು ಆ ಸಮುದಾಯದಲ್ಲಿ ಹೆಣ್ಣಿನ ಸ್ಥಾವಮಾನಗಳು ಪರಿಚಯವಾಗುತ್ತವೆ. ಹೀಗೆ ಹಲವು ಸನ್ನಿವೇಶಗಳಲ್ಲಿ parallel structure ನ ವಿನ್ಯಾಸ ಕಂಡುಬರುತ್ತದೆ. ವರ್ತಮಾನದ ಪಾತಳಿಯಲ್ಲಿ, ಹೆಣೆದುಕೊಂಡಿರುವ ಪಾತ್ರಗಳ ಈ ಅಂತಃ ಸಂಬಂಧಗಳು ಕಥಾನಕಕ್ಕೆ ಬಿಗಿ ಬಂಧವನ್ನೊದಗಿಸುವುದಲ್ಲದೆ ಮೂರು ತಲೆಮಾರುಗಳ ವೈವಿಧ್ಯಮಯ ಬದುಕಿನ ಮೌಲ್ಯ ವಿಶ್ಲೇಷಣೆಗೆ ನೆರವಾಗುತ್ತವೆ. ಮುಖ್ಯ ಎಳೆ ಖ್ವಾಜಾ ಭೂತ ಕಾಲದ ಘಟನೆಗಳನ್ನು ಒಳಗೊಂಡಿರುವ ಜಹಾನನ ಬದುಕು ಬವಣೆಗಳು, ಮುಘಲ್ ದೇವಾಲಯಗಳ ಧ್ವಂಸ ಮತ್ತು ಆ ಕಾಲಘಟ್ಟದ ಸಾಮಾನ್ಯ ಜನರ ಬದುಕಿನ ಚಿತ್ರಣ, ಈ ಕಾದಂಬರಿಯ ಇನ್ನೊಂದು ಎಳೆ ಸಾಹಿತ್ಯ ಕಲೆ, ಇತಿಹಾಸ ಇವುಗಳ ಸಂಬಂಧ ಮತ್ತು ಇತಿಹಾಸದ ಚಿತ್ರಣದಲ್ಲಿ ಸಾಹಿತಿ ಹಾಗೂ ಕಲಾಕಾರನಿಗೆ ಐತಿಹಾಸಿಕ ಸತ್ಯದ ಬಗೆಗೆ ಇರಬೇಕಾದ ಬದ್ಧತೆಯ ವಿಶ್ಲೇಷಣೆ ಕಾದಂಬರಿಯಲ್ಲಿ ಲಕ್ಷ್ಮೀಯ ಆಲೋಚನೆಗಳ ಮೂಲಕ ಈ ಬದ್ಧತೆಯೂ ಅಭಿವ್ಯಕ್ತವಾಗುತ್ತದೆ.

ಭೈರಪ್ಪನವರ ಎಲ್ಲ ಕಾದಂಬರಿಗಳಲ್ಲಿಯೂ, ಐತಿಹಾಸಿಕ ಪ್ರಜ್ಞೆಯೂ ಅಭಿವ್ಯಕ್ತಗೊಂಡಿದ್ದರೂ, 'ಆವರಣದ'ದಲ್ಲಿ ಇತಿಹಾಸದ ಅನಾವರಣ ಮತ್ತು ಐತಿಹಾಸಿಕ ಪ್ರಜ್ಞೆಯ ಅಭಿವ್ಯಕ್ತಿಗಳು ಪರಾಕಾಷ್ಠತೆಯನ್ನು ತಲುಪಿವೆ. ಸತ್ಯವನ್ನು (ವಾಸ್ತವವನ್ನು) ಐತಿಹಾಸಿಕ ದಾಖಲೆಗಳು ಮತ್ತು ವರ್ತಮಾನದ ಪರಿಸ್ಥಿತಿಯ ಸೂಕ್ಷ್ಮ ವಿಶ್ಲೇಷಣೆಯಿಂದ ನಿರೂಪಿತಗೊಂಡಿರುವ ಕಲಾಕೃತಿ 'ಆವರಣ'ವು ಕನ್ನಡ ಕಾದಂಬರಿಯ ಬೆಳವಣಿಗೆಯ ಹಾದಿಯಲ್ಲಿ ಒಂದು ಮೈಲುಗಲ್ಲು.

ಎಸ್.ಎಲ್.ಭೈರಪ್ಪನವರ ಕಾದಂಬರಿಗಳನ್ನು ಕುರಿತಂತೆ ಪ್ರತಿರೋಧದ ಧ್ವನಿ ಎತ್ತುತ್ತಿದ್ದ ಲೇಖಕರು 'ಆವರಣ'ವನ್ನು ಗಮನಿಸುವಂತೆ, ಭೈರಪ್ಪನವರ ಉಳಿದ ಕಾದಂಬರಿಗಿಂತ ಭಿನ್ನವಾದ ಪ್ರತಿಕ್ರಿಯೆ ಈ ಕಾದಂಬರಿಗೆ ತೋರಿ ಬಂದಿದೆ.

ಕಥನ ಶೈಲಿ, ತಂತ್ರ, ನಿರೂಪಣೆ ಎಲ್ಲವೂ 'ಆವರಣ' ಕಾದಂಬರಿಯಲ್ಲಿ ಅವರ ಉಳಿದ ಕಾದಂಬರಿಗಳಿಗಿಂತ ಭಿನ್ನವಾಗಿದೆ. ಕಾದಂಬರಿಕಾರರ ವೈಯಕ್ತಿಕ ನಿಲುವು ಹಾಗೂ ಅವರ ವೈಯಕ್ತಿಕ ಬದುಕಿನ ಕೆಲವು ಘಟನೆಗಳು ಈ ಕಾದಂಬರಿಯಲ್ಲಿ ನಿರೂಪಿತವಾಗಿರುವ ಪಾತ್ರಗಳಲ್ಲಿ ಪರಕಾಯ ಪ್ರವೇಶ ಮಾಡಿದೆ ಎನ್ನುವ ಪ್ರತಿಕ್ರಿಯೆ 'ಕಥನಶಿಲ್ಪ'ದ ದೃಷ್ಟಿಯಿಂದ ಗಮನಿಸಬೇಕಾದ ಅಂಶವಾಗಿದೆ.

ಎಸ್.ಎಲ್ ಭೈರಪ್ಪನವರ ೨೦ ಕಾದಂಬರಿಗಳ ಕಥನ ಕ್ರಿಯೆಯನ್ನು ಪರಿಶೀಲಿಸಿದಾಗ ಇವರು ತಮ್ಮ ಕಾದಂಬರಿಗಳಲ್ಲಿ ವಸ್ತು ಮತ್ತು ತಂತ್ರದ ಸಮನ್ವಯತೆ ಸಾಧಿಸಿ, ಉತ್ತಮ ಕಥನ ನಿರೂಪಣೆಯನ್ನು ಸಾಧಿಸಿರುವುದು ಕಂಡು ಬರುತ್ತದೆ. ಅಲ್ಲದೆ ಇವರು ಯಾವುದೇ ತಂತ್ರವನ್ನು ಬಳಸಿದರೂ, ಅದನ್ನು ಸಮರ್ಪಕವಾಗಿ ದುಡಿಸಿಕೊಳ್ಳುತ್ತಾರೆ. ಕೃತಿಯಿಂದ ಕೃತಿಗೆ ಅವರ ಬೆಳವಣಿಗೆಯನ್ನು ಗುರುತಿಸಿದಾಗ ಅವರು ವಸ್ತುವಿನಲ್ಲಿ ಭಿನ್ನತೆ ತಂದ ಹಾಗೆ ತಂತ್ರದ ಬಳಕೆಯಲ್ಲಿಯೂ ಕೂಡ ಭಿನ್ನತೆ

ತಂದಿರುವುದನ್ನು ಕಾಣುತ್ತೇವೆ. ಆದ್ದರಿಂದಲೇ ಎಸ್.ಎಲ್.ಭೈರಪ್ಪನವರು ಅತ್ಯಂತ ಜನಪ್ರಿಯ ಕಾದಂಬರಿಕಾರರಾಗಿ ಕನ್ನಡ ಸಾಹಿತ್ಯದಲ್ಲಿ ತಮ್ಮ ಸ್ಥಾನ ಗುರುತಿಸಿಕೊಂಡಿದ್ದಾರೆ.

***********

# ಅಧ್ಯಾಯ–೮

## ಪಾತ್ರ ನಿರ್ಮಾಣದ ‘ಕಥನಶಿಲ್ಪ’

ಸ್ತ್ರೀ ಪಾತ್ರ ಸೃಷ್ಟಿ.

ಪುರುಷ ಪಾತ್ರ ಸೃಷ್ಟಿ.

## ಅಧ್ಯಾಯ ೫

# "ಪಾತ್ರ ನಿರ್ಮಾಣದ ಕಥನ ಕುಶಲತೆ"

ಪಾತ್ರಗಳು ಕಾದಂಬರಿಗೆ ಅನಿವಾರ್ಯ ಮತ್ತು ಜೀವಾಳ. ಪಾತ್ರಗಳಿಲ್ಲದೆ ಕಾದಂಬರಿಯಿಲ್ಲ, ಕಾದಂಬರಿ ಒಂದು ಕಲಾಕೃತಿ. ಕಾದಂಬರಿ ರಚನೆಯಲ್ಲಿ ಪಾತ್ರ ಸೃಷ್ಟಿ ಬಹಳ ಮಹತ್ವದ ಅಂಶ ಕೃತಿಯಲ್ಲಿ ಬಂದಿರುವ ಪಾತ್ರಗಳ ಮುಖಾಂತರವೇ ಆ ಕೃತಿಯ ವಸ್ತು, ಉದ್ದೇಶಗಳನ್ನು ನೆನಪಿಸುವಷ್ಟು ಪಾತ್ರಗಳ ಪ್ರಭಾವವಿರುತ್ತದೆ. ಕೆಲವೊಮ್ಮೆ ಈ ಪಾತ್ರಗಳು ಬೀರುವ ಪ್ರಭಾವ ಅದ್ಭುತವಾದುದು. ಕಾದಂಬರಿಕಾರರ ಹೆಸರೂ ನೆನಪಿರುವುದಿಲ್ಲ, ಕಾದಂಬರಿಯ ಹೆಸರೂ ನೆನಪಿರುವುದಿಲ್ಲ, ಆದರೆ ಆ ಕಾದಂಬರಿಯಲ್ಲಿ ಬರುವ ಪಾತ್ರದ ನೆನಪು ಮಾತ್ರ ಹಸಿರಾಗಿರುತ್ತದೆ. ಇಂತಹ ಸಂದರ್ಭಗಳಲ್ಲಿ ಕಾದಂಬರಿಕಾರ ತನ್ನ ಪಾತ್ರದ ಮೂಲಕ ಅಲ್ಲಿ ಹೊಸ ಜೀವ ಪಡೆಯುತ್ತಾನೆ.

ಕನ್ನಡದ ಪ್ರಮುಖ ಕಾದಂಬರಿಕಾರರ ಕಾದಂಬರಿಗಳಲ್ಲಿ ಬರುವ ಅನೇಕ ಪಾತ್ರಗಳು ಓದುಗರ ಮನಸ್ಸಿನ ಮೇಲೆ ಸದಾ ಹಸಿರಾಗಿವೆ. ಕುವೆಂಪು ಅವರ 'ಹೂವಯ್ಯ'(ಕಾನೂರು ಸುಬ್ಬಮ್ಮ ಹೆಗ್ಗಡತಿ) ಕಾರಂತರ 'ಚೋಮ' (ಚೋಮನದುಡಿ) ಮಾಸ್ತಿಯವರ 'ಚಿಕ್ಕವೀರರಾಜ' (ಚಿಕ್ಕವೀರರಾಜೇಂದ್ರ) ನಿರಂಜನರ 'ಹೋರಸ್' (ಮೃತ್ಯುಂಜಯ) ಈ ಮುಂತಾದ ಪಾತ್ರಗಳು ಕೇವಲ ನೆನಪಾಗಿ ಉಳಿಯುವುದಷ್ಟೇ ಅಲ್ಲ, ಅನೇಕ ಸಲ ನಿತ್ಯ ಬದುಕಿನ ಚರ್ಚೆಯ ವಿಷಯಗಳೂ ಆಗುತ್ತವೆ.

ಇದೇ ರೀತಿ ಲೇಖಿಕಿಯರಲ್ಲಿ ತ್ರಿವೇಣಿಯವರ 'ಕಾವೇರಿ' (ಶರಪಂಜರ) ಎಂ.ಕೆ.ಇಂದಿರಾ ಅವರ 'ಫಣಿಯಮ್ಮ'(ಫಣಿಯಮ್ಮ) ಹಾಗೂ ಅನುಪಮಾ ನಿರಂಜನರ 'ಮಾಧವಿ'(ಮಾಧವಿ) ಈ. ಪಾತ್ರಗಳು ಉಂಟುಮಾಡಿದ ಪ್ರಭಾವ ಅಗಾಧವಾದಂತಹದು.

ಹೀಗೆಯೇ ಅನೇಕ ಪ್ರಮುಖ ಕಾದಂಬರಿಗಳಲ್ಲಿ ಬರುವ ಮಹತ್ವದ ಪಾತ್ರಗಳನ್ನು ಹೆಸರಿಸುತ್ತಾ ಹೋಗಬಹುದು.

ಪಾತ್ರ ಸೃಷ್ಟಿ ಕಾದಂಬರಿಯ ಪ್ರಮುಖ ಅಂಶ. ಪ್ರತಿಭಾವಂತನಾದ ಕಾದಂಬರಿಕಾರ ತನ್ನ ಸುತ್ತಲಿನ ಜಗತ್ತಿನ ವ್ಯಕ್ತಿಗಳನ್ನು ತನ್ನ ವಿಶಿಷ್ಠ ದೃಷ್ಟಿಯಿಂದ ನೋಡುತ್ತಾನೆ. ಹಾಗೆಯೇ ಆ ವ್ಯಕ್ತಿಗಳ ಮನಸ್ಸನ್ನು ಒಳಹೊಕ್ಕು ಅವರ ಮನಸ್ಸಿನ ಭಾವನೆ, ನಡೆ-ನುಡಿ, ಆಸೆ-ನಿರಾಸೆಗಳನ್ನು ಅರ್ಥ ಮಾಡಿಕೊಂಡು ಅನುಕಂಪದಿಂದ ಕಾಣುತ್ತಾನೆ. ತಾನು ಕಂಡದ್ದನ್ನು ತನ್ನ ಕಲಾಕೃತಿಯಲ್ಲಿ ಇನ್ನಿತರರಿಗೂ ಕಾಣಿಸಲು ಯತ್ನಿಸುತ್ತಾನೆ. ಇಂಥಹ ಪಾತ್ರಗಳಲ್ಲಿ ವಸ್ತುವೈವಿಧ್ಯತೆ ಮತ್ತು ಜೀವನದ ಸೂಕ್ಷ್ಮ ಸಂವೇದನೆಗಳಿರುತ್ತವೆ.

ಪಾತ್ರಗಳು ಕಾದಂಬರಿಕಾರನ ಸ್ವತಂತ್ರಸೃಷ್ಟಿ ಅವು ಲೇಖಕನ ನೆರಳಾಗಿರುತ್ತದೆ. ಕೆಲವು ಕಾದಂಬರಿಗಳಲ್ಲಿ ಕಾದಂಬರಿಯ ವಸ್ತು-ಧೋರಣೆ ಪರಿಸರಕ್ಕೆ ಸಂಬಂಧಿಸಿ ಅಲ್ಲಿಯ ಪಾತ್ರಗಳು ಜೀವತಳೆಯುತ್ತದೆ. ಕೆಲವು ಕಾದಂಬರಿಗಳಲ್ಲಿ ಮಾತ್ರ ಕಾದಂಬರಿಕಾರನನ್ನು ಮೀರಿಯೂ ಕೆಲ ಪಾತ್ರಗಳು ಬೆಳೆದು ನಿಂತಿರುತ್ತದೆ. ಇದು ಬಹಳ ಆಕಸ್ಮಿಕವಾಗಿರುತ್ತದೆ. ಕೆಲವು ಕಾದಂಬರಿಗಳಲ್ಲಿ ಬಹುಸಂಖ್ಯೆಯ ಪಾತ್ರಗಳು ಸೃಷ್ಟಿಯಾಗಿದ್ದರೆ, ಮತ್ತೆ ಕೆಲವು ಕಾದಂಬರಿಗಳಲ್ಲಿ ಅಲ್ಪ ಸಂಖ್ಯೆಯ ಪಾತ್ರಗಳಿರುತ್ತವೆ. ಒಟ್ಟಿನಲ್ಲಿ ಕಾದಂಬರಿ ರಚನೆಯಲ್ಲಿ ಪಾತ್ರಗಳ ಸೃಷ್ಟಿ ಹಾಗೂ ಪಾತ್ರಗಳ ಬೆಳವಣಿಗೆ ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿದೆ.

ಭೈರಪ್ಪನವರ ಕಾದಂಬರಿಗಳ ಪಾತ್ರ ಸೃಷ್ಟಿಯೂ ಇಡೀ ಕಥಾ ಶಿಲ್ಪಕ್ಕೆ ಅಪಾರವಾದ ದೇಣಿಗೆಯನ್ನು ನೀಡಿದೆ. ಭೈರಪ್ಪನವರ ೨೦ ಕಾದಂಬರಿಗಳಲ್ಲಿ ನೂರಾರು ಪಾತ್ರಗಳು ಬರುತ್ತವೆ. ಅವುಗಳಲ್ಲಿ ಕೆಲವೊಂದು ಪಾತ್ರಗಳಾದರೂ ಓದುಗರಲ್ಲಿ ಹಸಿರಾಗಿ

ಉಳಿಯಬೇಕಾದರೆ ಆ ಪಾತ್ರದ ವ್ಯಕ್ತಿತ್ವ ಮತ್ತು ಗುಣವಿಶಿಷ್ಟತೆಯೇ ಪ್ರಮುಖ ಕಾರಣವಾಗಿದೆ. ಅವರ ೨೦ ಕಾದಂಬರಿಗಳಲ್ಲಿ ಬರುವ ನೆನಪುಳಿಯುವಂತಹ ಕೆಲವು ಪ್ರಮುಖ ಪಾತ್ರಗಳ ಗುಣವಿಶಿಷ್ಟತೆಯನ್ನು ಹೇಳುತ್ತಾ ಆ ಪಾತ್ರಗಳ ಲೇಖಕರ ಉದ್ದೇಶ ಹಾಗೂ 'ಕಥನಶಿಲ್ಪ'ಕ್ಕೆ ಹೇಗೆ ಪೂರಕವಾಗಿವೆಯೆಂಬುದನ್ನು ವಿಶ್ಲೇಷಿಸುವುದು ಈ ಅಧ್ಯಯನದ ಗುರಿಯಾಗಿದೆ.

ಭೈರಪ್ಪನವರು ತಮ್ಮ ಕಾದಂಬರಿಗಳಲ್ಲಿ ನಿರ್ಮಿಸಿರುವ ಪಾತ್ರಗಳು ನೈಜ ಬದುಕಿನಲ್ಲಿ ಒಂದಿಲ್ಲೊಂದು ಕಡೆ ಎದುರಾಗುವ ಪಾತ್ರಗಳೇ ಎಂದೆನಿಸುತ್ತದೆ. ಸ್ವತಃ ಕಾದಂಬರಿಕಾರರೇ ತಾನು ನಿರ್ಮಿಸಿದ ಪಾತ್ರಗಳ ಬಗ್ಗೆ ಒಂದೆಡೆ ಈ ರೀತಿಯಾಗಿ ಅಭಿಪ್ರಾಯ ಪಟ್ಟಿರುವುದನ್ನು ಕಾಣಬಹುದು. –"ನಾನು ನನ್ನ ಕಾದಂಬರಿಗಳಲ್ಲಿನ ಪಾತ್ರಗಳನ್ನು ಜೀವನದಿಂದ ತೆಗೆದುಕೊಳ್ಳುವುದಿಲ್ಲ. ಆದರೆ ಕೆಲವು ವೇಳೆ ತೆಗೆದುಕೊಳ್ಳಬೇಕಾಗುತ್ತದೆ. ವಾಸ್ತವವಾಗಿ ನೇರವಾಗಿ ಜೀವನದಿಂದ ತೆಗೆದುಕೊಂಡ ಪಾತ್ರಗಳು ಅನೇಕ ವೇಳೆ ಕಲಾತ್ಮಕ ಸಮಸ್ಯೆಯನ್ನು ಒಡ್ಡುತ್ತವೆ. ಏಕೆಂದರೆ ಅವುಗಳ ಬಲ್ಲ ಜೀವನ ವೃತ್ತ, ಅವುಗಳ ಬಗ್ಗೆ ಸ್ವತಂತ್ರವಾಗಿ ಕಲ್ಪನೆ ಮಾಡಲು ತೊಡಕನ್ನುಂಟು ಮಾಡುತ್ತವೆ. ಮತ್ತು ಅವುಗಳ ಸತ್ಯದ ಅವಗಾಹನೆಯಲ್ಲಿ ತೊಂದರೆ ಮಾಡುತ್ತವೆ. ನಾನು ಕಾದಂಬರಿಗಳಲ್ಲಿ ಜೀವನದಿಂದ ಪಾತ್ರಗಳನ್ನು ತೆಗೆದುಕೊಂಡಾಗಲ್ಲೆಲ್ಲಾ ಅವುಗಳಲ್ಲಿ ಕಲಾತ್ಮಕ ಪರಿಪಕ್ವತೆ ಪಡೆಯುವಲ್ಲಿ ಕಷ್ಟವಾಗಿದೆ ಮತ್ತು ಹೊಸದಾಗಿಯೇ ಮತ್ತೆ ಬರೆಯಬೇಕಾಯ್ತು. ಕೊನೆಗೆ ಅದರಿಂದ ವಿಕಸಿತವಾದ ಸ್ವರೂಪ ಮೂಲ ಪಾತ್ರದ ವಾಸ್ತವಿಕೆ ವ್ಯಕ್ತಿತ್ವಕ್ಕಿಂತ ತೀರ ಭಿನ್ನವಾಗಿಯೆ ಇತ್ತು. ಹೀಗಾಗಿ ವಸ್ತು ಜಗತ್ತಿನ ವ್ಯಕ್ತಿಗಳಿಗಿಂತ ಕಾದಂಬರಿಯ ಪಾತ್ರಗಳೇ ಹೆಚ್ಚು ನೈಜವಾದವಾಗಿರುತ್ತದೆ ಎಂಬ ನಂಬಿಕೆ ದೃಢವಾಯಿತು" ಎನ್ನುವರು.

ಪಾತ್ರಗಳ ಚಾರಿತ್ರಿಕ ವಿಕಾಸಕ್ಕೆ ಸಂಬಂಧಿಸಿದ ಪ್ರಶ್ನೆಯೊಂದಕ್ಕೆ ಉತ್ತರವನ್ನು ನೀಡುವಾಗ ಭೈರಪ್ಪನವರು "ಪ್ರಾರಂಭದಲ್ಲೇನೋ ನನ್ನ ಪಾತ್ರಗಳನ್ನು ಚೆನ್ನಾಗಿ ತಿಳಿದಿದ್ದೇನೆ ಅಂತ ಖಂಡಿತ ಅನಿಸುತ್ತೆ. ಆದರೆ ನಿಧಾನವಾಗಿ ಅವುಗಳಲ್ಲಿ ಮತ್ತು ಅಪೇಕ್ಷೆಗಳು ಕಾಣಿಸಿಕೊಳ್ಳುತ್ತವೆ. ನಾನು ಅವುಗಳನ್ನು ಅನುಸರಿಸುತ್ತೇನೆ. ನನ್ನ ಅನುಭವದಿಂದ ಕಂಡಿದ್ದೇನೆಂದರೆ ನನ್ನನ್ನು ಅಪ್ರತ್ಯಾತೀತ ಕ್ಷೇತ್ರಗಳಿಗೆ ಮತ್ತು ದಿಕ್ಕುಗಳಿಗೆ ಕೊಂಡೊಯ್ದ ಪಾತ್ರಗಳೇ ಜೀವಂತವಾದವು ಮತ್ತು ನಿಶಕ್ತಿ ವಾದವು"[೧].

ಭೈರಪ್ಪನವರ ಕಾದಂಬರಿಗಳುದ್ದಕ್ಕೂ ಚಿತ್ರಿತವಾಗಿರುವ ಪಾತ್ರಗಳು ಜೀವಂತ ವ್ಯಕ್ತಿಗಳಂತೆಯೇ ನಡೆದಾಡುತ್ತದೆ. ಹೀಗಾಗಿ ಕಾದಂಬರಿಗಳ ಜೊತೆಗಿನ ಪಠ್ಯ ಸಂಬಂಧವನ್ನು ಮತ್ತು ಸಂದರ್ಭವನ್ನು ಕಳೆದುಕೊಂಡ ನಮ್ಮ ನೆನೆಪಿನಲ್ಲಿ ನಿಲ್ಲುವ ಜೀವಂತ ಪಾತ್ರಗಳಾಗಿ ಅವು ಕಾಣುತ್ತವೆ .ಇವರ ಕಾದಂಬರಿಗಳಲ್ಲಿನ ಕೆಲವೊಂದು ಪಾತ್ರಗಳಂತೂ ಪರಿಪೂರ್ಣ ಕಲಾಚಿತ್ರವಾಗಿ ಮೂಡಿಬಂದಿದೆ.

ಭೈರಪ್ಪನವರು ತಮ್ಮ ಕಾದಂಬರಿಗಳಲ್ಲಿ ನಿರ್ಮಿಸಿದ ಪಾತ್ರಗಳು ಕಾದಂಬರಿಯ ಕಥಾ ಹಂದರದಲ್ಲಿ ಸಾವಯವ ಸಂಬಂಧವನ್ನು ಪಡೆಯುತ್ತವೆ. ಕಥೆಯ ಚಲನಶೀಲತೆಗೆ ಪೂರಕವಾಗಿ ಅವು ಕೆಲಸ ಮಾಡುತ್ತವೆ. ಇವರ ಕಾದಂಬರಿಗಳಲ್ಲಿ ಸ್ತ್ರೀಪುರುಷ ಪಾತ್ರಗಳೆರಡು ಸಮಾನವಾಗಿ ಭಾಗವಹಿಸುತ್ತವೆ. ಇವರು ನಿರ್ಮಿಸಿದ ಕೆಲವು ಪಾತ್ರಗಳು ಕಷ್ಟ-ಸಹಿಷ್ಣುತೆ, ದಯೆ, ವೈಚಾರಿಕತೆ ಅಥವಾ ಅತಿ ವಾಸ್ತವಿಕತೆ, ಪ್ರಾಮಾಣಿಕತೆ, ಮೊದಲಾದವನ್ನು ಜೀವನದಲ್ಲಿ ಅನುಷ್ಠಾನಕ್ಕೆ ತರಲು ಹೋರಾಡುತ್ತಿರುವಂತೆ ಕಂಡು ಬಂದರೆ, ಕೆಲವು ಪಾತ್ರಗಳಿಗೆ ಹೊಸ ಮೌಲ್ಯದ ಬಗ್ಗೆ ವಿಶ್ವಾಸ ಮೂಡಿ ಅದನ್ನು ಆಚರಣೆಯಲ್ಲಿ ತರಲು ಹೊರಟು ಸಂಘರ್ಷಕ್ಕೆ ಗುರಿಯಾಗಿಯೋ, ಆಗದೆಯೋ ತಾವು ಗಳಿಸುವ ಅನುಭವದಿಂದ ಸನಾತನ ಮೌಲ್ಯಕ್ಕೆ

[೧] 'ಭೈರಪ್ಪಾಭಿನಂದನಾ'. ಪುಟ ೨. ವೆಂಕಟೇಶ ಕೆ.ಕೊಂಡಜ್ಜಿ (ಸಂ) ಕೊಂಡಜ್ಜಿ ಪ್ರಕಾಶನ ಬೆಂಗಳೂರು ೧೯೯೩.

ಪಾತ್ರಗಳ ಚಾರಿತ್ರಿಕ ವಿಕಾಸಕ್ಕೆ ಸಂಬಂಧಿಸಿದ ಪ್ರಶ್ನೆಯೊಂದಕ್ಕೆ ಉತ್ತರವನ್ನು ನೀಡುವಾಗ ಭೈರಪ್ಪನವರು "ಪ್ರಾರಂಭದಲ್ಲೇನೋ ನನ್ನ ಪಾತ್ರಗಳನ್ನು ಚೆನ್ನಾಗಿ ತಿಳಿದಿದ್ದೇನೆ ಅಂತ ಖಂಡಿತ ಅನಿಸುತ್ತೆ. ಆದರೆ ನಿಧಾನವಾಗಿ ಅವುಗಳಲ್ಲಿ ಮತ್ತು ಅಪೇಕ್ಷೆಗಳು ಕಾಣಿಸಿಕೊಳ್ಳುತ್ತವೆ. ನಾನು ಅವುಗಳನ್ನು ಅನುಸರಿಸುತ್ತೇನೆ. ನನ್ನ ಅನುಭವದಿಂದ ಕಂಡಿದ್ದೇನೆಂದರೆ ನನ್ನನ್ನು ಅಪ್ರತ್ಯಾತೀತ ಕ್ಷೇತ್ರಗಳಿಗೆ ಮತ್ತು ದಿಕ್ಕುಗಳಿಗೆ ಕೊಂಡೊಯ್ದ ಪಾತ್ರಗಳೇ ಜೀವಂತವಾದವು ಮತ್ತು ನಿಶಕ್ತಿ ವಾದವು"[೧].

ಭೈರಪ್ಪನವರ ಕಾದಂಬರಿಗಳುದ್ದಕ್ಕೂ ಚಿತ್ರಿತವಾಗಿರುವ ಪಾತ್ರಗಳು ಜೀವಂತ ವ್ಯಕ್ತಿಗಳಂತೆಯೇ ನಡೆದಾಡುತ್ತದೆ. ಹೀಗಾಗಿ ಕಾದಂಬರಿಗಳ ಜೊತೆಗಿನ ಪಠ್ಯ ಸಂಬಂಧವನ್ನು ಮತ್ತು ಸಂದರ್ಭವನ್ನು ಕಳೆದುಕೊಂಡ ನಮ್ಮ ನೆನೆಪಿನಲ್ಲಿ ನಿಲ್ಲುವ ಜೀವಂತ ಪಾತ್ರಗಳಾಗಿ ಅವು ಕಾಣುತ್ತವೆ .ಇವರ ಕಾದಂಬರಿಗಳಲ್ಲಿನ ಕೆಲವೊಂದು ಪಾತ್ರಗಳಂತೂ ಪರಿಪೂರ್ಣ ಕಲಾಚಿತ್ರವಾಗಿ ಮೂಡಿಬಂದಿದೆ.

ಭೈರಪ್ಪನವರು ತಮ್ಮ ಕಾದಂಬರಿಗಳಲ್ಲಿ ನಿರ್ಮಿಸಿದ ಪಾತ್ರಗಳು ಕಾದಂಬರಿಯ ಕಥಾ ಹಂದರದಲ್ಲಿ ಸಾವಯವ ಸಂಬಂಧವನ್ನು ಪಡೆಯುತ್ತವೆ. ಕಥೆಯ ಚಲನಶೀಲತೆಗೆ ಪೂರಕವಾಗಿ ಅವು ಕೆಲಸ ಮಾಡುತ್ತವೆ. ಇವರ ಕಾದಂಬರಿಗಳಲ್ಲಿ ಸ್ತ್ರೀಪುರುಷ ಪಾತ್ರಗಳೆರಡು ಸಮಾನವಾಗಿ ಭಾಗವಹಿಸುತ್ತವೆ. ಇವರು ನಿರ್ಮಿಸಿದ ಕೆಲವು ಪಾತ್ರಗಳು ಕಷ್ಟ-ಸಹಿಷ್ಣುತೆ, ದಯೆ, ವೈಚಾರಿಕತೆ ಅಥವಾ ಅತಿ ವಾಸ್ತವಿಕತೆ, ಪ್ರಾಮಾಣಿಕತೆ, ಮೊದಲಾದವನ್ನು ಜೀವನದಲ್ಲಿ ಅನುಷ್ಠಾನಕ್ಕೆ ತರಲು ಹೋರಾಡುತ್ತಿರುವಂತೆ ಕಂಡು ಬಂದರೆ, ಕೆಲವು ಪಾತ್ರಗಳಿಗೆ ಹೊಸ ಮೌಲ್ಯದ ಬಗ್ಗೆ ವಿಶ್ವಾಸ ಮೂಡಿ ಅದನ್ನು ಆಚರಣೆಯಲ್ಲಿ ತರಲು ಹೊರಟು ಸಂಘರ್ಷಕ್ಕೆ ಗುರಿಯಾಗಿಯೋ, ಆಗದೆಯೋ ತಾವು ಗಳಿಸುವ ಅನುಭವದಿಂದ ಸನಾತನ ಮೌಲ್ಯಕ್ಕೆ

---

[೧] 'ಭೈರಪ್ಪಾಭಿನಂದನಾ'. ಪುಟ ೨. ವೆಂಕಟೇಶ ಕೆ.ಕೊಂಡಜ್ಜಿ (ಸಂ) ಕೊಂಡಜ್ಜಿ ಪ್ರಕಾಶನ ಬೆಂಗಳೂರು ೧೯೯೩.

ಜೋತು ಬೀಳುತ್ತಿರುವಂತೆ ತೋರುತ್ತದೆ. ಇವರು ಸೃಷ್ಟಿಸಿರುವ ಅನೇಕ ಪಾತ್ರಗಳು ಒಂದಲ್ಲ ಒಂದು ಕಾರಣಕ್ಕಾಗಿ ಓದುಗರ ಮೆಚ್ಚುಗೆಯನ್ನೋ, ತಾತ್ಸಾರವನ್ನೋ ಗಳಿಸುತ್ತಾ ಕಾದಂಬರಿ ಸೋತಾಗಲು ಪಾತ್ರಗಳು ಗೆಲ್ಲುತ್ತಾ ಓದುಗರ ಮನಸ್ಸಿನಲ್ಲಿ ಅಚ್ಚಳಿಯದೆ ನಿಲ್ಲುವಂತಹವುಗಳಾಗಿವೆ.

ಪ್ರಸ್ತುತ ಅಧ್ಯಯನದ ಸಲುವಾಗಿ ಭೈರಪ್ಪನವರ ೨೦ ಕಾದಂಬರಿಗಳನ್ನು ಅಧ್ಯಯನಕ್ಕೆ ಅಳವಡಿಸಿಕೊಂಡ ನಂತರ ಮನದಾಳದಲ್ಲಿ ನೆಲೆನಿಂತಿರುವ ಕೆಲವೇ ಕೆಲವು ಸ್ತ್ರೀ ಹಾಗೂ ಪುರುಷ ಪಾತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

*******

# ಸ್ತ್ರೀ ಪಾತ್ರ ಸೃಷ್ಟಿ

ಭೈರಪ್ಪನವರು ತಮ್ಮ ೨೦ ಕಾದಂಬರಿಗಳ ಮೂಲಕ ಅಸಂಖ್ಯಾತ ಸ್ತ್ರೀಪಾತ್ರಗಳನ್ನು ಸೃಷ್ಟಿಸಿರುತ್ತಾರೆ. ಇವರ ಕಾದಂಬರಿಗಳಲ್ಲಿ ದೊರಕುವ ಸ್ತ್ರೀ ಪಾತ್ರಗಳು ಮಾನವ ಸ್ವಭಾವಕ್ಕೆ ಹಿಡಿದ ಕನ್ನಡಿಗಳಾಗಿವೆ. ಪತಿವ್ರತೆ, ವ್ಯಭಿಚಾರಿಣಿ, ಪ್ರಿಯತಮೆ, ಗ್ರಹಿಣಿ, ತಾಯಿ, ತಂಗಿ, ವಿಧವೆ, ವೇಶ್ಯೆ ಹೀಗೆ ಮಾನವ ಸಂಬಂಧಗಳ ವಿವಿಧ ಮುಖಗಳನ್ನು ಪರಿಚಯಿಸುವ ಹಲವಾರು ಪಾತ್ರಗಳನ್ನು ಇವರು ಸೃಷ್ಟಿಸಿರುತ್ತಾರೆ. 'ದೂರಸರಿದರು' ಕಾದಂಬರಿಯ ವಿನತಕುಮಾರಿ, ವಿಜಯಕುಮಾರಿ, ಉಮಾ, ರಮಾ, ವರದಮ್ಮ, 'ವಂಶವೃಕ್ಷ'ದ ಕಾತ್ಯಾಯನಿ, ಭಾಗೀರತಮ್ಮ, ನಾಗಲಕ್ಷ್ಮಿ, ಲಕ್ಷ್ಮೀ, ಅಚ್ಚಮ್ಮ 'ನಾಯಿನೆರಳು'ವಿನ ವೆಂಕಮ್ಮ, ನಂಜಮ್ಮ, ಕಾವೇರಿ, 'ಗೃಹಭಂಗದ' ನಂಜಮ್ಮ, ಗಂಗಮ್ಮ, ಸಾತಮ್ಮ ನರಸಿ, 'ಧರ್ಮಶ್ರೀ'ಯ ಲಿಲ್ಲಿ, ರಾಚಮ್ಮ, 'ದಾಟು'ವಿನ ಮಾತಂಗಿ, ಸತ್ಯಭಾಮೆ, 'ಪರ್ವ'ದ ದ್ರೌಪದಿ, 'ಅಂಚು'ವಿನ ಅಮೃತ 'ತಂತು'ವಿನ ಕಾಂತಿ, 'ಸಾರ್ಥ'ದ ಚಂದ್ರಿಕಾ, 'ಮಂದ್ರ'ದ ಮಧುಮಿತಾ, 'ಆವರಣ'ದ ರಜಿಯಾ/ಲಕ್ಷ್ಮೀ ಈ ಎಲ್ಲ ಪಾತ್ರಗಳು ಪ್ರತಿಯೊಬ್ಬ ಓದುಗನ ನೆನಪಿನಂಗಳಲ್ಲಿ ಅಚ್ಚಳಿಯದೇ ಉಳಿಯುವಂತಹವುಗಳು. ಇವುಗಳಲ್ಲಿ 'ವಂಶವೃಕ್ಷ'ದ ಕಾತ್ಯಾಯನಿ, 'ಗೃಹಭಂಗ'ದ ನಂಜಮ್ಮ, 'ಗ್ರಹಣ'ದ ಡಾಸರೋಜ, 'ತಂತು'ವಿನ ಕಾಂತಿ, 'ದಾಟು'ವಿನ ಸತ್ಯಭಾಮೆ, 'ಪರ್ವ'ದ ದ್ರೌಪದಿ, 'ಅಂಚು'ವಿನ ಅಮೃತ, 'ಸಾರ್ಥ'ದ ಚಂದ್ರಿಕಾ, 'ಮಂದ್ರ'ದ ಮಧುಮಿತ ಮತ್ತು 'ಆವರಣ'ದ ರಜಿಯಾ/ಲಕ್ಷ್ಮೀ ಪಾತ್ರಗಳ ಸೃಷ್ಟಿಯ ವಿವೇಚನೆಯನ್ನು ಮಾಡಲಾಗಿದೆ.

ಭೈರಪ್ಪನವರ ಸ್ತ್ರೀ ಪಾತ್ರಗಳ ಬಗೆಗೆ ಡಾ। ದಿಂಡೂರ ಆರ್.ಎನ್. ಅವರು ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ 'ಭೈರಪ್ಪನವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು ಎನ್ನುವ ಶೀರ್ಷಿಕೆಯನ್ನೊಳಗೊಂಡ ಪ್ರಬಂಧವೊಂದನ್ನು ಸಾದರ ಪಡಿಸಿದ್ದಾರೆ. ಆ ಮಹಾಪ್ರಬಂಧದಲ್ಲಿ ಭೈರಪ್ಪನವರ ಕಾದಂಬರಿಗಳಲ್ಲಿ ಬರುವ ಸ್ತ್ರೀ ಪಾತ್ರಗಳನ್ನು

ಮೇಲ್‌ವರ್ಗ, ಮಧ್ಯಮವರ್ಗ, ಕೆಳವರ್ಗದ ಸಾಮಾಜಿಕ ನೆಲೆಯಲ್ಲಿ ಗುರುತಿಸಿ ವಿಶ್ಲೇಷಿಸಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಸ್ತ್ರೀ-ಪುರುಷ ಪಾತ್ರಗಳನ್ನು ಆಯ್ಕೆ ಮಾಡಿಕೊಳ್ಳುವಾಗ ಆ ಪಾತ್ರಗಳು 'ಕಥನತಂತ್ರ'-ಇಲ್ಲವೇ 'ಶಿಲ್ಪ'ಕ್ಕೆ ಕೊಟ್ಟ ಪೂರಕವಾದ ದೇಣಿಗೆಯನ್ನು ಗಮನದಲ್ಲಿರಿಸಿಕೊಂಡು ಅಂತಹ ಪಾತ್ರಗಳನ್ನು ಆಯ್ಕೆ ಮಾಡಿ ವಿವೇಚಿಸಲಾಗಿದೆ.

## 'ಕಾತ್ಯಾಯನಿ'

ಕಾತ್ಯಾಯನಿ ವಂಶವೃಕ್ಷ ಕಾದಂಬರಿಯ ಪ್ರಧಾನ ಸ್ತ್ರೀ ಪಾತ್ರ. ಈ ಪಾತ್ರದ ಮೂಲಕ ಭೈರಪ್ಪನವರು ವಿಧವಾ ವಿವಾಹದ ಸಮಸ್ಯೆಯನ್ನು ಎತ್ತಿ ಹಿಡಿಯುವ ಪ್ರಯತ್ನ ಮಾಡಿರುತ್ತಾರೆ.

ಕಾತ್ಯಾಯನಿ ಶ್ರೀರಂಗಪಟ್ಟಣದ ಲಾಯರ್ ಶ್ರೀಕಂಠಯ್ಯನವರ ಮಗಳು. ಚಿಕ್ಕ ವಯಸ್ಸಿನಲ್ಲಿಯೇ ತಾಯಿಯನ್ನು ಕಳೆದುಕೊಂಡಿರುವ ಈಕೆ ಇಂಟರ್‌ಮಿಡಿಯೆಟ್‌ವರೆಗೆ ಶಿಕ್ಷಣವನ್ನು ಪಡೆದು ನಂಜನಗೂಡಿನ ನಂಜುಂಡ ಶ್ರೋತ್ರಿಯೊಂದಿಗೆ ಮದುವೆಯಾಗಿ ಒಂದು ಗಂಡು ಮಗುವಿನ ತಾಯಿಯಾಗುತ್ತಾಳೆ. ಆದರೆ ಮಗುವಾದ ಆರು ತಿಂಗಳಿಗೆ ಗಂಡ ಕಪಿಲೆಯ ಮಹಾಪ್ರವಾಹಕ್ಕೆ ಬಲಿಯಾಗುತ್ತಾನೆ. ಇದರಿಂದಾಗಿ ಕಾತ್ಯಾಯನಿ ತನ್ನ ಇಪ್ಪತ್ತನೆಯ ವಯಸ್ಸಿನಲ್ಲಿಯೇ ವಿಧವೆಯಾಗುತ್ತಾಳೆ. ವಿಧವೆಯಾದ ಇವಳನ್ನು ಮಾವ ಶ್ರೀನಿವಾಸ ಶ್ರೋತ್ರಿ ಮಡಿ ಮಾಡದೇ ಭಗವದ್ಗೀತೆ ಹಾಗೂ ಉಪನಿಷತ್ತುಗಳ ಓದಿನಲ್ಲಿ ಮನಸ್ಸನ್ನು ತೊಡಗಿಸಲು

ಸೂಚಿಸುತ್ತಾರೆ. ಆದರೆ ಅದರಲ್ಲಿ ಅವಳ ಮನಸ್ಸು ನಿಲ್ಲದೆ ಪ್ರಕೃತಿಯನ್ನು ಕಂಡ ಅವಳು ಅದು ಒಮ್ಮೆ ಬಂಜವಾದರೆ ಮತ್ತೊಮ್ಮೆ ಚಿಗುರುತ್ತದೆ. ಆದರೆ ವಿಧವೆಯಾದ ತಾನು ಎಂದೆಂದಿಗೂ ಬಾಡಿಯೇ ಹೋಗಬೇಕೆ? ಎಂದು ನಿಟ್ಟುಸಿರು ಬಿಡುತ್ತಾಳೆ.

ಅತ್ತೆ-ಮಾವ ಮಗಳಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಾರೆ. ಆದರೆ ಗಂಡನಿಲ್ಲದ ಕಾತ್ಯಾಯನಿಗೆ ಅದೆಲ್ಲವೂ ಶೂನ್ಯವೆನಿಸುತ್ತದೆ. ಗಂಡ ಮುಗಿಸದೇ ಬಿಟ್ಟ ಬಿ.ಎ ಪದವಿಯನ್ನು ತಾನು ಮುಗಿಸಿ ಆತನ ಆತ್ಮಕ್ಕೆ ಶಾಂತಿಯನ್ನು, ಮನೆಗೆ ಗೌರವವನ್ನು ತರುವುದಾಗಿ ಅತ್ತೆ- ಮಾವನ ಒಪ್ಪಿಗೆ ಪಡೆದು ಕಾಲೇಜೊಂದನ್ನು ಸೇರಿಕೊಳ್ಳುತ್ತಾಳೆ.

ಅಲ್ಲಿ ಇಂಗ್ಲೀಷ್ ಅಧ್ಯಾಪಕ ರಾಜರಾಯರೊಂದಿಗೆ ಪರಿಚಯವಾಗುತ್ತದೆ. ಅವರು ರಚಿಸಿದ 'ಮೂಲತತ್ವ' ನಾಟಕವೊಂದರಲ್ಲಿ ರಾಜರಾಯರು ಪುರುಷಪಾತ್ರ ಮಾಡಿದರೆ ಕಾತ್ಯಾಯನಿ 'ಪ್ರಕೃತಿ'ಯ ಪಾತ್ರ ಮಾಡುತ್ತಾಳೆ. ಇದರಿಂದಾಗಿ ಇವರಿಬ್ಬರ ಪರಿಚಯವು ಗಾಢವಾಗಿ ಪ್ರೇಮವು ಅಂಕುರವಾಯಿತು. 'ಚಿರನೂತನಳು, ಚಿರಚೇತನಳು ಆದ ಪ್ರಕೃತಿಗೆ ಕೃತಕ ಧರ್ಮದ ಕಟ್ಟು ಹಾಕುವುದು ಅಧರ್ಮವೆಂಬುದನ್ನು 'ಪ್ರಕೃತಿ ವಿಧವೆಯಲ್ಲಿ ಚಿರಸುಮಂಗಲಿ ಎಂಬುದನ್ನು ನಂಬಿದ ಈಕೆ ವಿಧವಾ ವಿವಾಹ ಧರ್ಮಸಮ್ಮತವೆಂಬ ನಿರ್ಣಯಕ್ಕೆ ಬರುತ್ತಾಳೆ. ರಾಜಾರಾಯನೊಂದಿಗೆ ವಿವಾಹಕ್ಕೆ ಮನಸ್ಸು ಮಾಡುತ್ತಾಳೆ. ಆದರೆ ತನ್ನ ಈ ಒಂದು ನಿರ್ಧಾರವನ್ನು ಮಾವನಿಗೆ ತಿಳಿಸಲು ಸಂಕೋಚಪಟ್ಟ ಕಾತ್ಯಾಯನಿ ಪತ್ರದ ಮೂಲಕ ತಿಳಿಸುತ್ತಾಳೆ. ಪತ್ರವನ್ನು ಓದಿದ ಮಾವ 'ನನ್ನ ಅಪ್ಪಣೆ ಪಡೆಯುವ ಪ್ರಶ್ನೆ ಇಲ್ಲಿ ಬರುಲ್ಲ, ನಿನಗೆ ತಿಳಿದ ಹಾಗೆ ಮಾಡುವ ಸ್ವಾತಂತ್ರ್ಯ ನಿನಗಿದೆ ಎನ್ನುತ್ತಾ ಸಂಸಾರವನ್ನು ಅನುಭವಿಸುವುದೇ ಜೀವನದ ಪರಮಗುರಿಯಲ್ಲ ವಂಶೋತ್ಪತ್ತಿಗಾಗಿ ಗೃಹಸ್ಥ ಜೀವನ ವಂಶ ಬೆಳೆದ ಮೇಲೆ ಅಕಸ್ಮಾತ್ ಗ್ರಹನಷ್ಟವಾದರೆ ಪುನಃ -ಅದಕ್ಕೆ ತಿರುಗಿ ಹೋಗುವುದು ಅಧರ್ಮವೆಂದು ತಾನು

ಜೀವನವಿಡೀ ಸಂಯಮಿಯಾಗಿರುವುದನ್ನು ಜ್ಞಾಪಿಸಿ ಕೊಡುತ್ತಾರೆ. ಆಗ ಕಾತ್ಯಾಯನಿಗೆ ಮಾವನ ವ್ಯಕ್ತಿತ್ವದ ಮುಂದೆ ತಾನೆಷ್ಟು ಚಿಕ್ಕವಳು ಎನಿಸುತ್ತದೆ. ಅವರಲ್ಲಿ ಕ್ಷಮೆ ಕೇಳುತ್ತಾಳೆ. ರಾಜಾರಾಯನಿಗೂ ತಾನು ವಯಸ್ಸಿನಲ್ಲಿ ನಿಮಗಿಂತ ದೊಡ್ಡವಳು, ನೀವೊಬ್ಬ ಅನರ್ಹಳನ್ನು ಪ್ರೀತಿಸಿದ್ದೀರಿ ನೀವು ನನ್ನನ್ನು ಮರೆತು ಬಿಡಬೇಕೆಂದು ಪರೀಕ್ಷೆಯ ಕಡೆಗೆ ತನ್ನ ಮನಸ್ಸನ್ನು ಕೇಂದ್ರೀಕೃತ ಮಾಡಿಕೊಳ್ಳುತ್ತಾಳೆ. ಆದರೆ ಪರೀಕ್ಷೆ ಮುಗಿದು ಕೆಲವೇ ದಿನಗಳಲ್ಲಿ ತನ್ನ ಮನಸ್ಸಿನ ಸಂಯಮವನ್ನು ಕಳೆದುಕೊಂಡ ಕಾತ್ಯಾಯನಿ ರಾಜರಾಯನ ಬಳಿಗೆ ಓಡಿ ಬರುತ್ತಾಳೆ. ಆತನನ್ನೇ ತನ್ನ ಪುರುಷನೆಂದು ಬಗೆದು, ಮುಂದೆ ಆತನನ್ನೇ ಮದುವೆಯಾಗುತ್ತಾಳೆ. ನಾನು ತಮ್ಮಂತೆ ಸಂಯಮದಿಂದ ಇರಲು ಪ್ರಯತ್ನಿಸಿ ಸೋತು ಹೀಗೆ ಮಾಡಿದ್ದೇನೆ ಎಂದು ಮಾವನವರಿಗೆ ಇನ್ನೊಂದು ಪತ್ರ ಬರೆದು ತಿಳಿಸುತ್ತಾಳೆ. ರಾಜರಾಯನ ಜೊತೆಗೆ ಕೆಲವೊಂದು ದಿನ ದಾಂಪತ್ಯ ಸುಖವನ್ನು ಅನುಭವಿಸಿದ ಕಾತ್ಯಾಯನಿ ತನ್ನ ಮಗನಾದ ಚೀನೀಯನ್ನು ಕರೆತರಲು ನಂಜನಗೂಡಿಗೆ ಹೋಗುತ್ತಾಳೆ. ಅಲ್ಲಿ ಆಕೆಯ ಅತ್ತೆ-ಮಾವ ನಮ್ಮ ವಂಶದ ಕುಡಿಯಾದ ಆ ಮಗುವನ್ನು ನಿನಗೆ ಒಪ್ಪಿಸುವುದಿಲ್ಲವೆಂದು ಖಾರವಾಗಿ ನುಡಿಯುತ್ತಾರೆ. "ವಂಶದ ವೃಕ್ಷವನ್ನು ಬಿಟ್ಟು ಯಾವ ಕುಡಿಯೂ ತಾಯ್ತನದ ಹೆಮ್ಮೆಯನ್ನು ಹೇಳಲಾರದು. ವಂಶದ ಉದ್ದೇಶವನ್ನು ಪೂರ್ಣಗೊಳಿಸುವುದಕ್ಕಾಗಿಯೇ ಸ್ತ್ರೀ-ಪುರುಷರು ಸತಿ-ಪತಿಗಳಾಗಿರುವಾಗ, ಆ ಉದ್ದೇಶದಿಂದ ಹೊರಗೆ ತಾಯ್ತನ ಎಲ್ಲಿ ಬರುತ್ತೇ? ಮಕ್ಕಳು ತಂದೆ-ತಾಯಿಗಳಿಗೆ ಮಕ್ಕಳಾಗಿರುವಂತೆ ಅಜ್ಜ-ಅಜ್ಜಿಯರಿಗೆ ಮೊಮ್ಮಕ್ಕಳು ಆಗಿರುತ್ತವೆ. ಮಗ ಇವತ್ತು ಮಾಡಿದ ಹಾಗೆ ಮುಂದೆಯೂ ತನ್ನ ತಂದೆಗೂ ಇತರ ಪಿತೃಗಳಿಗೂ ಶ್ರಾದ್ಧಮಾಡಿ ಋಣ ತೀರಿಸುವುದು ಬೇಡವೆ? ಕಾನೂನಿನಂತೆ ಈ ವಂಶದ ಆಸ್ತಿಗೆ ಹಕ್ಕುದಾರರಾರು? ಒಂದು ವಂಶದ ಬೀಜವು ಮುಂದುವರೆಯುವುದಕ್ಕಾಗಿಯೇ ಒಂದು ಕ್ಷೇತ್ರವನ್ನು ಬೇರೊಂದು ವಂಶದವರು ದಾನ ಮಾಡುತ್ತಾರೆ. ಆ ವಂಶದ ಬೀಜವನ್ನು ತನ್ನಲ್ಲಿ ಬೆಳೆಸಿ ವೃಕ್ಷವನ್ನಾಗಿ ಮಾಡಿದ ಮೇಲೆ ಆ ಕ್ಷೇತ್ರವು ತನ್ನ ಸಾರ್ಥಕ್ಯವನ್ನು ಪಡೆಯಿತು. ಒಮ್ಮೆ

ತಾಯಿಯಾದವಳು ಎಂದೆಂದಿಗೂ ತಾಯಿಯೇ ಪುನಃ ಕನ್ಯೆಯಂತೆ ಹೊಸ ಪತ್ನೀತ್ವವನ್ನು ಪ್ರಾರಂಭಿಸುವುದು ಹೇಗೆ? ವಿಕಾಸ ಪಥದಲ್ಲಿ ಒಮ್ಮೆ ಕಳೆದ ಸ್ತರವನ್ನು ಪುನಃ ಬಯಸುವುದು ಸೃಷ್ಟಿಯ ನಿಯಮಕ್ಕೆ ವಿರೋಧವಾದುದು. ಮಾನವ ಜೀವನಕ್ಕೆ ಪಾಪಕರವಾದುದು[೧] ಹೀಗೆ ವಿಧವಾ ವಿವಾಹದ ಸಮಸ್ಯೆಗೆ ಪೂರಕವಾಗಿ ಕಾತ್ಯಾಯನಿಯ ಪಾತ್ರ ಕಾದಂಬರಿಯಲ್ಲಿ ಸೃಷ್ಟಿಗೊಂಡು ಬೆಳೆಯುತ್ತಾ ಹೋಗುತ್ತದೆ.

ಮಾವನವರ ಮಾತಿನಿಂದ ನೊಂದುಕೊಂಡ ಕಾತ್ಯಾಯನಿ "ಕ್ಷೇತ್ರವಾದ ತಾನು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗುವಿನ ಮೇಲಿನ ತನ್ನ ಅಧಿಕಾರವನ್ನು ತಾನು ವಾದಗಳಿಂದ ಸಿದ್ಧ ಮಾಡಬೇಕೆ, ಮಾತೃತ್ವದ ಸತ್ಯವೇ ದುರ್ಬಲವಾಗುವ ಇದೆಂಥಹ ಪರಿಸ್ಥಿತಿ"[೨] ಎಂದು ಅಸಮಧಾನದಿಂದ ಹೊರಟುಹೋಗುತ್ತಾಳೆ.

ಮುಂದೆ ಕಾತ್ಯಾಯನಿ ಬಿ.ಎ ಅಲ್ಲದೆ ಎಂ.ಎ ವಿದ್ಯಾಭ್ಯಾಸವನ್ನು ಮುಗಿಸಿ ಕಾಲೇಜಿನಲ್ಲಿ ಪ್ರಾಧ್ಯಾಪಕಿಯಾಗಿ ದುಡಿಯತ್ತಿದ್ದರೂ ಕೂಡ ಮಗ ಚೀನೀಯನ್ನು ಮರೆಯಲು ಸಾಧ್ಯವಾಗುವುದಿಲ್ಲ. ಈ ನಡುವೆ ಮೂರು ಬಾರಿ ಗರ್ಭಪಾತವಾಗುತ್ತದೆ. ತನ್ನ ಕಾಲೇಜಿಗೆ ಬರುತ್ತಿರುವ ಚೀನೀಯನ್ನು ಕರೆದು ತಾನೇ ನಿನ್ನ ತಾಯಿ ಎಂದು ಹೇಳಿಕೊಂಡರೂ ಕೂಡ ಆತ ತನ್ನ ತಾಯಿಯೇ ತನಗೆ ಗೊತ್ತಿಲ್ಲವೆಂದು ಹೇಳಿದಾಗ ಮತ್ತೊಮ್ಮೆ ಅತೀವವಾದ ದುಃಖಕ್ಕೆ ಒಳಗಾಗುತ್ತಾಳೆ. ತನ್ನ ಕರುಳಿನಿಂದ ಬಂದ ರೆಂಬೆಯಿಂದಲೇ ತಿರಸ್ಕೃತವಾದ ಮೇಲೆ ಮರವು ಎಷ್ಟು ಸೊಂಪಾಗಿ ಬೆಳೆದು ಫಲವೇನು? ಎಂದು ದೇಹದ ಮೇಲಿನ ಆಸೆಯನ್ನು ಬಿಡುತ್ತಾಳೆ. 'ಪ್ರಕೃತಿ ಚಿರನೂತನಳೂ ಅಲ್ಲ; ಚಿರಚೇತನಳೂ ಅಲ್ಲ ಧರ್ಮಪಥವನ್ನು ಧಿಕ್ಕರಿಸಿದರೆ ಅವಳಿಗೆ ಜೀವನವೇ ಬೇಡವೆನಿಸುತ್ತದೆ' ಎಂಬ ತನ್ನ ಬದುಕಿನ ಅನುಭವದೊಂದಿಗೆ

---

[೧] 'ವಂಶವೃಕ್ಷ'. ಪುಟ ೯೮. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೬೭.

[೨] ವಂಶವೃಕ್ಷ ಪುಟ ೯೯. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೬೭.

ಮುಂದುವರಿಯುವುದಿಲ್ಲ. ಪ್ರಕೃತಿ ಪುರುಷ, ಪ್ರಕೃತಿ ಚಿರನೂತನೆ, ವಿಧವೆಯಲ್ಲ ಮುಂತಾದ ಎಲ್ಲ ಸಿದ್ಧಾಂತಗಳನ್ನೂ ಅವಳು ಬುದ್ಧಿಯ ಸ್ತರದಲ್ಲಿ ಅರ್ಥ ಮಾಡಿಕೊಂಡಿದ್ದಳು. ಆದರೆ ಹೃತ್ಪೂರ್ವಕವಾಗಿ ಸಾಕ್ಷಾತ್ಕರಿಸಿಕೊಂಡಿರಲಿಲ್ಲ. ಹೆಣ್ಣು-ಗಂಡಿನ ಮುಖ್ಯ ಅಂಶ ಕಾಮ ಎಂಬ ಸತ್ಯವನ್ನು ಪ್ರಕೃತಿ–ಪುರುಷರ ಮಿಲನವೆಂಬ ಉನ್ನತೀಕರಿಸಿದ ಭಾವದಲ್ಲಿ ಒಪ್ಪಿಕೊಂಡಿದ್ದಳು. ರಾಜನಿಲ್ಲದೆ ಬದುಕಲು ಆಗುವುದಿಲ್ಲವೆನ್ನುವುದನ್ನೂ ಅರಿತಿದ್ದಳು. ಆದರೂ, ಪಾಪವೇ ಇಲ್ಲದ ಕಡೆ ಪಾಪಪ್ರಜ್ಞೆಯಿಂದ ನರಳಿ ನರಳಿ ಸಾಯುವಂತೆ ಮಾಡಿ ಕಾದಂಬರಿಗಾರರು ಪ್ರತಿಗಾಮೀ ಮನೋಭಾವದವರೆಂದೆನಿಸಿಕೊಳ್ಳುತ್ತಾರೆ. ಆದರೆ ಯಾವ ಹೆಣ್ಣು ಕಾತ್ಯಾಯನಿಯಂತಾಗಬಾರದೆಂಬ ಕಾಳಜಿಯೂ ಅವರಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಅಲ್ಲದೆ ಯುಗಸಂಧಿ ಕಾಲದಲ್ಲಿ ಹೊಸಹೆಜ್ಜೆ ಇಡುವ ವ್ಯಕ್ತಿಗಳಿಗೆ ಅಪೂರ್ವವಾದ ಮಾನಸಿಕ ಸಿದ್ಧತೆಯ ಅಗತ್ಯತೆಯನ್ನು ಕಾತ್ಯಾಯನಿಯ ಪಾತ್ರಚಿತ್ರಣ ಸಂದರ್ಭದಲ್ಲಿ ಗುರುತಿಸುತ್ತಾರೆ.

ಕಾದಂಬರಿಕಾರರಾದ ಭೈರಪ್ಪನವರು ಭಾರತೀಯ ಜೀವನಕ್ರಮವು ಆಧುನಿಕತೆಗೆ ಹೊರಳಿಕೊಳ್ಳುವ ಸಂಕ್ರಮಣ ಕಾಲದ ಸಂದಿಗ್ಧಗಳನ್ನು, ಮೌಲ್ಯ ಸಂಘರ್ಷವನ್ನು ಚಿತ್ರಿಸುವ ಉದ್ದೇಶವನ್ನಿಟ್ಟುಕೊಂಡು ತಮ್ಮ ಉದ್ದೇಶಕ್ಕೆ ಪೂರಕವಾಗಿ, ಕಾತ್ಯಾಯನಿಯ ಪಾತ್ರ ಸೃಷ್ಟಿ ಹಾಗೂ ಪಾತ್ರ ಬೆಳವಣಿಗೆಯನ್ನು ಮಾಡಿರುತ್ತಾರೆ. ಹಳೆಯ ಮೌಲ್ಯಸಿದ್ಧಾಂತವನ್ನು ತಿರಸ್ಕರಿಸಿ ಕಾತ್ಯಾಯನಿ ಮರುಮದುವೆಯನ್ನು ಮಾಡಿಕೊಂಡಳು. ಆದರೆ ಅವಳಿಗೆ ಸುಖವಾಗಲೀ ನೆಮ್ಮದಿಯಾಗಲೀ ದೊರಕಲಿಲ್ಲ. ಪಾಪಭೀತಿ ಅವಳನ್ನು ಕಾಡತೊಡಗಿತು. ಸಾವಿರಾರು ವರ್ಷಗಳ ಜೀವನಕ್ರಮದ ಬಿಗಿಮುಷ್ಟಿಯಿಂದ ಬಿಡುಗಡೆ ಹೊಂದುವಷ್ಟು ದೃಢವಾದ ಮನಸ್ಸಾಗಲೀ, ವೈಚಾರಿಕ ಪ್ರಜ್ಞೆಯಾಗಲೀ ಅವಳಿಗಿಲ್ಲ ಅಥವಾ ಹೊಸವಿಚಾರ ಬುದ್ಧಿಯ ಮಟ್ಟದಲ್ಲಿದೆ. ಹೃದಯಸ್ಥವಾಗಿಲ್ಲ ಮೇಲಿಂದ ಮೇಲೆ ಅವಳಿಗೆ ಸಂತಾನ ನಷ್ಟವಾಗುತ್ತದೆ. ಬೇರೇ

ವಂಶಕ್ಕೆ ತಾಯಿಯಾಗುವ ಅರ್ಹತೆ ತನಗಿಲ್ಲವೇನೋ ಎಂದು ಸಂದೇಹಿಸುವ ನೆಲೆಯವರೆಗೂ ಅವಳು .ಹೋಗುತ್ತಾಳೆ. ಕಾತ್ಯಾಯನಿಯ ಸೋಲು ಆಧುನಿಕ ಪ್ರಜ್ಞೆಯ ಬಹುದೊಡ್ಡ ಸೋಲಿನ ಅಂಶವಾಗುತ್ತದೆ. ಯುಗ ಸಂಕ್ರಮಣ ಕಾಲದ ಹೃದಯವೇಧಕ ಬಲಿಗಳಲ್ಲಿ ಕಾತ್ಯಾಯನಿಯ ಬಲಿಯೂ ಒಂದು. ಆಕೆ ವಿದ್ಯಾವಂತಳೂ, ಬುದ್ದಿವಂತಳೂ, ಉದ್ಯೋಗಸ್ಥಳೂ ಆಗಿದ್ದರೂ ಕೂಡ ಹಳೆಯ ಮೌಲ್ಯಗಳನ್ನು ತೆರೆಯಲೂ ಆಗದೇ, ಆಧುನಿಕ ಪ್ರಜ್ಞೆಯನ್ನು ಮೂಡಿಸಿಕೊಳ್ಳಲು ಆಗದೇ ತೊಳಲಾಡುವ ಕಾತ್ಯಾಯನಿಯ ಪಾತ್ರವು ವಂಶವೃಕ್ಷದಲ್ಲಿ, ಅತ್ಯಂತ ಗಮನಸೆಳೆದ ಪಾತ್ರವಾಗಿ ರಚನೆಗೊಂಡಿದೆ.ಇದರಿಂದಾಗಿ 'ವಂಶವೃಕ್ಷ'ದ ಕಾತ್ಯಾಯನಿ ಜನಮನದಲ್ಲಿ ನೆಲೆನಿಂತು ಬಿಟ್ಟಿರುತ್ತಾಳೆ.

************

## 'ನಂಜಮ್ಮ'

ನಂಜಮ್ಮ 'ಗೃಹಭಂಗ' ಕಾದಂಬರಿಯ ಕೇಂದ್ರ ಪಾತ್ರ. ನಾಗಲಾಪುರಕ್ಕೆ ಹುಲಿಯಂತೆ ಇದ್ದ ಕಂಠೀ ಜೋಯಿಸರ ಮಗಳು. ಈಕೆ ಚಿಕ್ಕಂದಿನಲ್ಲೇ ತಾಯಿಯನ್ನು ಕಳೆದುಕೊಂಡವಳು. ಈಕೆ ಅತ್ಯಂತ ಸಹನಶೀಲೆ, ಹಠಮಾರಿ ರಾಕ್ಷಸಿ ಅತ್ತೆಯೊಡನೆ, ಪಶುಪ್ರವೃತ್ತಿಯ ಗಂಡ ಚೆನ್ನಿಗರಾಯನೊಡನೆ, ಮೂರ್ಖನಾದ ಮೈದುನ ಅಪ್ಪಣ್ಣಯ್ಯನೊಡನೆ ನಿರಂತರವಾಗಿ ಹೆಣಗುತ್ತಲೇ ತನ್ನ ಕುಟುಂಬಕ್ಕೆ ಸದಾ ಒಳ್ಳೆಯದನ್ನೇ ಅಪೇಕ್ಷಿಸುವ ಸಾಧ್ವಿ. ಅತ್ತೆ ಮನೆಯ ಮತ್ತು ತೌರುಮನೆಯ ಗೌರವಗಳೆರಡನ್ನೂ ಕೊನೆಯವರೆಗೂ ಕಾಪಾಡಿಕೊಂಡು ಹೋಗುತ್ತಾಳೆ. ಕುಟುಂಬ ಸಮಸ್ಯೆಗಳು ಒಂದರ ಮೇಲೆ ಒಂದರಂತೆ ಬೆಟ್ಟದಂತೆ ನಿಂತಾಗ ತುಂಬ ಧೈರ್ಯದಿಂದ ಸಮಸ್ಯೆಗಳೊಂದಿಗೆ ಹೋರಾಡುತ್ತಾಳೆ. ಅಪ್ಪಣ್ಣಯ್ಯ ಮತ್ತು ಚೆನ್ನಿಗರಾಯ ಸ್ಥಾನದಲ್ಲಿ ನಿಂತು ಶ್ಯಾನುಭೋಗಿಕೆಯ ಲೆಕ್ಕವನ್ನು ತಾನೇ ಬರೆದು ಜೀವನ ನಿರ್ವಹಿಸುತ್ತಾಳೆ. ಸೊಸೆಯನ್ನು ಬಾಳಿಸದ ಅತ್ತೆ, ಯಾರ ಬಗ್ಗೆಯೂ ಕಿಂಚಿತ್ ವಿಶ್ವಾಸವಿಲ್ಲದ ಗಂಡ, ಜಮೀನು ಹೋದಲ್ಲಿ, ಅದನ್ನು ಉಳಿಸಿಕೊಳ್ಳಲು ಆಕೆ ಮಾಡುವ ಪ್ರಯತ್ನ, ಮಕ್ಕಳೊಡನೆ ಏಕಾಕಿಯಾಗಿ ಒಂದು ಸಂಸಾರ ಹೂಡಿದ್ದು, ಹೀಗೆ ಹಂತ ಹಂತವಾಗಿ ಮುರಿದು ಬೀಳುತ್ತಿದ್ದ ಸಂಸಾರವನ್ನು ಎತ್ತಿ ನಿಲ್ಲಿಸುವ ಸತತ ಪ್ರಯತ್ನ ಮಾಡುತ್ತಾಳೆ.

ಕ್ರೂರಿ ಅತ್ತೆ, ನಿಷ್ಕರುಣ ಗಂಡ, ಮನೆಯ ಹೊರಗಿನ ಶಿವೇಗೌಡ, ಅಣ್ಣಾ ಜೋಯಿಸ, ಕೋರ್ಟು, ಪ್ರಕೃತಿ–ಎಲ್ಲರನ್ನೂ ಒಟ್ಟಾಗಿ ಎದುರಿಸುವ ಶಕ್ತಿ ನಂಜಮ್ಮಳದು. ದುಡಿಮೆಯಲ್ಲಿ ಗಂಡಿಗಿಂತ ಒಂದು ಕೈ ಮೇಲೆ ತಾನೇ ನಿಂತು ಮನೆ ಕಟ್ಟುವುದು ಎಲೆ ಹಚ್ಚಿ ಮಾರುವುದು, ಮನೆಯ ಹಿತ್ತಲಲ್ಲಿ ಸೊಪ್ಪು, ತರಕಾರಿ ಬೆಳೆಯುವುದು–ಹೀಗೆ ಒಂದಲ್ಲ ಒಂದು ಕೆಲಸ ಸತತವಾಗಿ ಮಾಡುತ್ತಾಳೆ. ಈಕೆ ತನ್ನ ಬದುಕಿನಲ್ಲಿ ಬರುವ

ಸಮಸ್ಯೆಯನ್ನು ಎದುರಿಸುವಲ್ಲಿ ತೋರುವ ಸಹನೆ, ಧೈರ್ಯ ಮತ್ತು ವಿವೇಕಗಳು ಎಂತಹವರಲ್ಲೂ ಅಚ್ಚರಿ ಹುಟ್ಟಿಸುತ್ತದೆ. ಆಕೆಯ ಬಗ್ಗೆ ಅಭಿಮಾನ ಮೂಡಿಸುತ್ತದೆ.

ಕೆಲವೊಂದು ಧಾರ್ಮಿಕ ನಂಬಿಕೆಗಳನ್ನು ಮೆಟ್ಟಿ ನಿಲ್ಲುವ ನಂಜಮ್ಮ (ಮಗಳು ಮೈನೆರೆದಾಗ ಯಾರಿಗೂ ಹೇಳದೆ ಗುಟ್ಟಾಗಿ ಇಟ್ಟು ಅವಳ ಸೇವೆ ಮಾಡುವುದು) ಕೆಲವೊಂದು ವೇಳೆ ಸಂಪ್ರದಾಯ ಮತ್ತು ಮೂಢನಂಬಿಕೆಗಳ ವಿರುದ್ಧ ನಡೆಯಲು ಹೆದರುತ್ತಾಳೆ. (ಮಗಳು ಪ್ಲೇಗಿಗೆ ತುತ್ತಾದಾಗ ಅವಳನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಔಷಧಿ ಕುಡಿಸಲು ಕೂಡ ಹಿಂಜರಿಯುತ್ತಾಳೆ. "ಮಗೂಗೆ ನೀನ್ಯಾಕೆ ಔಷಧೀ ಕುಡಿಸಿದೆ" ಅಂತ ಅಮ್ಮ ಸಿಟ್ಕಂಡ್ರೆ ಎಂಬ ಹೆದರಿಕೆ) ಪ್ಲೇಗಿನಿಂದಾಗಿ ತನ್ನ ಮಕ್ಕಳು ಸತ್ತಾಗ ನಂಜಮ್ಮ ತನ್ನ ಬದುಕನ್ನು ಒಮ್ಮೆ ಪುನರಾಲೋಕಿಸಿಕೊಳ್ಳುತ್ತಾಳೆ. "ಪಾರ್ವತಿ ರಾಮಣ್ಣ ಎಷ್ಟು ಸಮರ್ಥವಾಗಿ ಹಸಿವು ತಡೆಯಲಾರದೆ ತನ್ನನ್ನು ಹೊಡೆಯುತ್ತಿದ್ದ, ಅವನ ಸ್ವಭಾವವೇ ಹಾಗೆ . . . . ಧೈರ್ಯ, ಸಿಟ್ಟು, ಸಿಡುಕು, ಊಟದಲ್ಲಿ ಮುಂದು, ಆದರೆ ಅಪ್ಪನ ಹಾಗೆ ತನ್ನ ಒಡಲು ಮಾತ್ರ ತುಂಬಿಕೊಳ್ಳುವ ನೀಚ ಬುದ್ಧಿ ಇಲ್ಲ . . . . ಹಿತ್ತಲಿನ ತರಕಾರಿಗೆ ನೀರು ಹುಯ್ದು, ಗಂಡ ಕದ್ದು ಹಣ ತಿನ್ನದಂತೆ ಕಾವಲು ಕಾಯ್ದು, ಬೆಳಿಗ್ಗೆ, ಸಂಜೆ ಮುತ್ತಗದೆಲೆ ಹಚ್ಚಿ, ಮಕ್ಕಳಿಗೆ ಒಂದು ರೊಟ್ಟಿ, ಅರ್ಧ ಮುದ್ದೆ, ಹಿಟ್ಟು ಅದೂ ಇಲ್ಲದಿದ್ದರೆ ಒಂದು ಹಿಡಿಸೊಪ್ಪು, ಇಷ್ಟನ್ನು ತೂತು ಬಿದ್ದು ಅರಿವೆ ಬಿಳಲು ಹಾಕಿ ಮುಚ್ಚಿದ ಅಲ್ಯೂಮಿನಿಯಂ ತಟ್ಟೆಗೆ ಬಡಿಸುವುದಕ್ಕೆ ಮಾತ್ರವೇ ಬದುಕಿರಬೇಕೆ? ಇನೇನುಂಟು ಬದುಕಿನಲ್ಲಿ"[೧]. ಎಂದುಕೊಂಡಳು. ಮಕ್ಕಳು ಸತ್ತಾಗ ತಾನೂ ಆತ್ಮಹತ್ಯೆ ಮಾಡಿಕೊಳ್ಳಲು ಯೋಚಿಸುತ್ತಾಳೆ. ಆದರೆ ಕೊನೆಯ ಮಗುವಿಗಾಗಿ ತನ್ನ ನಿರ್ಧಾರ ಬದಲಾಯಿಸಿಕೊಳ್ಳುತ್ತಾಳೆ. ಕೊನೆಗೆ ತಾನು ಪ್ಲೇಗಿಗೆ

---

[೧] 'ಗೃಹಭಂಗ' ಪುಟ-೩೩೦ -ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೭೦.

ತುತ್ತಾಗಿ ಸಾವುವನ್ನು ಅಪ್ಪುತ್ತಾಳೆ. ಆ ಸಂದರ್ಭದಲ್ಲಿ ದೂರದ ಊರಿನಲ್ಲಿರುವ ತನ್ನ ಮಗನನ್ನು ಕರೆಯಿಸಬೇಡಿ ಊರಿಗೆ ಪ್ಲೇಗು ಬಂದಿದೆ ಎಂದು ಪ್ರಾಣ ಬಿಡುತ್ತಾಳೆ.

ಎಸ್.ಎಲ್.ಭೈರಪ್ಪನವರು ಸೃಷ್ಟಿಸಿರುವ ಈ ಪಾತ್ರವು ಗ್ರಾಮ್ಯ ಜೀವನದ ಅಂತಃಸತ್ವದಿಂದ ಅರಳಿದ ಆಕರ್ಷಕವಾದ ಪುಷ್ಪ, ನಂಜಮ್ಮಳ ಬದುಕಿನ ಹೋರಾಟದ ಕಥೆಯನ್ನೇ ಕಾದಂಬರಿಯ ವಸ್ತುವನ್ನಾಗಿ ಆರಿಸಿಕೊಂಡಿರುವ ಕಾದಂಬರಿಕಾರರು, ಇಲ್ಲಿ ನೇರವಾದ ನಿರೂಪಣಾ ವಿಧಾನವನ್ನು ಅನುಸರಿಸಿ, ನಂಜಮ್ಮಳ ಪಾತ್ರದ ಬೆಳವಣಿಗೆಯ ಮೂಲಕ ಕಥೆಯ ಎಲ್ಲ ಸತ್ವಗಳನ್ನೂ ಯಥಾವತ್ತಾಗಿ ಬಿಡಿಸುತ್ತಾ ಹೋಗುತ್ತಾರೆ. ಇಲ್ಲಿ ನಂಜಮ್ಮನ ಪಾತ್ರದ ಬದುಕಿನ ಹೋರಾಟದ ದುರಂತದ ಮೂಲಕ ಆಕೆಯ ಸುತ್ತಲಿನ ಪರಿಸರದಲ್ಲಿರುವವರ ಅನುಕಂಪ, ನಿರ್ದಯೆ, ಮೂರ್ಖತನ ಮತ್ತು ಹಠಮಾರಿತನಗಳ ಪರಿಚಯವಾಗುತ್ತದೆ. ಅದೇ ರೀತಿಯಲ್ಲಿ ನಂಜಮ್ಮ ಗಂಡನಿಂದ, ಅತ್ತೆಯಿಂದ ಊರವರಿಂದ ಕೊನೆಗೆ ತನ್ನ ಮೌಢ್ಯದಿಂದ ಅನುಭವಿಸುವ ಕಷ್ಟಗಳಿಗೆ ಮಿತಿಯೇ ಇಲ್ಲ. ಈ ಕಷ್ಟಗಳನ್ನು ಎದುರಿಸುವ ಆಕೆಯ ಧೈರ್ಯ, ಛಲ ಸಂಕಷ್ಟದಲ್ಲೂ ಪರರ ಕಷ್ಟಗಳಿಗೆ ಸಹಕರಿಸುವ ಆಕೆಯ ಬಗ್ಗೆ ಗೌರವನ್ನುಂಟುಮಾಡುತ್ತದೆ.

ನಂಜಮ್ಮ ಅಪರೂಪದ ಸ್ತ್ರೀ ಆದರೂ, ನಮ್ಮಲ್ಲಿ ಅಂತಹವರು ಅನೇಕ. ಹಳ್ಳಿಗಳಲ್ಲಿ, ನಗರಗಳಲ್ಲಿ, ಸ್ತ್ರೀ ಅವಿದ್ಯಾವಂತೆಯಾಗಿದ್ದ ಸಂದರ್ಭದಲ್ಲೂ, ಗಂಡ ಸತ್ತಾಗ ಅಥವಾ ಅಸಹಾಯಕನಾಗಿದ್ದಾಗ, ಸಾರಿನ ಪುಡಿ, ಹುಳಿಪುಡಿ ಮಾಡಿ, ಪರರ ಮನೆಯಲ್ಲಿ ಅಡಿಗೆ ಕೆಲಸ ಮಾಡಿಕೊಂಡು ಮಕ್ಕಳನ್ನು ದೊಡ್ಡವರನ್ನಾಗಿ, ವಿದ್ಯಾವಂತರನ್ನಾಗಿ ಬೆಳೆಸಿದ ಮಹಿಳೆಯರು ನಮ್ಮಲ್ಲಿ ಅನೇಕರಿದ್ದಾರೆ. ನಂಜಮ್ಮನ ಪಾತ್ರವನ್ನು ಅಂತಹವರ ಪ್ರತಿನಿಧಿ ಪಾತ್ರವಾಗಿ ಚಿತ್ರಿಸಿದ ಕಾದಂಬರಿಕಾರರ ಕೌಶಲ್ಯತೆಯನ್ನು ಇಲ್ಲಿ ನೆನೆಯಬಹುದು. ವಾಸ್ತವ ಜೀವನದಲ್ಲಿ ನಂಜಮ್ಮ ಸತ್ತಿರಬಹುದಾದರೂ ಕಾದಂಬರಿಯಲ್ಲಿ ಆ ಪಾತ್ರವನ್ನು ಬದುಕಿಸಬೇಕಾಗಿತ್ತು. ಕಷ್ಟಪಟ್ಟು

ಮಕ್ಕಳನ್ನು ಬೆಳೆಸಿದ ನಂಜಮ್ಮ ಯಶಸ್ವಿಯಾಗುವ ಮೊದಲೇ ಸತ್ತಿದ್ದರಿಂದ ಕಾದಂಬರಿಯನ್ನು ಓದಿ ಮುಗಿಸಿದಾಗ ಓದುಗರಲ್ಲಿ ವಿಷಾಧದ ಭಾವಮೂಡಿ ನಂಜಮ್ಮನ ಪಾತ್ರ ಎಲ್ಲರ ಮನಸ್ಸನ್ನು ಆವರಿಸಿಕೊಂಡು ಬಿಡುತ್ತದೆ.

************

# 'ಡಾ॥ ಸರೋಜಾ'

ಎಸ್.ಎಲ್.ಭೈರಪ್ಪನವರ 'ಗ್ರಹಣ' ಕಾದಂಬರಿಯ ಕೇಂದ್ರ ಸ್ತ್ರೀ ಪಾತ್ರ ಡಾ। ಸರೋಜಾ. ಈಕೆ ಸ್ವಂತಿಕೆಯುಳ್ಳ ಸ್ತ್ರೀ. ಇನ್ನೊಬ್ಬರ ಅಭಿಪ್ರಾಯಕ್ಕೆ ಜೋತು ಬಿದ್ದು ತನ್ನತನವನ್ನು ಕಳೆದುಕೊಂಡು ದುರಂತಕ್ಕೀಡಾಗುವವಳಲ್ಲ. ದಿಟ್ಟತನದಿಂದ ಬದುಕನ್ನು ಸಂಪ್ರದಾಯವನ್ನು ಎದುರಿಸಬಲ್ಲ ಮನಸ್ಸುಳ್ಳವಳು. ಹಿಮಗಿರಿ ಪ್ರದೇಶದಲ್ಲಿ ಹೊಸ ದೃಷ್ಟಿಕೋನ ಇದ್ದವಳೆಂದರೆ ಸರೋಜಳೊಬ್ಬಳೇ. ಡಾಕ್ಟರಾಗಿ ಜನಸೇವೆ ಮಾಡುತ್ತಿರುವ ಅವಳಿಗೆ, ಸಾರ್ವಜನಿಕ ಸೇವಾ ಕಾರ್ಯಕ್ಕೂ ಆಧ್ಯಾತ್ಮಿಕತೆಗೂ ಇರುವ ಸಂಬಂಧವನ್ನು ತಪ್ಪಿಸಬೇಕೆಂಬ ಸ್ವಾಮಿಗಳ ವಿಚಾರದಲ್ಲಿ ಆಸಕ್ತಿ ಇದೆ. 'ನೀತಿ ನ್ಯಾಯ ಧರ್ಮ ಮೊದಲಾದುವನ್ನು ಮನುಷ್ಯನ ಜೈವಿಕ ಅಗತ್ಯಗಳನ್ನು ಮತ್ತು ಅಂತಃಕರಣವನ್ನು ಅನುಲಕ್ಷಿಸಿ ವ್ಯಾಖ್ಯೆ ಮಾಡಬೇಕು'[೧] ಎಂಬ ಆಕೆಯ ಆಲೋಚನೆಯ ಗಟ್ಟಿತನವನ್ನು, ಅಪ್ಪೇಗೌಡರನ್ನು ಬದುಕಿಸುವಲ್ಲಿ ಕಾಣುತ್ತೇವೆ. ಈಕೆಯ ಕೆಲವು ಗುಣಗಳು ನಂಜಮ್ಮನ್ನನ್ನು ನೆನಪಿಗೆ ತಂದರೆ, ಅವಳು ಆತ್ಮವಿಮರ್ಶೆಗೆ ತೊಡಗುವುದು 'ದಾಟು'ವಿನ ಸತ್ಯಳನ್ನು ಹೋಲುತ್ತದೆ.

ದೇವರ ಪ್ರತಿರೂಪವೆಂದು ಜನರು ಭಾವಿಸುತ್ತಿದ್ದ ಸ್ವಾಮಿಗಳನ್ನು ಮದುವೆಯಾಗಲು ಸರೋಜಾ ನಿಶ್ಚಯಿಸಿ ಇಡೀ ಹಿಮಗಿರಿಯ ಶ್ರದ್ಧಾ ಕೇಂದ್ರವನ್ನು ಕದಡುತ್ತಾಳೆ. ಸ್ವಾಮಿಗಳಿಗೆ ಗ್ರಹಣ ಹಿಡಿಸಿದ ಮೋಹಗಾರ್ತಿಯಾಗುತ್ತಾಳೆ. ಊರಿನ ಮುಖ್ಯಸ್ಥರು ಸ್ವಾಮಿಗಳನ್ನು ಸರಿಯಾದ ರೀತಿಯಲ್ಲಿ ಎದುರಿಸಲಾರದೆ ಸರೋಜಳನ್ನು ಹಿಡಿಯುತ್ತಾರೆ. ಮಾನಸಿಕ ಉದ್ರೇಕಕ್ಕೆ ಒಳಗಾದ ಮಹಾದಾನಿ ಅಪ್ಪೇಗೌಡ, ಶಾಸ್ತ್ರಿ, ಚಂದ್ರಪ್ಪ ಮತ್ತು ಪ್ರಿನ್ಸಿಪಾಲರು ಇವಳ ಪ್ರತಿಸ್ಪರ್ಧಿಗಳಾಗುತ್ತಾರೆ. ಅವರೆಲ್ಲರ ಬಗ್ಗೆ ಇವಳಲ್ಲಿ ತಿರಸ್ಕಾರ ಅಸಹ್ಯ ಬೆಳೆಯುತ್ತ ಹೋಗುತ್ತದೆ.

---

[೧] 'ಗ್ರಹಣ' ಪುಟ ೮೨– ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೭೨.

ಸ್ವಾಮಿಗಳ ಜೊತೆಗೆ ಮದುವೆಯಾಗಿ ನಿಷೇಕವನ್ನು ಪೂರೈಸಿರುವ ಸರೋಜ, ಸ್ವಾಮಿಗಳ ಗುಡಿ ಬಿದ್ದುಹೋಗಿರುವ ಕಾರಣ ಅವರನ್ನು ತನ್ನ ಮನೆಯಲ್ಲಿಯೇ ತಂದಿರಿಸಿಕೊಳ್ಳುತ್ತಾಳೆ. ಇದರಿಂದಾಗಿ ಹಿಮಗಿರಿ ಪ್ರದೇಶದ ಪರಿಸ್ಥಿತಿಯು ಹದಗೆಡುವುದು. ಆಗ ಶಾಸ್ತ್ರಿಗಳು ಮನೋರೋಗಿಯಾದ ಅಪ್ಪೇ ಗೌಡರನ್ನು ಆಕೆಯ ಮನೆಯಲ್ಲಿ ತಂದು ಮಲಗಿಸಿ ಆಕೆಗೆ ಧರ್ಮಸಂಕಟವನ್ನು ಒಡ್ಡುತ್ತಾರೆ. ಸರೋಜಳ ಪಾತ್ರ ಇಲ್ಲಿ ಸಹಜವಾಗಿ ಚಿತ್ರಿತವಾಗಿದೆ. ಧೈರ್ಯದ ಮೂರ್ತಿಯಾದ ಸರೋಜಾ ಇಲ್ಲಿ ಹೇಡಿಯಂತೆ ವರ್ತಿಸಿದ್ದಾಳೆ ಎಂಬ ಅನಿಸಿಕೆ ಉಂಟಾದರೂ, ಅದು ಸಕಾರಣವಾಗಿರುವುದರಿಂದ ಸರೋಜಳ ಸೋಲು ಅರ್ಥಪೂರ್ಣವೆನಿಸುವಂತೆ ಕಾದಂಬರಿಕಾರರು ಚಿತ್ರಿಸಿದ್ದಾರೆ.

ಸ್ವಾಮಿಗಳ ಜೊತೆಗೆ ಮದುವೆ-ನಿಷೇಕ ಎರಡೂ ಆಗಿದ್ದರೂ ಕೂಡ, ಊರಿನ ಜನರ ಎದುರಿನಲ್ಲಿ ಅದನ್ನು ಒಪ್ಪಿಕೊಳ್ಳಲು ಸ್ತ್ರೀಸಹಜವಾದ ಸಂಕೋಚ ಅಡ್ಡ ಬರುತ್ತದೆ, ಅಲ್ಲದೆ ಹಾಗೆ ಒಪ್ಪಿಕೊಂಡಿದ್ದೇ ಆದರೆ ಒಳಗೆ ಮಲಗಿರುವ ಅಪ್ಪೇಗೌಡರು ಸಾಯುತ್ತಾರೆ. ಮಹಾದಾನಿಯ ಸಾವಿನ ಪರಿಣಾಮದ ತೀವ್ರತೆಯನ್ನು ಪ್ರಿನ್ಸಿಪಾಲರಿಂದ ತಿಳಿದು ದಯೆಯೇ ಧರ್ಮವೆಂದು ಭಾವಿಸಿ, ಸ್ವಾಮಿಗಳ ಮಾತಿಗೆ ಬೆಲೆ ಕೊಡದೆ ಅಪ್ಪೇಗೌಡರನ್ನು ಬದುಕಿಸಲು ಮುಂದಾಗುತ್ತಾಳೆ. ಇದರಿಂದಾಗಿ ಸರೋಜಾಳಿಗೆ ಸ್ವಾಮಿಗಳೊಂದಿಗೆ ವಿರೋಧ ಉಂಟಾಗುತ್ತದೆ. ಸ್ವಾಮಿಗಳು ಇವಳು ಹೇಡಿ ಎಂದು ಒದ್ದು ದೂರ ಹೋಗುತ್ತಾರೆ.

ಆದರೆ ಸ್ವಾಮಿಗಳಿಂದಾಗಿ ತಾನು ಗರ್ಭಧರಿಸಿರುವುದನ್ನು ಮನಗೊಂಡ ಸರೋಜ ನೊಂದುಕೊಳ್ಳುತ್ತಾಳೆ. ಜನರ ದೃಷ್ಟಿಯಲ್ಲಿ ಅವಿವಾಹಿತಳೆನಿಸಿ, ಗರ್ಭಿಣಿಯಾದುದರಿಂದ ಜನಾಭಿಪ್ರಾಯಕ್ಕೆ ಎಲ್ಲರಂತೆ ಹೆದರುತ್ತಾಳೆ. ತನ್ನ ಗೌರವನ್ನು

ಉಳಿಸಿಕೊಳ್ಳುವುದಕ್ಕಾಗಿ ಗರ್ಭ ಇಳಿಸಿಕೊಳ್ಳಲು ನಿಶ್ಚಯಿಸುತ್ತಾಳೆ. ಆದರೆ ಅನಂತರ ನಡೆದ ಒಂದೊಂದು ಘಟನೆಯೂ ಅವಳನ್ನು ಆತ್ಮವಿಮರ್ಶೆಗೆ ತೊಡಗಿಸಿ ಅವಳ ಮೊದಲ ನಿಶ್ಚಯವನ್ನು ದುರ್ಬಲಗೊಳಿಸುತ್ತದೆ. ಸಾಮಾನ್ಯರಂತೆ ಆಗದೆ ಕೊನೆಗೂ ಸತ್ಯವನ್ನು ಉಳಿಸಿಕೊಂಡು ತನ್ನ ವಿಶಿಷ್ಟತೆಯನ್ನು . ಕಾಪಾಡಿಕೊಳ್ಳುತ್ತಾಳೆ. ದುರ್ಬಲವಾಗಿ ಹೇಡಿಯಾಗಿ ವರ್ತಿಸಿ ಸಾವಿರ ಜನರಲ್ಲಿ ಇವಳೂ ಒಬ್ಬಳಾಗುತ್ತಾಳೆ ಎಂದು ನಿರೀಕ್ಷಿಸಿದವರಿಗೆ ಸರೋಜಳಾ ಪಾತ್ರದ ಮುಕ್ತಾಯ ಸಂತೋಷವನ್ನುಂಟು ಮಾಡುತ್ತದೆ. ಹುಡುಗರು ಆಸ್ಪತ್ರೆಯ ನೌಕರರು, ಎಲ್ಲರ ಮುಂದೆ 'ಮದುವೆಯಾದದ್ದು ಮಾತ್ರವಲ್ಲ' ನಿಷೇಕವು ಆಗಿತ್ತು; ನಾನು ಬಸುರಿಯಾದೆ, ಇನ್ನು ಏಳು ತಿಂಗಳಿಗೆ ನನ್ನ ಹೊಟ್ಟೆಯಿಂದ ಆ ಸ್ವಾಮಿಗಳ ಮಗು ಹುಟ್ಟುತ್ತೆ[೨] ಎಂಬ ಸತ್ಯವನ್ನು ಸಮಾಜಕ್ಕೆ ಸಾರಿ ದಿಟ್ಟತನವನ್ನು ತೋರುತ್ತಾಳೆ.

ಕಾದಂಬರಿಯ ಕೇಂದ್ರ ಸ್ತ್ರೀ ಪಾತ್ರವಾದ ಸರೋಜ 'ಗ್ರಹಣ' ಕಾದಂಬರಿಯ 'ಕಥನಶಿಲ್ಪ'ಕ್ಕೆ ನೀಡಿರುವ ಕೊಡುಗೆ ಮಹತ್ತ್ವಪೂರ್ಣವಾದುದು ಸಂಪ್ರದಾಯಕ ಚೌಕಟ್ಟನ್ನು ದಾಟಿ ಆಕೆ ತೆಗೆದುಕೊಳ್ಳುವ ದಿಟ್ಟ ನಿರ್ಧಾರಗಳು ಸಮಕಾಲೀನ ಮಹಿಳಾವಾದದ ಧನಿಗೆ ಸಂವೇದನೆಯಾಗುತ್ತದೆ. ಹಾಗೂ 'ಕಥನಶಿಲ್ಪ'ವನ್ನು ಬಲಿಷ್ಠಗೊಳಿಸುತ್ತವೆ.

---

[೨] 'ಗ್ರಹಣ' ಪುಟ ೨೭೩. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು. ೧೯೭೨.

# 'ಸತ್ಯಭಾಮಾ'

ಎಸ್.ಎಲ್.ಭೈರಪ್ಪವನರ 'ದಾಟು' ಒಂದು ಬೃಹತ್ ಕಾದಂಬರಿ. ಹಲವು ನೂರು ವರ್ಷಗಳಿಂದ ನಮ್ಮ ದೇಶದಲ್ಲಿ ಬೇರು ಬಿಟ್ಟಿರುವ ಜಾತಿಯ ಪ್ರಶ್ನೆಯನ್ನು ವಸ್ತುವನ್ನಾಗಿರಿಸಿಕೊಂಡಿರುವ, ಈ ಕಾದಂಬರಿಯಲ್ಲಿ ಜಾತಿಯ, ಪ್ರಶ್ನೆಯ ಹಲವಾರು ಮುಖಗಳನ್ನು ಹಲವು ದೃಷ್ಟಿಕೋನಗಳಿಂದ ನೋಡಿ ಅದರ ಜಟಿಲತೆಯನ್ನು ಕಾದಂಬರಿಕಾರರು ಪ್ರಸ್ತುತಪಡಿಸಿರುತ್ತಾರೆ. ಈ ಹಿನ್ನೆಲೆಯಿಂದ ಸತ್ಯಭಾಮಳ ಪಾತ್ರ ಸೃಷ್ಟಿಗೊಂಡಿದೆ. ಸತ್ಯಭಾಮ ಕಾದಂಬರಿಯ ಕೇಂದ್ರ ವ್ಯಕ್ತಿ (ಪಾತ್ರ) ಈಕೆ ಸ್ಥಿರ ಬುದ್ಧಿಯವಳು, ಶಕ್ತಿವಂತೆ, ಇತಿಹಾಸವನ್ನು ಈ ದೇಶದ ಜಾತಿ ಪದ್ಧತಿಯ ಚರಿತ್ರೆಯನ್ನು ಅರ್ಥಮಾಡಿಕೊಂಡಿರುವ ಸತ್ಯಭಾಮೆಯ ಮೂಲಕ ಇಂದಿನ ಸಂದರ್ಭದಲ್ಲೂ ಆ ಭಾವನೆ ಹೇಗೆ ಕೆಲಸ ಮಾಡುತ್ತಿದೆ, ಮುಖಂಡರು ಹೇಗೆ ಇದನ್ನು ತಮ್ಮ ಸ್ವಾರ್ಥಕ್ಕಾಗಿ ತಮಗೆ ಬೇಕಾದಂತೆ ಬಳಸಿಕೊಳ್ಳುತ್ತಿದ್ದಾರೆ ಎಂಬುದನ್ನು ಕಾದಂಬರಿ ದಾಖಲಿಸುತ್ತದೆ. ಪುರಾಣ, ಸಮಾಜಶಾಸ್ತ್ರ, ಮೂಢನಂಬಿಕೆ, ಧರ್ಮ ಮುಂತಾದವುಗಳಲ್ಲಿ ಜಾತಿಯ ಬೇರು ಮತ್ತು ಜಾತಿಗಳೊಳಗಿನ ಸಂಬಂಧಗಳ ಬಿರುಕನ್ನು ಪತ್ತೆ ಹಚ್ಚುವ ಕಾರ್ಯಕ್ಕಾಗಿ ಸತ್ಯಳ ಪಾತ್ರಸೃಷ್ಟಿಯಾಗಿದೆ.

'ದಾಟು' ಕಾದಂಬರಿಯಲ್ಲಿ ಮೇಲುನೋಟಕ್ಕೆ ಸಮಸ್ಯೆ ಹತ್ತು ಕಡೆ ಹರಡಿಕೊಂಡಿರುವಂತೆ ಕಂಡುಬಂದರೂ, ಭೈರಪ್ಪನವರ ಎಲ್ಲ ಗಮನ ಸತ್ಯಭಾಮೆಯಲ್ಲಿದೆ. ಕಾದಂಬರಿಯ ಎಲ್ಲಾ ಪಾತ್ರಗಳೂ ಸನ್ನಿವೇಶಗಳೂ ಸತ್ಯಭಾಮೆಯೊಡನೆ ನೇರ ಸಂಬಂಧ ಪಡೆದುಕೊಂಡಿದೆ. ನಿಜವಾದ ಬ್ರಾಹ್ಮಣ್ಯವನ್ನೂ ಸ್ವಾವಲಂಬೀ ಶೂದ್ರತ್ವವನ್ನು ಒಮ್ಮೆಗೇ ಕೈಗೂಡಿಸಿಕೊಳ್ಳುವ ಗುರಿಯ ಕಡೆಗೆ ಸತ್ಯಭಾಮೆ ಸಾಗುತ್ತಾಳೆ.

ಕಾದಂಬರಿಯ ಮಧ್ಯಭಾಗದಿಂದ ಸತ್ಯಭಾಮಾಳ ವ್ಯಕ್ತಿತ್ವದಲ್ಲಿ ಬದಲಾವಣೆ ಕಂಡು ಬರುತ್ತದೆ. ಇದಕ್ಕೆ ಸ್ವತಃ ಕಾದಂಬರಿಕಾರರೇ ಕಾರಣವಾಗಿರುತ್ತಾರೆ. ಎಲ್ಲವನ್ನೂ ಪ್ರಶ್ನಿಸುವುದು ಸತ್ಯಳಿಗೆ ಸಹಜವಾಗಿಯೇ ಬಂದುದು. ವೇದ ಉಪನಿಷತ್ತುಗಳನ್ನು, ಮನುಧರ್ಮ ಶಾಸ್ತ್ರವನ್ನು ಅವಳು ಚಿಕ್ಕಂದಿನಿಂದಲೂ ಪ್ರಶ್ನಿಸಿದಂಥವಳು. ಸಾಂಪ್ರದಾಯಿಕ ಆಚಾರಗಳಲ್ಲಿ ಅವಳಿಗೆ ನಂಬಿಕೆಯಿಲ್ಲ. ಇಂಥ ಸತ್ಯಳು ತಿರುಮಲಾಪುರಕ್ಕೆ ಹಿಂತಿರುಗಿದಾಗ ಅವಳ ಅಪ್ಪ ಅರೆ ಹುಚ್ಚಿನಲ್ಲಿ ಮಾಡುವ ಹವನ-ಹೋಮ ಯಜ್ಞ ಮುಂತಾದುವುಗಳಿಗೆ ಮಂತ್ರ ಮುಗ್ಧಳಾದವಳಂತೆ ವಶಳಾಗಿ ಬಿಡುತ್ತಾಳೆ, ಎದುರಿನ ಅಗ್ನಿ ತನ್ನ ಕೊರಳಿಗೆ ಬಿದ್ದ ಯಜ್ಞೋಪವೀತ ಎಲ್ಲವೂ ಅವಳಿಗೆ ಪ್ರತ್ಯಕ್ಷ ಸತ್ಯಗಳಂತೆ ಕಾಣಿಸುತ್ತವೆ. ಈ ರೀತಿಯಲ್ಲಿ ಕಥೆ ಹೇಳುವ, ಓದುಗರ ಕುತೂಹಲ ತಣಿಸುವ ಭೈರಪ್ಪನವರ 'ಜನಪ್ರಿಯ ಪ್ರಜ್ಞೆ'ಯ ಉತ್ಸಾಹಕ್ಕೆ ಸತ್ಯಳು ಒಂದು ಪಾತ್ರವಾಗಿ ಬಿಡುತ್ತಾಳೆ. ಭೈರಪ್ಪನವರ ವಿಚಾರಗಳು ನಮ್ಮ ಅನುಭವಕ್ಕೆ ಬರುವುದು ಮುಖ್ಯವಾಗಿ ಸತ್ಯಳ ಪಾತ್ರದ ಮುಖಾಂತರವೇ.

ನಾವು ಓದುವ ಚರಿತ್ರೆಗೂ, ನಮ್ಮ ಸುತ್ತಮುತ್ತಲು ದಾಖಲಾಗುತ್ತಿರುವ ಚರಿತ್ರೆಗೂ ಸ್ಪಷ್ಟವಾದ ವ್ಯತ್ಯಾಸವನ್ನು ಸತ್ಯಭಾಮಳ ಪಾತ್ರ ಬೆಳವಣಿಗೆಯ ಮೂಲಕ ಕಾದಂಬರಿಕಾರರು ಮಾಡಿರುತ್ತಾರೆ. ಜಾತಿ ಎಲ್ಲಾ ಸುಳ್ಳು, ಒಬ್ಬರಿಗೊಬ್ಬರು ನಿಯತ್ತಿನಿಂದಿರೋದೆ ಧರ್ಮ ಎಂಬ ಕಟು ವಾಸ್ತವಕ್ಕೆ ಕೊನೆಯವರೆಗೆ ಸತ್ಯಳ ಪಾತ್ರ ಅಂಟಿಕೊಳ್ಳುತ್ತದೆ.

ಕಾದಂಬರಿಯ ಕೇಂದ್ರಬಿಂದುವಾದ ಸತ್ಯ ಹಿಂದಿನದು, ಇಂದಿನದು. ಎಲ್ಲವನ್ನೂ ತನ್ನ ಹರಹಿನಲ್ಲಿ ಸೇರಿಸಿಕೊಂಡು ಹರಿಯುವ ನದಿಯಂತಹ ಸಂಕೀರ್ಣಪಾತ್ರ, ಸ್ವಾಭಿಮಾನ, ಆತ್ಮಸ್ಥೈರ್ಯ, ಬಂಡಾಯ, ಪ್ರಯೋಗಶೀಲತೆ, ತನ್ನ

ಮನದಿಚ್ಛೆಯಂತೆ ಬದುಕುವ ಛಲ ಬೇರೆಯವರನ್ನು ಅರಿತು ಕೊಳ್ಳುವಂತಹ ಸಂವೇದನಾಶೀಲತೆ ಇವುಗಳ ಅಪೂರ್ವ ಮಿಶ್ರಣ ಪಾತ್ರವಾಗಿ ಕಾದಂಬರಿಯಲ್ಲಿ ರೂಪುಗೊಂಡಿರುತ್ತಾಳೆ. ಸಂಪ್ರದಾಯದ ನಿಷ್ಠುರ ನಿಯಮಗಳಲ್ಲಿನ ಸರಿತಪ್ಪುಗಳನ್ನು, ಸ್ವಾನುಭವ, ಇತಿಹಾಸ, ಪುರಾಣ, ದೈದಿಕ ಸಾಹಿತ್ಯದ ಅಧ್ಯಯನದಿಂದ ಅರಿತವಳು, ಅವಳ ವಿಚಾರಗಳು ಆಧುನಿಕವಾದರೂ, ನಡೆ, ನುಡಿ ಜೀವನಕ್ರಮ ನೇರ, ಸರಳ ಮತ್ತು ಸಾಂಪ್ರದಾಯಿಕವಾಗಿ ಚಿತ್ರಿತಗೊಂಡಿದೆ. ಮೋಹನದಾಸನ ಸೇಡಿನ ಆರ್ಭಟವನ್ನು ಇತಿಹಾಸದ ತಿರುವು–ಮುರುವುಗಳ ಮೂಲಕ ಪರಿಶೀಲಿಸಿ ಅದರ ಕಾರಣವನ್ನು ವಿಶ್ಲೇಷಿಸುವಂತೆಯೇ, ತನ್ನ ತಂದೆಯ ಅಣ್ಣನ, ಶ್ರೀನಿವಾಸನ ಮತ್ತು ಮೀರಾಳ ವರ್ತನೆಗಳ ಹಿಂದೆ ಇರುವ ಸಾವಿರಾರು ತಲೆಮಾರುಗಳ ಪ್ರಭಾವವನ್ನು ಕಾಣಬಲ್ಲ ಪಾತ್ರವನ್ನಾಗಿ ಭೈರಪ್ಪನವರು ಚಿತ್ರಿಸಿದ್ದಾರೆ.

ಹೀಗಳೆಯಲ್ಪಟ್ಟ ಸ್ತ್ರೀಯನ್ನು ಅನನ್ಯ ಚೈತನ್ಯದ ಬುಗ್ಗೆಯಾಗಿ, ವೈಚಾರಿಕ ಕೇಂದ್ರವಾಗಿ ಚಿತ್ರಿಸಿರುವುದು ಎಸ್.ಎಲ್.ಭೈರಪ್ಪನವರ ದಾಟುವಿನ ಸತ್ಯಭಾಮಾ ಪಾತ್ರದ ವೈಶಿಷ್ಟ್ಯ. ನಾಶ ಮತ್ತು ಕಟ್ಟುವಿಕೆ ಚಲನಶೀಲ ಸಂಸ್ಕೃತಿಯೊಂದು ಗರ್ಭೀಕರಿಸಿಕೊಂಡ ಅಂಶಗಳು ಎಂದು ಲೇಖಕರು ಸತ್ಯಳ ಪಾತ್ರದ ಮೂಲಕ ರುಜುವಾತು ಪಡಿಸುತ್ತಾರೆ. ಶ್ರೀನಿವಾಸನ ಪ್ರೀತಿ ಕೈಗೂಡದಿದ್ದರೂ ಸತ್ಯ ತಾನು ಸೋತಳೆಂದು ಭಾವಿಸಿಲ್ಲ.

ಸಮಾಜದ ವಿವಿಧ ಜಾತಿಯವರು ಬ್ರಾಹ್ಮಣನಾಗುವ ಅಥವಾ ಮುಟ್ಟಿಸಿಕೊಳ್ಳುವಿಕೆಗಾಗಿ ಹಾತೊರೆಯುವುದು, ಅದಕ್ಕಾಗಿ ತನ್ನ ಅಣ್ಣ ವೆಂಕಟೇಶ ಪಾವಿತ್ರ್ಯದಾತನಂತೆ ವರ್ತಿಸುವುದು ಮುಂತಾದ ಅಸಂಬದ್ಧಗಳ ಬಗ್ಗೆ ಕೆಂಡ ಕಾರುವ, ಆಧುನಿಕ ಮೌಲ್ಯವಾದ ಸಮಾನತೆಗಾಗಿ ತುಡಿಯುವ ಸತ್ಯಳ ಚಟುವಟಿಕೆಯು ಕಾದಂಬರಿಯ ಚಾಲನೆಗೆ ಕಾರಣವಾಗಿದೆ. ವೆಂಕಟರಮಣಯ್ಯನವರು ಮಗಳಿಗೆ ಆಸ್ತಿ ಮತ್ತು ಹಣದ ಹಂಚಿಕೆ ನೀಡಿರುವುದರಿಂದ ಸ್ವಾವಲಂಬಿ ಬದುಕನ್ನು ನಡೆಸಿದ ಸತ್ಯ

ಇತಿಹಾಸದ ತಪ್ಪುಗಳನ್ನು ಸರಿ ಮಾಡಲು ಪ್ರಯತ್ನಿಸುತ್ತಾಳೆ. ಸುಧಾರಣೆ ತನ್ನಿಂದಲೇ ಆರಂಭಿಸಬೇಕೆಂದು ನಿರ್ಧರಿಸಿ ಬೆಟ್ಟಯ್ಯನವರ ಮಗನಾದ ಮೋಹನದಾಸನನ್ನು ಮದುವೆಯಾಗಬೇಕೆಂದು ಬಯಸುತ್ತಾಳೆ. ಆದರೆ ಮೋಹನದಾಸನ ಸೇಡಿನ ನಡವಳಿಕೆ ಕಂಡು ಹೇಸುತ್ತಾಳೆ. ಸತ್ಯಳಿಗೆ ವ್ಯವಸ್ಥೆಯ ಬಗ್ಗೆ ಅಗಾಧವಾದ ಕೋಪವಿದೆ. ಯಥಾ ಸ್ಥಿತಿ ವಾದವನ್ನು ಹುರಿದುಂಬಿಸುವ ಚಲನಶೀಲತೆಯನ್ನು ನಿರಾಕರಿಸುವ ರಾಜಕೀಯ, ಧಾರ್ಮಿಕ ಶಕ್ತಿಗಳ ಬಗ್ಗೆ ಅಸಹನೀಯವಾದ ಸಿಟ್ಟಿದೆ. ಆದರೆ ಎಲ್ಲೂ ತಾಳ್ಮೆಯನ್ನು ಕಳೆದುಕೊಳ್ಳದೆ ಕಾರ್ಯಕಾರಣ ಸಂಬಂಧವನ್ನು ಹುಡುಕುತ್ತಾ ಆತ್ಮಾವಲೋಕನ ಮಾಡಿಕೊಳ್ಳುತ್ತಾಳೆ.

ಮೇಲ್ಜಾತಿಯವರು ಕೆಳಜಾತಿಯವರ ಜೊತೆ ಮನಃ ಪೂರ್ವಕವಾಗಿ ಬೆರೆತಾಗ ಮಾತ್ರ ಈ ಜಾತಿ ಪದ್ಧತಿಯು ನಿರ್ಮೂಲವಾಗುತ್ತೆ ಎಂಬ ದೃಷ್ಟಿ ಸತ್ಯಾಳದ್ದು. ಇಂತಹುದು ಮದುವೆಯಿಂದ ಮಾತ್ರ ಸಾಧ್ಯವೆಂದು ಭಾವಿಸುತ್ತಾಳೆ. ಹೀಗಾಗಿಯೇ ಏನೋ ಹರಿಜನರ ಯುವತಿ ಮೀರಾಳನ್ನು ತಾನು ಪ್ರೇಮಿಸಿದ್ದ ಶ್ರೀನಿವಾಸನೊಂದಿಗೆ ಮದುವೆಯಾಗುವಂತೆ ಮನವೊಲಿಸುವ ಪ್ರಯತ್ನವನ್ನು ಮಾಡುತ್ತಾಳೆ. ಇಲ್ಲಿ ಸತ್ಯಳಿಗೆ ಶ್ರೀನಿವಾಸನ ಮೇಲಿನ ಪ್ರೀತಿಗಿಂತ ತನ್ನ ಗುರಿ ಮುಖ್ಯ ಮನಃ ಸ್ಥೈರ್ಯದ ಮೇಲೆ ವಿಶ್ವಾಸವಿದ್ದ ಸತ್ಯಾ, ಎದುರಾಗುವ ಘಟನೆಗಳಿಗೆ ನಿರ್ಲಿಪ್ತವಾಗಿ ತನ್ನನ್ನೊಡ್ಡಿಕೊಳ್ಳುತ್ತಾ ಹೋಗುತ್ತಾಳೆ.

ಒಟ್ಟಿನಲ್ಲಿ ಸತ್ಯಭಾಮ ಸಮಾನತೆಗಾಗಿ ತಹತಹಿಸುವ, ಉದಾರ ವ್ಯಕ್ತಿತ್ವದ ಮಾನವೀಯತೆಯ ಸೆಳೆತವಿರುವ ವಿಶಿಷ್ಟ ಪಾತ್ರ, ಬದುಕಿಗೂ ವಾಸ್ತವಕ್ಕೂ ಇರುವ ಅಂತರದತ್ತ ಕಾದಂಬರಿಯುದ್ದಕ್ಕೂ ಸೀಳುನೋಟ ಬೀರಿದ ಪಾತ್ರವಾಗಿ ಓದುಗರ ಮನಸ್ಸಿನಲ್ಲಿ ಗಟ್ಟಿಯಾಗಿ ಉಳಿಯುತ್ತದೆ. ಸತ್ಯಭಾಮಾಳ ದಾಟುವಿಕೆ ಗುರಿ ಮುಟ್ಟದಿರಬಹುದು, ಆದರೆ ಜಡ್ಡುಗಟ್ಟಿದ ವ್ಯವಸ್ಥೆಯಿಂದ ನಿರಂತರ ದಾಟುವ

ಯತ್ನವನ್ನು ಈ ಪಾತ್ರ ಕಾದಂಬರಿಯಲ್ಲಿ ಮಾಡಿ ತೋರಿಸಿ ಜನಮನವನ್ನು ಆಕ್ರಮಿಸಿಕೊಂಡಿತು ಹಾಗೂ ಒಟ್ಟು ಕಾದಂಬರಿಯ 'ಕಥನಶಿಲ್ಪ'ಕ್ಕೆ ತನ್ನದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿದೆ.

***********

# 'ದ್ರೌಪದಿ'

'ದ್ರೌಪದಿ', ಎಸ್.ಎಲ್.ಭೈರಪ್ಪನವರ 'ಪರ್ವ' ಕಾದಂಬರಿಯ ಪ್ರಧಾನ ಸ್ತ್ರೀ ಪಾತ್ರ, ದ್ರುಪದ ಮಹಾರಾಜನ ಮಗಳಾದ ಈಕೆ ಅತ್ಯಂತ ಸುಂದರಿ. ತಂದೆ ಏರ್ಪಡಿಸಿರುವ ಸ್ವಯಂವರವನ್ನು ಗೆದ್ದ ಅರ್ಜುನನ್ನು ವರಿಸಿಕೊಂಡು ಬಂದಿರುವ ಈಕೆ, ಅತ್ತೆ ಕುಂತಿಯ ಅಪ್ಪಣೆಯ ಮೇರೆಗೆ ಪಾಂಡವರೈವರ ಮಡದಿಯಾಗಿ ಪಂಚವಲ್ಲಭೆ ಎನಿಸಿಕೊಳ್ಳುತ್ತಾಳೆ. ವ್ರತ ನಿರುತಳಾಗಿ ಸಂಸಾರವನ್ನು ನಡೆಸುತ್ತಾಳೆ. ಐವರು ಪುತ್ರರನ್ನು ಪಡೆಯುತ್ತಾಳೆ. ವಂಶ ಮರ್ಯಾದೆಗಾಗಿ ಪಾಂಡವೈರವರ ಒಗ್ಗಟ್ಟಿಗಾಗಿ ತನ್ನ ಜೀವನವನ್ನೇ ಸವೆಸಿಕೊಂಡವಳು.

'ಪರ್ವ' ಕಾದಂಬರಿಯಲ್ಲಿ ದ್ರೌಪದಿ ಪಾತ್ರ ಹಿನ್ನೋಟದ ಮೂಲಕ ಪರಿಚಯವಾಗುತ್ತಾ ಹೋಗುತ್ತದೆ. ಈಕೆಯ ಮನಸ್ಸಿನ ಆಲೋಚನೆಗಳು ಈಕೆಯ ಅಂತರಂಗಗಳಿಗೆ ಹಿಡಿದ ಕನ್ನಡಿ ಎಂಬಂತೆ ಕಾದಂಬರಿಕಾರರು ದ್ರೌಪದಿಯ ಅಂತರಂಗದ ವ್ಯಾಪಾರಗಳನ್ನು ಅದ್ಭುತವಾಗಿ ಚಿತ್ತಿಸಿದ್ದಾರೆ.

ಕಾದಂಬರಿಯಲ್ಲಿ ಮೊದಲಿಗೆ ತನ್ನನ್ನು ವರಿಸಿಕೊಂಡು ಬಂದಿರುವ ಅರ್ಜುನನ ಬಗ್ಗೆಯೇ ದ್ರೌಪದಿ ವಿಶೇಷವಾದ ಆಸಕ್ತಿಯನ್ನು ತಾಳಿರುತ್ತಾಳೆ. ಉಳಿದ ಪಾಂಡವರೊಡನೆ ತಾನು ಸೇರಿದಾಗಲೂ ಅವರಲ್ಲಿ ಅರ್ಜುನನ ರೂಪವನ್ನು ಕಾಣುತ್ತಿದ್ದಳು. ದ್ರೌಪದಿಗೆ ಅರ್ಜುನನೆಂದರೆ ಹೆಚ್ಚು ಮೋಹ, ಆದರೆ ಆತ ಸುಭದ್ರೆಯನ್ನು ಮದುವೆಯಾಗಿ ಕರೆತಂದಾಗ "ಆರ್ಯ ಧರ್ಮದ ಜಾಯಮಾನವಂತೆ ತನಗೆ ಬೇಕೆನಿಸಿದಾಗ ಅರ್ಜುನ ಎಷ್ಟು ಸುಲಭವಾಗಿ ವಿಧಿಯನ್ನೂ ಮುರಿದು ತನಗೇ ಪ್ರತ್ಯೇಕಳಾದ ಒಬ್ಬಳನ್ನು ಮದುವೆಯಾಗಿ ಬಿಟ್ಟ, ಇಲ್ಲಿ ನಾನಿದ್ದೀನಿ ಧರ್ಮದ ಪಟ್ಟಮಹಿಷಿಯಾಗಿ ಅವನ ರಾಜ್ಯದ ಪ್ರತಿರೂಪವಾಗಿ ಅವನ ಜೂಜಿನ ಪಣವಾಗಿ

ಅವಮಾನಿತಳಾಗಿ ಕಾಡುಜನರಂತೆ ಬರೀ ಬೇಟೆಯ ಮಾಂಸ ಗೆಡ್ಡೆಗೆಣಸು ತಿಂದು, ಕಂಡವರ ಮನೆಯ ಊಳಿಗ ಮಾಡಿ, ಉಳಿದ ಯಾವ ಆಯ್ಕೆ ಹೆಂಗಸಿಗೂ ಇಲ್ಲದ ಭ್ಯಾಗವಂತೆ. ಐದು ಪಟ್ಟು ಸುಖವಂತೆ, ಯಾಕಾದರೂ ಮಾಡುತ್ತಾರೆಯೋ ಇಂಥ ವೀರ ಪಂದ್ಯದ ಮದುವೆಯನ್ನು ಶಕ್ತಿಯಿದ್ದವನು ಗೆದ್ದು, ಗೆದ್ದ ಮೇಲೆ ತನಗೆ ಬೇಕಾದಂತೆ ಅನುಭವಿಸುವ, ಹಂಚಿಕೊಳ್ಳುವ, ಬೇಡವಾದಂತೆ ಬಿಸಾಡುವ, ಯಾರು ಆರಂಭಿಸಿದರೋ ಈ ಕ್ಷತ್ರಿಯ ಪದ್ಧತಿಯನ್ನು"[1] ಎಂದು ಪ್ರತಿಭಟನಾತ್ಮಕ ಸ್ತ್ರೀಯಾಗಿ ಚಿತ್ರಿತಗೊಳ್ಳುತ್ತಾಳೆ. ನಂತರ ರಾಜಸಭೆಯಲ್ಲಿ ದ್ರೌಪದಿಯ ಅಪಮಾನವಾದಾಗ ಅವನು ನಡೆದುಕೊಂಡ ರೀತಿಯಿಂದಾಗಿ, ನಿಧಾನವಾಗಿ ಭೀಮನತ್ತ ಸರಿದು ಅಲ್ಲಿ ಸ್ಥಿರವಾಗುತ್ತದೆ ಅವಳ ಮನಸ್ಸು. ಭೀಮನೇ ಈಕೆಯ ಅಂತರಂಗದ ಒಡೆಯನೆನ್ನುವುದು ಅವಳ ಈ ಮಾತುಗಳಿಂದ ತಿಳಿದು ಬರುವುದು – ಭೀಮನ ಮನಸ್ಸಿನಲ್ಲಿ ಬೇರೊಬ್ಬ ಹೆಂಗಸಿನ ಆಲೋಚನೆ ಎಂದಾದರೂ ಬಂದಿದೆಯೇ ಇಲ್ಲವೋ ನನಗೆ ಪೂರ್ತಿ ಅಂಟಿದವನು –ನಾಲ್ಕು ವರ್ಷದ ಸರದಿ ಬಂದಾಗ ಕೂಡ ಒಂಟಿಯಾಗಿರಬೇಕಾದರೂ ಬೇರೇ ಹೆಂಗಸಿನ ಆಲೋಚನೆ ಮಾಡಲಿಲ್ಲ ರಾಜಸೂಯಯಾಗಕ್ಕೆ ಕಪ್ಪಕಾಣಿಕೆಯೊಡನೆ ಅದೆಷ್ಟೋ, ಯುವತಿಯರನ್ನು ತಂದರೂ ಒಬ್ಬರನ್ನು ಮುಟ್ಟಲಿಲ್ಲ. ಏಕಮೇವ ನಿಷ್ಠೆ ಅವನದು. ಕೃಷ್ಣನನ್ನು ಬಿಟ್ಟು ಬದುಕಲಾರ ಸ್ವಯಂವರದಲ್ಲಿ ದುರ್ಯೋಧನಾದಿಗಳು ಬಿಲ್ಲುಗುರಿ ಹಿಡಿದವನು ಅರ್ಜುನನೆಂದು ತಿಳಿದು, ದ್ರೌಪದಿಯ ಕಡೆ ನುಗ್ಗಿದಾಗ ದ್ರೌಪದಿಯನ್ನು ರಕ್ಷಿಸಿದವನು ಭೀಮ. ಐದು ಜನ ಗಂಡಂದಿರನ್ನು ಪಕ್ಷಪಾತವಿರದೇ ನಿಭಾಯಿಸುವ ಅಗ್ನಿದಿವ್ಯವನ್ನು ಹಾಯುವ ದ್ರೌಪದಿಯ ಅಂತರಂಗ ಭೀಮನಿಗೆ ಮೀಸಲಾದದ್ದು ಎಷ್ಟೋ. ವರ್ಷಗಳ ನಂತರ ಎಂಥವನನ್ನು ಪ್ರೀತಿಸಬೇಕು ಎನ್ನುವುದು ಪ್ರೌಢಳಾಗುವ ತನಕ ಹೆಂಗಸಿಗೆ ತಿಳಿಯುವುದಿಲ್ಲ"[2] ಎಂದುಕೊಳ್ಳುತ್ತಾಳೆ. ಇಲ್ಲಿ ಪುರಾಣ ಪ್ರಸಿದ್ಧ ಪಾತ್ರವಾದ ದ್ರೌಪದಿಯ ಪಾತ್ರವನ್ನು ಸಾಮಾನ್ಯವಾದ ಹೆಣ್ಣಿನ ಪಾತ್ರದ ಮಟ್ಟಕ್ಕೆ ತಂದು,

---

[1] 'ಪರ್ವ' ಪುಟ ೧೩೦–೧೪೦. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೧೯೭೯.

[2] 'ಪರ್ವ' ಪುಟ ೧೬೨. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೧೯೭೯.

ಒಂದು ಹೆಣ್ಣಿನ ಜೀವನದ ನಾನಾ ಮಜಲುಗಳಲ್ಲಿ ಅರಿವಾಗುವ ಸತ್ಯದ ಒಂದೊಂದೇ ತುಣುಕನ್ನು ಆಶ್ಚರ್ಯಕರ ಎನ್ನುವಂತೆ ಲೇಖಕರು ತೆರೆದಡುವ ಪ್ರಯತ್ನ ಮಾಡಿರುತ್ತಾರೆ.

ಅರಣ್ಯದಲ್ಲಿ ಕಿಮ್ಮೀರನ ವಧೆಯನ್ನು ಕಣ್ಣಾರೆ ಕಂಡ ನಂತರ ದ್ರೌಪದಿಯ ಎದೆಯೊಳಗಿನ ಸಮಸ್ತ ಭಾವವೂ ಭೀಮನೆಡೆಗೆ ಹರಿಯತೊಡಗುತ್ತದೆ. ಅರ್ಜುನನಿಂದ ತೆರೆವಾಗಿದ್ದ ಅವಳೆದೆಯಲ್ಲಿ ಭೀಮ ಪ್ರತಿಷ್ಠತಗೊಳ್ಳುತ್ತಾನೆ. ಇಷ್ಟು ದಿನ 'ಕರ್ತವ್ಯ ಬದ್ಧ ಪತ್ನಿಯಂತೆ' ನಡೆದುಕೊಳ್ಳುತ್ತಿದ್ದವಳಲ್ಲಿ, ಅಂದು ಅಂತಃಕರಣ ತುಂಬಿ ಬಂದ ಪ್ರೇಯಸಿಯ ಭಾವ ಉಕ್ಕಿ ಹರಿಯುತ್ತದೆ. ಭೀಮನೆಡೆಗೆ ದ್ರೌಪದಿಯ ಮನಸ್ಸಿನ ಈ ಬದಲಾವಣೆ ಕಾದಂಬರಿಯಲ್ಲಿ ಬಹು ಮಾರ್ಮಿಕವಾಗಿ ಸಹಜವಾಗಿ ಮೂಡಿ ಬಂದಿರುವುದು. ದ್ರೌಪದಿಗೆ ಭೀಮನದು ತನ್ನದು ಒಂದೇ ಜೀವ ಎಂಬ ಭಾವನೆ. ಅರಣ್ಯವಾಸದಲ್ಲಿ ಕಟ್ಟುನಿಟ್ಟಿನ ಬ್ರಹ್ಮಚರ್ಯ ಪಾಲಿಸಬೇಕಾಗಿದ್ದ ದ್ರೌಪದಿ ಅರಣ್ಯದಲ್ಲಿ ಭೀಮನ ಸೇವೆಯನ್ನು ವಿಶೇಷವಾಗಿ ಮಾಡುತ್ತಾಳೆ. ದೈಹಿಕ ಬಯಕೆಗಳೆಲ್ಲವನ್ನು, ಕೇವಲ ಸೇವೆಯಲ್ಲಿ ತಣ್ಣಿಸಿಕೊಳ್ಳುವ ದ್ರೌಪದಿಯ ಈ ನಡೆ ಅಪೂರ್ವ. ಘಟೋತ್ಕಚನ ವಧೆಯಿಂದಾದ ಭೀಮನ ದುಃಖ ತಪ್ತ, ರೋಷಾವಿಷ್ಟವಾದ ಮನಸ್ಸನ್ನು ನಿಯಂತ್ರಿಸುವ ಶಕ್ತಿಯಾಗಿ ಇಲ್ಲಿ ದ್ರೌಪದಿ ಪಾತ್ರ ಮೂಡಿಬಂದಿದೆ. "ದೊಡ್ಡ ಕರುವಿನಂತೆ ಹಿಂಬಾಲಿಸಿದ ಅವನ ತಲೆಯನ್ನು ತನ್ನ ತೊಡೆಯ ಮೇಲಿಟ್ಟು ಮಲಗಿಸಿಕೊಂಡಿದ್ದಳು. . . . ಕಲಿಭೀಮ ಬಿಕ್ಕಿ ಬಿಕ್ಕಿ ಅಳತೊಡಗಿದ. ದ್ರೌಪದಿ ಬಾಗಿ ತನ್ನ ಎದೆಯಿಂದ ಆತನ ತಲೆಯನ್ನು ಮುಚ್ಚಿಕೊಂಡಳು. . . ."[೨] ದ್ರೌಪದಿ ಅಂತಸತ್ವದಿಂದ ಕಲಿಭೀಮನಿಗೆ ಹೀಗೆ ಸಾಂತ್ವನ ನೀಡುವವಳಾಗಿ ಕಾಣಿಸಿಕೊಳ್ಳುತ್ತಾಳೆ.

'ಪರ್ವ'ದಲ್ಲಿ "ಕುಂತಿ ಮತ್ತು ದ್ರೌಪದಿ ಬೊಗಸೆ ಬೊಗಸೆಯಲ್ಲಿ ಒಂದೇ ಸಮ ತುಂಬಿ ತುಂಬಿ ನೀಡಿದರೂ, ಒಂದು ಕ್ಷಣ ಒಂದಾಗಿ ಮತ್ತೆ ಮತ್ತೆ ತುಂಬಿಕೊಳ್ಳುವ

---

[೨] 'ಪರ್ವ' ಪುಟ ೧೭೩. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೧೯೭೯.

ಜೀವನ ಪ್ರೀತಿಯ ಪಾತ್ರಗಳನ್ನುಳ್ಳ ಜೀವನದಿಗಳಂತೆ”[೪] ಎಂದೆಂಬ ಅಭಿಪ್ರಾಯ ಪಡುವ ಎಲ್.ವಿ.ಶಾಂತಕುಮಾರಿ ಅವರು, ದ್ರೌಪದಿಯು ಅಕ್ಷಯ ಪಾತ್ರೆ, ಅವಳ ಅಂತರಂಗದ ಅಕ್ಷಯಪಾತ್ರ ಬರಿದಾಗಿದ್ದ ಅಕ್ಷಯ ಪಾತ್ರದ ಹೊರ ಪ್ರತೀಕ ಎಂದಿರುವುದು ಕೂಡ ದ್ರೌಪದಿ ಪಾತ್ರ ಸೃಷ್ಟಿಯ ಲೌಕಿಕತೆಯನ್ನು ಎತ್ತಿಹಿಡಿಯುತ್ತದೆ.

ದ್ರೌಪದಿ ತನ್ನ ಐವರು ಮಕ್ಕಳ ಶವಗಳನ್ನು ಮುಂದಿರಿಸಿಕೊಂಡು ರೋದಿಸುತ್ತಿರುವಾಗ ಕೃಷ್ಣ ಬಂದು ಆಕೆಯನ್ನು ಸಾಂತ್ವನಗೊಳಿಸುವ ಸಂದರ್ಭದಲ್ಲಿ ಆಕೆ ಹೇಳುವ “ನನ್ನ ಐವರು ಮಕ್ಕಳಲ್ಲಿ ಯಾರ ತಂದೆ ಯಾರೆಂದು ಖಚಿತವಿಲ್ಲದ್ದರಿಂದ ಯಾರು ಈ ಮಕ್ಕಳಿಗಾಗಿ ಶೋಕಿಸುತ್ತಿಲ್ಲ ನಿಷ್ಕ್ರಿಯರಾಗಿದ್ದಾರೆ. ಅವರ ಉತ್ತರಕ್ರಿಯೆಯನ್ನು ಎಲ್ಲರಿಗೂ ತಾಯಿಯಾದ ನಾನೇ ಮಾಡುತ್ತೇನೆ”[೫] ಎಂಬ ಈ ಮಾತುಗಳು ಬೇರೇ ಯಾವ ಲೇಖಕನೂ ದ್ರೌಪದಿಯ ರೋದನಕ್ಕೆ ಈ ಕಾರಣವನ್ನು ಕೊಡುವಷ್ಟು ಆಕೆಯ ಆಳಕ್ಕೆ ಹೋಗಲಾರರು ಎಂದೆನಿಸುತ್ತದೆ. ರಾತ್ರಿ ಇಡೀ ಮಕ್ಕಳ ಶವಗಳ ಜೊತೆ ಒಂಟಿಯಾಗಿದ್ದ ದ್ರೌಪದಿಗೆ ಭ್ರಮನಿರಸನವಾಗುತ್ತದೆ. ಹೀನ ಅಶ್ವತ್ಥಾಮ ನನಗೆ ಪುತ್ರ ಶೋಕವನ್ನು ಕೊಟ್ಟು, ಸತ್ಯವನ್ನು ತೋರಿಸಿದ. ಮಕ್ಕಳಿಗೆ ಅಗ್ನಿ ಸಂಸ್ಕಾರ ಮಾಡಬೇಕಾದವಳು ನಾನೇ ಎಂದೆಂದುಕೊಳ್ಳುವ ದ್ರೌಪದಿ ಐದೈದು ಗಂಡಂದಿರಿಗೂ ಬೊಗಸೆ ಬೊಗಸೆ ಮೊಗೆ ಮೊಗೆದು ಕಾಮ –ಪ್ರೇಮ– ರಕ್ಷಿತ ಭಾವಗಳನ್ನು ಕೊಟ್ಟು ಪುತ್ರ ಶೋಕದಿಂದ ತನ್ನ ಅಕ್ಷಯ ಪಾತ್ರ ಹೃದಯವನ್ನು ಬರಿದು ಮಾಡಿಕೊಂಡು ಶೂನ್ಯಳಾಗಿ ನಿಂತಿರುವಂತೆ ಚಿತ್ರಿತಗೊಂಡಿದ್ದಾಳೆ. ಇದೇ ಸ್ತ್ರೀಯ ಶಾಶ್ವತ ರೂಪವೇನೋ ಎಂಬಂತೆ ಕಂಡು ಬಂದರೂ, ಎಂತಹ ದು:ಖದ ಸಂದರ್ಭದಲ್ಲಿಯೂ ನಿರ್ಧಾರ ಕೈಗೊಳ್ಳುವ ಮನೋಬಲಕ್ಕೆ ಕುಂದಿಲ್ಲದ ಪಾತ್ರವಾಗಿ ದ್ರೌಪದಿ 'ಪರ್ವ'ದಲ್ಲಿ ಕಾಣಿಸಿ ಕೊಳ್ಳುತ್ತಾಳೆ.

---

[೪] 'ಯುಗಸಾಕ್ಷಿ' ಪುಟ ೨೩೮. ಎಲ್.ವಿ.ಶಾಂತಕುಮಾರಿ. ಸಾಹಿತ್ಯ ಭಂಡಾರ. ಬೆಂಗಳೂರು ೨೦೦೯.
[೫] 'ಪರ್ವ' ಪುಟ ೩೩೮. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೧೯೭೯.

ಈಕೆ ಕಾದಂಬರಿಯಲ್ಲಿ ನಿರ್ದಿಷ್ಟ ಯುಗದ ಯುಗಸತ್ಯ ಮತ್ತು ಯುಗಪ್ರಜ್ಞೆಗಳನ್ನು ಮಾತ್ರ ಪ್ರತಿಪಾದಿಸದೆ ಎಲ್ಲ ಯುಗದ ಸ್ತ್ರೀಸತ್ವ ಮತ್ತು ಸ್ತ್ರೀಪ್ರಜ್ಞೆಯ ಪ್ರತೀಕವಾಗಿಯೂ ಮೂಡಿ ಬಂದಿರುತ್ತಾಳೆ.

ಕಾದಂಬರಿಯಲ್ಲಿ ಇತರ ಸ್ತ್ರೀ ಪಾತ್ರಗಳು ಇದ್ದರೂ 'ಪರ್ವ'ದ ಕೇಂದ್ರಬಿಂದು ಪಾತ್ರವಾಗಿ 'ದ್ರೌಪದಿ'ಯ ಪಾತ್ರವು ನಿರೂಪಣಗೊಂಡಿದೆ.

ಕಾದಂಬರಿಯ ಏಳು ಬೀಳುಗಳಿಗೆಲ್ಲಾ, ಸ್ಪಂದಿಸುವ, ಪ್ರತಿಕ್ರಿಯಿಸುವ 'ದ್ರೌಪದಿ' 'ಪರ್ವ'ದ 'ಕಥಾಶಿಲ್ಪದ' ಸೌಂದರ್ಯ ಪ್ರಜ್ವಲಿಸಲು ಕಾರಣಳಾಗುತ್ತಾಳೆ. ಸ್ವತಂತ್ರ 'ಶಿಲ್ಪ'ದಂತೆಯೂ ಕಂಗೊಳಿಸುತ್ತಾಳೆ. ಈ ಕಲೆಗಾರಿಕೆಯ ಸಾಧನೆಯೇ ಎಸ್.ಎಲ್.ಭೈರಪ್ಪವನರ ಜನಪ್ರಿಯತೆಯ ಬಂಡವಾಳವಾಗಿದೆ.

***************

# 'ಅಮೃತಾ'

ಎಸ್.ಎಲ್.ಭೈರಪ್ಪನವರ 'ಅಂಚು' ಕಾದಂಬರಿಯ ಕೇಂದ್ರ ಪಾತ್ರ ಅಮೃತಾ. ಸೂಕ್ಷ್ಮ ಸಂವೇದನೆಯ ಈಕೆ ಸಾಹಿತ್ಯದ ಉಪನ್ಯಾಸಕಿ. ಗಂಡನಿಂದ ಬೇರೆಯಾಗಿ ಇಬ್ಬರು ಮಕ್ಕಳೊಂದಿಗೆ ಬದುಕುತ್ತಿರುವ ಇವಳು ಆಗಾಗ್ಗೆ ಮಾನಸಿಕ ಒತ್ತಡಕ್ಕೊಳಗಾಗುತ್ತಿರುತ್ತಾಳೆ. ತಾನು ವಂಚನೆಗೊಳಗಾಗಿದ್ದೇನೆ ಎಂಬ ಅಧಮ್ಯ ಭಾವನೆಯಿಂದಾಗಿ ಅಮೃತಾಳಿಗೆ ಬದುಕಿಗಿಂತ ಸಾವೇ ಆಕರ್ಷಕವಾಗಿ ಕಾಣುತ್ತದೆ. ಆಗ ಆರ್ಕಿಟೆಕ್ಟ್ ಸೋಮಶೇಖರ ಅಮೃತಾಳ ಬದುಕಿಗೆ, ಬಯಕೆಗೆ ಆಸರೆಯಾಗುತ್ತಾನೆ. ಆದರೆ ಅಮೃತ ಸೋಮಶೇಖರನನ್ನು ಸಹಜವಾಗಿ ಸ್ವೀಕರಿಸಲಾರಳು. ಆತನ ಪ್ರೀತಿಯನ್ನು, ವರ್ತನೆಯನ್ನು ಪ್ರತಿ ಕ್ಷಣದಲ್ಲೂ ಚುಚ್ಚುತ್ತಾ, ಪರೀಕ್ಷಿಸುತ್ತಾ, ಹಿಂಸಿಸುತ್ತಾ ಆ ಮೂಲಕ ಆತನ ವ್ಯಕ್ತಿತ್ವವನ್ನೇ ಅಲುಗಾಡಿಸುತ್ತಾಳೆ.

ಮಾನಸಿಕ ಅಸ್ವಸ್ಥತೆಯನ್ನು ವಸ್ತುವನ್ನಾಗುಳ್ಳ ಈ ಕಾದಂಬರಿಯಲ್ಲಿ ನಾಯಕಿ ಅಮೃತಾಳ ಪಾತ್ರವು ವಿಭಜಿತ ವ್ಯಕ್ತಿತ್ವದ ಸ್ವರೂಪದಲ್ಲಿ ಚಿತ್ರಿತಗೊಂಡಿದೆ. ಹಗಲು-ರಾತ್ರಿಗಳಂತೆ ಈಕೆಯ ಮನಸ್ಸು 'ಸಹಜ' ಹಾಗೂ 'ಶೂನ್ಯ' ಭಾವನೆಗಳಲ್ಲಿ ಒಂದರಿಂದ ಮತ್ತೊಂದಕ್ಕೆ ಪದೇ ಪದೇ ಪಲ್ಲಟಗೊಳ್ಳುತ್ತಿರುತ್ತದೆ. ಈಕೆ ಸಹಜ ಸ್ಥಿತಿಯಲ್ಲಿರುವಾಗ ಸುಸಂಸ್ಕೃತ ಸ್ತ್ರೀಯಾಗಿಯೂ, ಉತ್ತಮ ಅಧ್ಯಾಪಕಿಯಾಗಿಯು ಎಲ್ಲರ ಪ್ರೀತಿ-ಗೌರವಗಳಿಗೆ ಪಾತ್ರವಾಗುತ್ತಾಳೆ. ಸೋಮಶೇಖರನ ಪರಿಚಯವಾದ ನಂತರ ಅವನನ್ನು ಗಾಢವಾಗಿ ಪ್ರೀತಿಸುತ್ತಾಳೆ. ಹೀಗಿದ್ದು ಅವಳನ್ನು ಶೂನ್ಯ ಭಾವನೆಯಾವರಿಸಿದಾಗ, ಸಂಪೂರ್ಣ ಬೇರೆಯೇ ಆದ ವ್ಯಕ್ತಿತ್ವವನ್ನು ತಾಳಿ ಸೋಮಶೇಖರನನ್ನು ಮಾತಿನಿಂದ ಕೃತಿಯಿಂದ ಹಿಂಸಿಸುತ್ತಾಳೆ. ಶೂನ್ಯ ಭಾವನೆಯಿಂದ ಮುಕ್ತಾಳಾದಾಕ್ಷಣ ತನ್ನ ನಡತೆಗೆ ಪಶ್ಚಾತ್ತಾಪ ಪಟ್ಟು ಸೋಮಶೇಖರನ ಕ್ಷಮೆ

ಬೇಡುತ್ತಾಳೆ. ಈ ವಿಧದ ವಿಭಜಿತ ವ್ಯಕ್ತಿತ್ವವನ್ನು ಕೃತಿಕಾರರು ಸಮರ್ಥವಾಗಿ ಕಾದಂಬರಿಯುದ್ದಕ್ಕೂ ಚಿತ್ರಿಸಿದ್ದಾರೆ.

ತನ್ನ 'ಅಹಂ'ಗೆ ಧಕ್ಕೆಯುಂಟಾದಾಗ ಅಮೃತ ಎಷ್ಟು ಕ್ರೂರಳಾಗುತ್ತಾಳೆಂದರೆ ತನ್ನ ಚಿಕ್ಕಮ್ಮ ಹಾಗೂ ಇತರರನ್ನು ಕುರಿತು ತನ್ನ ಸುಪ್ತ ಮನಸ್ಸಿನಲ್ಲಿ ಅಭಿವ್ಯಕ್ತಗೊಳ್ಳಲು ಅವಕಾಶವಿಲ್ಲದೆ ಅದುಮಿಟ್ಟಿದ್ದ ಹಿಂಸಾಭಾವನೆಗಳಿಗೆ ಸೋಮಶೇಖರನನ್ನು ಗುರಿಯಾಗಿಸುತ್ತಾಳೆ. ಆದರೆ ಸಹಜ ಸ್ಥಿತಿಗೆ ಮರಳಿದ ನಂತರ ತನ್ನ ಕಾರ್ಯಕ್ಕೆ ಹೇಸಿ ತನ್ನನ್ನೇ ಉಗ್ರವಾಗಿ ಶಿಕ್ಷಿಸಿಕೊಳ್ಳುತ್ತಾಳೆ.

ಮಾನಸಿಕ ಅಸ್ವಸ್ಥತೆಯ ಮನೋವೈಜ್ಞಾನಿಕ ವಿಶ್ಲೇಷಣೆಗಳಿಗನುಗುಣವಾಗಿ ರಚನೆಗೊಂಡಿರುವ ಅಮೃತಾಳನ್ನು ಕಾಡುವ ಶೂನ್ಯ ಸ್ಥಿತಿಗೆ ಮುಖ್ಯ ಕಾರಣ, ಅವಳಲ್ಲಿ ಗಾಢವಾಗಿರುವ ಧಾರ್ಮಿಕ-ನೈತಿಕ ಪ್ರಜ್ಞೆ. ಈ ವಿಷಯದ ಅರಿವನ್ನು ಕಾದಂಬರಿಯಲ್ಲಿ ಎರಡು ಸಂದರ್ಭಗಳಲ್ಲಿ ಪ್ರಧಾನವಾಗಿ ಗುರುತಿಸಬಹುದು. ಸೋಮಶೇಖರನ ಹೊಸ ಆಫೀಸ್‌ನ ಗೃಹ ಪ್ರವೇಶದ ಸಂದರ್ಭದಲ್ಲಿ –"(ಜೋಯಿಸರು) ನಾನು ತರಿಸಿಟ್ಟಿದ್ದ ಸಾಮಾನನ್ನೆಲ್ಲಾ ಪರೀಕ್ಷೆ ಮಾಡಿ 'ಎಲ್ಲಾ ಸರಿಯಾಗಿದೆ, ಶುರು ಮಾಡಿಬಿಡೋಣ, ನಿಮ್ಮ ಯಜಮಾನರನ್ನು ಕರೆಯಿರಿ' ಅಂದರು ನನಗೆ ಹೇಗೆನ್ನಿಸಬೇಕು? ಆ ಆಫೀಸಿಗೆ ನೀನು ಯಜಮಾನ, ನಾನು ಯಜಮಾನತಿ. ಆದರೆ ಹಾಗಂತ ಅವರ ಕೈಲಿ ಹೇಳಕ್ಕಾಗುತ್ತೆಯೆ? ಅವರು ಆವಾಹಿಸುವ ಅಗ್ನಿಯ ಮುಂದೆ ಹಾಗಂತ ನಾವಿಬ್ಬರು ಜೊತೇಲಿ ಕೂತು ಒಟ್ಟಿಗೆ ದರ್ವಿಯನ್ನು ಹಿಡಿದು ತುಪ್ಪ ಹಾಕುಕ್ಕೆ ಆಗುತ್ತೆಯೆ? ಹಾಗೆ ಹಾಕಿದರೆ ಅಗ್ನಿ ಅದನ್ನು ಒಪ್ಪಿಕೋತಾನೆಯೆ ಅನ್ನಿಸಿಬಿಟ್ಟಿತು . . . . ."

"ಜೋಯಿಸರು ಆವಾಹಿಸಿ ನಡುನಡುವೆ ತುಪ್ಪ ಸುರಿದು ಜ್ವಾಲೆಯನ್ನು ಏರಿಸುತ್ತಿದ್ದ ಅಗ್ನಿಯನ್ನು ನೋಡುತ್ತಾ ನೋಡುತ್ತಾ ತನ್ನ ಸ್ಥಾನದ ಪ್ರಶ್ನೆ ಕಾಡುಕ್ಕೆ

ಶುರುವಾಯಿತು. . . . ನನಗೆ ಇಲ್ಲೂ ನೆಲೆಯಿಲ್ಲ. ಅಲ್ಲಿ ನಿನ್ನ ಆಫೀಸ್‌ನಲ್ಲಿ ಆದ ಹೋಮದಲ್ಲೂ ನೆಲೆಯಿಲ್ಲ, ಗೊತ್ತಾಯಿತೆ?[೧] ಇಂತಹ ಗಾಢ ಅನಾಥ ಪ್ರಜ್ಞೆಯಿಂದ ಸಾಯಬೇಕೆನ್ನುವ ಅದಮ್ಯ ಆಸೆಯುಂಟಾಗಿ ಕಾರಿನಲ್ಲಿ ಕನ್ನಂಬಾಡಿ ಕಟ್ಟೆಗೆ ಹೋಗಿ ಆತ್ಮಹತ್ಯೆಗೆ ಪ್ರಯತ್ನಿಸುತ್ತಾಳೆ. ಆದರೆ ಕಾವಲುಗಾರನ ಕಾರಣದಿಂದ ಆತ್ಮಹತ್ಯೆ ಮಾಡಿಕೊಳ್ಳಲಾಗದೆ ಮನೆಗೆ ಹಿಂತಿರುಗುತ್ತಾಳೆ.

ಇನ್ನೊಂದು ಸಂದರ್ಭ ಅಮೃತಾ ಗರ್ಭಪಾತವಾದ ನಂತರ ಬೆಂಗಳೂರಿನಿಂದ ರೈಲಿನಲ್ಲಿ ಹಿಂದಿರುಗುವ ವೇಳೆ ತಾನೇ ಸ್ವತಃ ಭ್ರೂಣ ಹತ್ಯೆಗೆ ಒಪ್ಪಿ ನರ್ಸಿಂಗ್ ಹೋಮ್‌ಗೆ ಸೇರಿದರೂ ಕೂಡ, ಆದಾದ ನಂತರ ಹಿಂತಿರುಗಿ ಬರುವಾಗ ಪಾಪ ಪ್ರಜ್ಞೆಯ ಕಾರಣದಿಂದ ಅಮೃತಾ ನರಳುತ್ತಾಳೆ. ". . . ಮಗೂ, ಕೊಲೆಗಡಕಿ ನಾನು, ಶಿಶು ಹಂತಕಿ ನಾನು, ಜೀವ ಹಂತಕಿ, ನನ್ನನ್ನು ಕ್ಷಮಿಸುವೆಯಾ? . . . ಗಂಡನಿಗೆ ಹೆಂಡತಿ ಬೇಕು, ಮಗು ಮುಖ್ಯವಲ್ಲ, ಹೆಂಡತಿಗೆ ಮಗು ಬೇಕು, ಗಂಡ ಅದಕ್ಕೊಂದು ಸಾಧನ. ನನ್ನ ಕಂದನನ್ನು ಕೂಡಿಕೊಳ್ಳುವ ಪಯಣಕ್ಕೆ ಅಡ್ಡ ಬಂದ ಅವನನ್ನೇ ಕೊಂದು ಮುಂದೆ ಸಾಗುವಷ್ಟು ಕೋಪ ಬರುತ್ತಿದೆ. ಮಗು, ಕ್ಷಮಿಸುವೆಯಾ?[೨] ಈ ವಿಧದ ಗಾಢ ನೈತಿಕತೆ, ತೀವ್ರ ಪಾಪ ಪ್ರಜ್ಞೆ ಮತ್ತು ತನಗಾರು ಇಲ್ಲವೆಂಬ ಅನಾಥ ಪ್ರಜ್ಞೆ – ಇವುಗಳಿಂದ ಸಾವು – ಬದುಕುಗಳ ನಡುವೆ ಸದಾ ಉಯ್ಯಾಲೆಯಾಡುವ ರೋಗಿಗೆ ತನ್ನ ಮಾನಸಿಕ ಸ್ಥಿತಿಯಿಂದ ಬಿಡುಗಡೆಯಾಗಬೇಕಾದರೆ ಮುಖ್ಯವಾಗಿ ಎರಡು ನೆಲೆಗಳಲ್ಲಿ ಬದಲಾವಣೆಯಾಗಬೇಕು. ಒಂದು ತನ್ನನ್ನು ಬೇರೊಬ್ಬರು ನಿಜವಾಗಿ ಪ್ರೀತಿಸುತ್ತಾರೆ ಮತ್ತು ಅದಕ್ಕಿಂತ ಮುಖ್ಯವಾಗಿ ತಾನು ಇನ್ನೊಬ್ಬರಿಗೆ ಮುಖ್ಯ ಎನ್ನುವ ನಂಬಿಕೆ ಬೆಳೆಯುವುದು. ಎರಡನೆಯದಾಗಿ ಅಂತಹ ವ್ಯಕ್ತಿಯ ಅತಿ ಗೌರವಕ್ಕೆ

---

[೧] 'ಅಂಚು' ಪುಟ ೧೦೪. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೧೯೯೦.
[೨] 'ಅಂಚು' ಪುಟ ೧೭೦. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೧೯೯೦.

ಪಾತ್ರರಾದವರು ಆ ಗೌರವಕ್ಕೆ ಪಾತ್ರರಲ್ಲ, ಅವರಲ್ಲೂ ಮಾನವ ಸಹಜ ದೌರ್ಬಲ್ಯಗಳಿವೆ ಎಂಬ ಅರಿವು ಮೂಡುವುದು.

ಇಂತಹ ಬದಲಾವಣೆಯನ್ನು ಕಾದಂಬರಿಯ ಕೊನೆಯಲ್ಲಿ ಅಮೃತಾಳ ಪಾತ್ರದಲ್ಲಿ ನಡೆದಿದೆ. ತನ್ನ ಮೇಲಿನ ಪ್ರೀತಿಯಿಂದ ಸೋಮಶೇಖರ ಜೀವನದಲ್ಲಿ ಆಸಕ್ತಿ ಕಳೆದುಕೊಂಡಿದ್ದಾನೆ. ಅವನ ಬದುಕಿಗೆ ಪೂರಕವಾಗಿ ತಾನಿರಲೇಬೇಕು – ಎಂಬ ಅರಿವುಂಟಾದರೆ, ಇದಕ್ಕೆ ಪೂರಕವಾಗಿ ತಾನು ಅತ್ಯಂತ ಗೌರವಿಸುತ್ತಿದ್ದ ತಂದೆಯು ಮಾನವ ಸಹಜ ದೌರ್ಬಲ್ಯಕ್ಕೆ ಒಳಗಾಗಿದ್ದ ಎಂದು ಗೊತ್ತಾಗಿ ತನ್ನ ಮನಸ್ಸಿನಲ್ಲಿರುವ 'ವಿಗ್ರಹ'ದ ಭಂಜನೆಯಾಗಿ, ತಾನೇ ಇನ್ನೊಬ್ಬರ ದೃಷ್ಟಿಯಲ್ಲಿ 'ವಿಗ್ರಹ'ವಾಗುತ್ತಾಳೆ.

ನಮ್ಮ ಬದುಕು ಅರ್ಥಪೂರ್ಣವಾಗುವುದು ನಮ್ಮ ಸಾಧನ – ಸಂಪತ್ತುಗಳಿಂದಲ್ಲ 'ನಾವು ಯಾರಾದರೊಬ್ಬರಿಗೆ ಮುಖ್ಯ ನಾವಿಲ್ಲದೆ ಅವರ ಬದುಕು ಅಪೂರ್ಣ ಎಂಬ ಅರಿವು ನಮ್ಮಲ್ಲಿ ಮೂಡಿದಾಗ ಎಂದರೆ ವ್ಯಕ್ತಿ ತಾನೇ ನಿರ್ಮಿಸಿಕೊಂಡ ತನ್ನ ಕವಚದಿಂದ ಹೊರಗೆ ಬಂದು ಇನ್ನೊಬ್ಬರೊಡನೆ ಅರ್ಥಪೂರ್ಣ ಸಂಬಂಧವನ್ನು ಸ್ಥಾಪಿಸಿದಾಗ ಬದುಕಿಗೊಂದು ಹೊಸ ಅರ್ಥ, ಹೊಸ ಆಯಾಮ ಬರುತ್ತದೆ ಎಂಬುದನ್ನು ಭೈರಪ್ಪನವರ 'ಅಂಚು' ಕಾದಂಬರಿಯ ಅಮೃತಾಳ ಪಾತ್ರ ತೋರಿಸಿಕೊಟ್ಟು ಓದುಗರ ಮನಸ್ಸನ್ನು ಆಕ್ರಮಿಸಿ 'ಕಥನಶಿಲ್ಪ'ದ ಒಟ್ಟಂದಕ್ಕೆ ವಿಶಿಷ್ಟವಾದ ಕೊಡುಗೆಯನ್ನು ನೀಡುತ್ತದೆ.

*********

# 'ಕಾಂತಿ'

ಎಸ್.ಎಲ್.ಭೈರಪ್ಪನವರ 'ತಂತು' ಕಾದಂಬರಿಯ ಪ್ರಧಾನ ಸ್ತ್ರೀ ಪಾತ್ರ ಕಾಂತಿ. ಈಕೆ ಆಧುನಿಕ ಮನೋಭಾವದವಳು. ಕಥಾನಾಯಕನಾದ ರವೀಂದ್ರನ ಪತ್ನಿ ಮತ್ತು ಅನೂಪನ ತಾಯಿ, ಕನ್ನಡ ಜನ, ಭಾಷೆಯೆಂದರೆ ಇವಳಿಗೆ ಕೀಳು ಭಾವನೆ. ಗಾಂಧಿ ಎಂದರೆ ದರಿದ್ರನೆಂದು ಭಾವಿಸುವವಳು. ಹಣ ಗಳಿಸಬೇಕೆಂದು ಗಂಡನನ್ನು ತೊರೆದು ತನ್ನದೆ ಆದ ಸ್ವಂತ ಉದ್ದಿಮೆಯಲ್ಲಿ ತಂದೆಯ ಸಹಾಯದಿಂದ ಪ್ರಾರಂಭಿಸುತ್ತಾಳೆ. ಬಾಲ್ಯದ ಸ್ನೇಹಿತೆ ಶೀತಲ್ ಇವರ ಉದ್ದಿಮೆಯನ್ನು ಪಾಲುದಾರಳಾಗಿರುತ್ತಾಳೆ. ತನ್ನ ಗಂಡನ ಸ್ನೇಹಿತನಾದ ಹೊನ್ನತ್ತಿಯ ಜೊತೆ ಸ್ನೇಹ ಬೆಳೆಸಿಕೊಂಡು ಆತನೊಂದಿಗೆ ದೈಹಿಕ ಸುಖವನ್ನು ಪಡೆಯುತ್ತಾಳೆ. ತನ್ನ ಮಹತ್ವಾಕಾಂಕ್ಷೆಯ ಗುಣದಿಂದಾಗಿ ಗಂಡ-ಮಗನಿಂದ ದೂರವಾದ ಕಾಂತಿ ಕೊನೆಯಲ್ಲಿ ಸ್ನೇಹಿತೆ ಶೀತಲ್ ಮತ್ತು ಹೊನ್ನತ್ತಿ ಕೂಡ ಅವಳ ಸ್ನೇಹವನ್ನು ತಿರಸ್ಕರಿಸುತ್ತಾರೆ. ಹೀಗೆ ಒಂಟಿತನದಿಂದ ಬಳಲುವಾಗ ಡಾ.ಹರಿಶಂಕರ ಅವಳ ಬದುಕಿನಲ್ಲಿ ಭೇಟಿಯಾಗುತ್ತಾನೆ. ಆತ ಕಾಂತಿಯಿಂದ ಎಲ್ಲ ತರಹದ ಸುಖವನ್ನು ಪಡೆದು ಮೋಸಮಾಡುತ್ತಾನೆ. ಇದರಿಂದ ಆಘಾತಕ್ಕೊಳಗಾದ ಕಾಂತಿ ಧ್ಯಾನಯೋಗಕ್ಕೆ ಸೇರಿಕೊಳ್ಳುತ್ತಾಳೆ. ಧ್ಯಾನ ಗುರುವನ್ನು ಮನೆಯಲ್ಲಿಯೇ ಇರಲು ಅವಕಾಶ ಮಾಡಿಕೊಡುತ್ತಾಳೆ. ಅವರಿಗೆ ತನ್ನೆಲ್ಲ ಆಸ್ತಿಯನ್ನು ಕೊಡುವುದಾಗಿ ಹೇಳಿರುತ್ತಾಳೆ. ಈ ನಡುವೆ ಶೀತಲ್ ಮತ್ತೆ ಭೇಟಿಯಾಗಿ ಇಬ್ಬರು ಸ್ನೇಹದಿಂದಿರುತ್ತಾರೆ. ಮುಂದೆ ಕಾಂತಿ ಹೃದಯಾಘಾತದಿಂದ ಸಾಯುತ್ತಾಳೆ. ಅವಳು ಆಸ್ತಿಯನ್ನೆಲ್ಲ ಮಗ ಅನೂಪನ ಹೆಸರಿನಲ್ಲಿ ವಿಲ್ ಮಾಡಿರುತ್ತಾಳೆ. ಪುತ್ರ ವ್ಯಾಮೋಹವನ್ನು ಬಿಡದಿರುವ ಕಾಂತಿಯ ಬಗ್ಗೆ ಬೇಸರಗೊಂಡ ಧ್ಯಾನಗುರು ಆಕೆಯ ಮನೆಯನ್ನು ತೊರೆದು ಹೋಗುತ್ತಾನೆ.

ಹೀಗೆ ಭೈರಪ್ಪನವರ ಕಾದಂಬರಿಯಲ್ಲಿ ಕಾಂತಿ ಸ್ವತಂತ್ರ ವಿಚಾರದ ಆಧುನಿಕ ಮಹಿಳೆ ಆಗಿ ಚಿತ್ರಿತಗೊಂಡಿದ್ದಾಳೆ. ಪಾತಿವೃತ್ಯವೆಂಬ ಮೌಲ್ಯಕ್ಕೆ ಇವಳಲ್ಲಿ ಸ್ಥಾನವೇ ಇಲ್ಲ. ವಿವಾಹ ಪೂರ್ವದಲ್ಲಿಯೇ ಸ್ನೇಹಿತನೊಂದಿಗೆ ದೈಹಿಕ ಸಂಬಂಧವನ್ನಿಟ್ಟುಕೊಂಡಿರುವ ಈಕೆಯ ಪಾತ್ರದ ಮೂಲಕ ಕಾದಂಬರಿಕಾರರು ಸ್ವಾತಂತ್ರ್ಯೋತ್ತರ ಭಾರತದ ನೈತಿಕ ಅಧಃಪತನವನ್ನು ಗುರುತಿಸುತ್ತಾರೆ. ಪಾಶ್ಚಾತ್ಯೀಕರಣದಿಂದಾಗಿ ಆಧುನಿಕ ಭಾರತದಲ್ಲಿ ಬದಲಾಗುತ್ತಿರುವ ಸ್ತ್ರೀ ಮೌಲ್ಯಗಳನ್ನು ಈ ಪಾತ್ರವು ಬಿಂಬಿಸುತ್ತದೆ.

ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀ ಇಷ್ಟೊಂದು ಕೀಳು-ಮಟ್ಟಕ್ಕೆ ಇಳಿದು ಸ್ವತಂತ್ರಳಾಗುವುದಾಗಲಿ, ಹಣ ಸಂಪಾದನೆ ಮಾಡುವುದಾಗಲಿ ಸಾಧ್ಯವಲ್ಲದ ಮಾತು. ಆದರೂ ಕೂಡ ಕಾದಂಬರಿಕಾರರು ಸ್ವತಂತ್ರ ಭಾರತದ ಸ್ತ್ರೀಯ ಪ್ರತಿನಿಧಿಯಾಗಿ ಕಾಂತಿ ಪಾತ್ರವನ್ನು ತಂದು ಆ ಮೂಲಕ ಪಾಶ್ಚಾಮಾತ್ಯದಲ್ಲಿ ಇಲ್ಲದ ಪಾತಿವೃತ್ಯ ಮೌಲ್ಯ, ಕಾಮದ ಸ್ವೇಚ್ಛಾಚಾರ ವರ್ತನೆ ಅತ್ಯಂತ ಸ್ವಾತಂತ್ರ್ಯವನ್ನು ಬಯಸುವ ಪ್ರವೃತ್ತಿ- ಇವುಗಳನ್ನೆಲ್ಲ ಚಿತ್ರಿಸಿ ತನ್ನ ಕಾದಂಬರಿ ರಚನೆಯ ಮೂಲ ಆಶಯವನ್ನು ಈಡೇರಿಸಿರುವುದು 'ಕಥನಶಿಲ್ಪ'ದ ಒಟ್ಟಂದಕ್ಕೆ ವಿಶಿಷ್ಟ ಕೊಡುಗೆ ನೀಡುತ್ತದೆ.

'ತಂತು' ಕಾದಂಬರಿಯಲ್ಲಿ ನೈತಿಕತೆಯ ಕುಸಿತನದ ಪ್ರತೀಕವಾಗಿ 'ಕಾಂತಿಯ' ಪಾತ್ರ ಚಿತ್ರಿತಗೊಂಡಿದೆ. ದೇಶದಲ್ಲಿ ಉನ್ನತ ಶಿಕ್ಷಣ ಪಡೆವ, ಆರ್ಥಿಕವಾಗಿ ಸ್ವಾವಲಂಬಿಗಳಾಗ ಬಯಸುವ ಉನ್ನತ ಹುದ್ದೆಯಲ್ಲಿರುವ ಮುಕ್ತ ಲೈಂಗಿಕತೆ, ಲೈಂಗಿಕ ಸ್ವೇಚ್ಛೆಯನ್ನು ಬಯಸುವ ಸ್ತ್ರೀಯರ ಪ್ರತಿನಿಧಿ ಈ ಪಾತ್ರ (ಕಾಂತಿ) ಸರ್ಕಾರಿ ಸಹಾಯವನ್ನು ಪಡೆಯಲು ಮೇಲಧಿಕಾರಿ ಬಹೆಲ್‌ಗೆ ಕಾಂತಿ ಯಾವುದೇ ಹಿಂಜರಿಕೆಯಿಲ್ಲದೆ ತನ್ನ ದೇಹವನ್ನು ಒಪ್ಪಿಸಲು ಸಾಧ್ಯವಾಯಿತು. ಹೊನ್ನತ್ತಿ, ಡಾ।ಹರಿಶಂಕರ ಪ್ರಸಾದ ಇವರೊಂದಿಗಿನ ಕಾಮ ಕೇಳಿ-ಎಲ್ಲವೂ ಸಹಜವೆಂಬಂತೆ ಚಿತ್ರಿತವಾಯಿತು. ಕಾದಂಬರಿಕಾರರು ದೇಶದಲ್ಲಿ ನೈತಿಕ ಅಧಃಪತನವಾಗಿದೆ ಎಂದು

ಬಲವಾಗಿ ನಂಬಿ ಪ್ರತಿಪಾದಿಸುತ್ತಿರುವುದರಿಂದ ಈ ಪಾತ್ರವು ಲೇಖಕರ ಆಣತಿಯನ್ನು ಮೀರದೆ ನಡೆದಿದೆ. ಮಹಿಳೆಯ ಸ್ಥಾನಮಾನದ ವಿಚಾರವಾಗಲೀ, ಆಕೆಯ ಮನಸ್ಸಿನಲ್ಲಿ ನಡೆಯುವ ಯಾವುದೇ ತಾಕಲಾಟವಾಗಲೀ ಇಲ್ಲಿ ಅಪ್ರಸ್ತುತವಾಗಿದೆ. ವಿಧಿ ನಿರ್ಧರಿಸಿದ ಹಣೆ ಬರಹದಂತೆ ಕಾಂತಿಯ ಪಾತ್ರ ಸೃಷ್ಟಿ ಆಗುತ್ತದೆ. ತನ್ನ ಜೀವನವನ್ನು ಬದಲಾಯಿಸಿಕೊಳ್ಳಬೇಕೆಂಬ ಇಚ್ಛೆಯಿಲ್ಲದ ಒತ್ತಡವೂ ಇಲ್ಲದ, ತನ್ನ ದಾರಿಯೇ ಸರಿಯೆಂಬ ಬಲವಾದ ನಂಬಿಕೆಯಲ್ಲಿ ಪಾತ್ರ ಬೆಳವಣಿಗೆಯನ್ನು ಕಾಣುತ್ತದೆ. ಇಲ್ಲಿಯ ಹೇಮಂತ ತನ್ನ ಜೀವನದಲ್ಲಿ ಎದುರಾದ ನೈತಿಕ ಪರೀಕ್ಷೆಯಲ್ಲಿ ಗೆದ್ದು ಬರುತ್ತಾನೆ. ರವೀಂದ್ರ, ತಲವಾರ್, ಅಧ್ಯಾಪಕರು ಆರ್ಥಿಕ ಸಂಕಷ್ಟಗಳನ್ನು, ಸಾಮಾಜಿಕ ಕೌಟುಂಬಿಕ ಸಮಸ್ಯೆಗಳನ್ನು ಎದುರಿಸಿ ನಿಲ್ಲುತ್ತಾರೆ. ಎಲ್ಲಾ ತೊರೆದ ರಾಮಚಂದ್ರ ಬ್ರಹ್ಮಚಾರಿಗೆ ಸಮಸ್ಯೆಯೇ ಇಲ್ಲ. ಆದರೆ ಸಾವಿನ ಸಮಯದಲ್ಲೂ ಕಾಂತಿ ತನ್ನ ಸ್ವಾರ್ಥ-ಸಣ್ಣತನವನ್ನು ಗೆಲ್ಲುವ ಪ್ರಯತ್ನ ಮಾಡದೇ ಎಲ್ಲಾ ಐಶ್ವರ್ಯವನ್ನು ತನ್ನ ಕೃತಘ್ನ ಮಗನಿಗೆ ಬಿಟ್ಟು ಹೋಗುತ್ತಾಳೆ.

ವ್ಯಕ್ತಿ-ಕುಟುಂಬ-ಸಮಾಜದ ನಡುವಿನ ಪರಸ್ಪರ ಸಂಬಂಧ, ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಕ್ಷೇತ್ರಗಳ ನಡುವಿನ ಪರಸ್ಪರ ಸಂಬಂಧ ಒಂದು ದೇಶದ ಸಂಸ್ಕೃತಿಯ ಉನ್ನತಿ-ಅವನತಿಗೆ ಕಾರಣವಾಗುತ್ತದೆ. ನೈತಿಕತೆಯ ಎಳೆ-ತಂತು ದುರ್ಬಲವಾದಾಗ ವ್ಯಕ್ತಿ-ಕುಟುಂಬ, ಸಮಾಜ, ದೇಶ ಎಲ್ಲವೂ ಆಂತರಿಕವಾಗಿ ದುರ್ಬಲಗೊಂಡು ಕುಸಿಯುವ ಸ್ಥಿತಿಗೆ ಬರುತ್ತದೆ ಎನ್ನುವ ವಿಚಾರವನ್ನು ಕಾದಂಬರಿಯಲ್ಲಿ ಕಾಂತಿ ಪಾತ್ರವು ತುಂಬಿಕೊಟ್ಟಿದೆ. ಇದರಿಂದಾಗಿ ಜನಮನದಲ್ಲಿ ಈ ಪಾತ್ರವು ನೆಲೆನಿಂತು ಬಿಟ್ಟಿತು.

***********

# 'ಚಂದ್ರಿಕೆ'

ಎಸ್.ಎಲ್.ಭೈರಪ್ಪನವರ 'ಸಾರ್ಥ' ಕಾದಂಬರಿಯ ಪ್ರಮುಖ ಪಾತ್ರ ಚಂದ್ರಿಕೆ, ಇವಳು ಹುಟ್ಟು ಕಲಾವಿದೆ. ನಟಿ, ನೃತ್ಯಗಾರ್ತಿ ಹಾಗೂ ಸಂಗೀತಗಾರಳೂ ಆಗಿರುತ್ತಾಳೆ. ಸಂಗೀತ ಚಂದ್ರಿಕೆಗೆ ರಕ್ತದಿಂದ ಬಂದಿರುವ ಗುಣ. ಸಂಗೀತಕ್ಕಾಗಿ ತನ್ನ ಊರಿಗೆ ಬಂದ ಕುರುಡು ಸಂಗೀತಗಾರ ಯದುಭದ್ರನ ನಾದಸುಧೆಗೆ ಮಾರುಹೋಗಿ ತಂದೆ-ತಾಯಿಗಳ ವಿರೋಧವನ್ನೆದುರಿಸಿ ತನ್ನ ಗುರುವಿನ ಜೊತೆ ಓಡಿಹೋಗಿ ಮದುವೆಯಾದಳು. ಮಧುರವಾದ ಕಂಠವನ್ನು ಹೊಂದಿರುವ ಚಂದ್ರಿಕೆ ಸಂಗೀತ ಸಾಧನೆಯನ್ನು ಪತಿಯ ಜೊತೆಯಲ್ಲಿ ಮುಂದುವರಿಸುತ್ತಾಳೆ. ಸಮಾಜದ ಪ್ರಶಂಸೆಗೆ ಒಳಗಾಗುತ್ತಾಳೆ. ಆದರೆ ಕ್ರಮೇಣ ಕುರುಡು ಯದುಭದ್ರನಲ್ಲಿ ಅಸಹನೆ, ಈರ್ಷೆ ಮೊಳೆತು, ತಾನು ಕೇವಲ ಗಂಡನ ಸಂಗೀತದಿಂದ ಮಾತ್ರವೇ ಬದುಕುತ್ತೇನೆಂಬ ಭಾವನೆ ಬರೀ ಭ್ರಮೆ ಎನಿಸಿಬಿಡುತ್ತದೆ. ಅದೇ ಸಮಯದಲ್ಲಿ ಸಂಗೀತ ಕಲಿಯಲು ಬಂದ ಯದುಮಿತ್ರನ ಸೋದರಳಿಯ ಯುವಕ ಶ್ರೀಮುಖ, ಚಂದ್ರಿಕೆಯ ಸ್ವರ ಮಾಧುರ್ಯಕ್ಕೆ. ಇವಳ ಸೌಂದರ್ಯಕ್ಕೆ ಮಾರು ಹೋಗಿ ಈಕೆಯ ಆರಾಧಕನಾಗಿ ಬಿಡುತ್ತಾನೆ. ಕೇವಲ ಸೌಂದರ್ಯದ ದೃಷ್ಟಿಯಿಂದ ಮಾತ್ರ ಒಮ್ಮೆ ನಗ್ನವಾಗಿ ನೋಡುವ ಇಚ್ಛೆಯಿಂದ ಆರಂಭವಾದ ಸೌಂದರ್ಯೋಪಾಸನೆ ಪರಸ್ಪರ ಆರಾಧನೆ, ಪ್ರಣಯ, ಮಿಲನಗಳಲ್ಲಿ ಕೊನೆಗೊಂಡಿತು. ಈಕೆಯ ಪತಿ ಚಂದ್ರಿಕೆ ಮತ್ತು ಶ್ರೀಮುಖರ ಅನೈತಿಕ ಸಂಬಂಧವನ್ನು ತಿಳಿದು ಈಕೆಗೆ ಹಾದರಗಿತ್ತಿ ಪಟ್ಟಕಟ್ಟಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಪತಿಯ ಸಾವಿಗೆ ಕಾರಣಳಾದ ಚಂದ್ರಿಕೆಗೆ ೨ ವರ್ಷಗಳ ಕಾಲ ಕಾರಾಗೃಹವಾಸದ ಶಿಕ್ಷೆಯಾಗುತ್ತದೆ. ಇದನ್ನು ಚಂದ್ರಿಕೆ ಪ್ರಾಯಶ್ಚಿತ್ತವೆನ್ನುವ ಭಾವನೆಯಿಂದ ಅನುಭವಿಸುತ್ತಾಳೆ. ಕ್ರಮೇಣ ಈಕೆಗೆ ಶ್ರೀಮುಖನ ಮೇಲೆ, ಕಲೆಯ ಮೇಲೆ, ಕಲಾವಿದನ ಮೇಲೆ ಬೇಸರ ಅಸಹ್ಯಗಳು ಆರಂಭವಾಗಿ ಕಲಾವಿದರಿಗೆ ನೈತಿಕ ಶಕ್ತಿಯೇ ಕಡಿಮೆ ಎನಿಸಿಬಿಡುತ್ತದೆ. "ಭಾವನೆಯಲ್ಲಿ

ಬಾಗಿ ಬಳಕುವ ನೀರಿನಂತಹ ಭಾವನೆಯೇ ಪ್ರಧಾನವಾದ ಅವರಲ್ಲಿ ಚಾರಿತ್ರ್ಯ ಶುದ್ಧಿಯನ್ನು ಕಲ್ಪಿಸಿಕೊಳ್ಳುವುದೇ ಮೂರ್ಖತನ. ಸಾಮಾಜಿಕ ನೈತಿಕ ತಂತು ಅವರಲ್ಲಿಲ್ಲ"[೧] ಎಂದೆಲ್ಲಾ ಯೋಚಿಸಿ ಚಂದ್ರಿಕೆ ತಾನಿನ್ನು ಜೀವನದಲ್ಲಿ ಹಾಡುವುದಿಲ್ಲ ಎಂದು ತೀರ್ಮಾನಿಸುತ್ತಾಳೆ. ಚಂದ್ರಿಕೆ ತನ್ನ ಮುಂದಿನ ಜೀವನದಲ್ಲಿ ಇಂದ್ರೀಯ ನಿಗ್ರಹ ಮತ್ತು ನೈತಿಕ ಬ್ರಹ್ಮಚರ್ಯದ ಅನುಸರಣೆಗೆ ಹೆಚ್ಚು ಮಹತ್ವ ಕೊಡುತ್ತಾಳೆ.

ಸಹಜ ನಟಿಯಾಗಿರುವ ಈಕೆಗೆ ಮಧುರೆಯಲ್ಲಿ ಕೃಷ್ಣಚರಿತ್ರೆಯ ನಾಟಕವನ್ನಾಡುವಾಗ, ಕೃಷ್ಣ ಪಾತ್ರಧಾರಿಯಾದ ನಾಗಭಟ್ಟನಲ್ಲಿ ಉತ್ಕಟ ಆಕರ್ಷಣೆ ಪ್ರೇಮ ಬೆಳೆಯುತ್ತದೆ. ಚಂದ್ರಿಕೆಯ ಮನಸ್ಸೂ ಸಹ ನಾಗಭಟ್ಟನನ್ನು ಅಷ್ಟೇ ಉತ್ಕಟವಾಗಿ ಪ್ರೀತಿಸಿದರೂ ಅವಳಲ್ಲಿ ದೈಹಿಕ ಸಂಪರ್ಕದ ಬಗೆಗೆ ಅನಾಸಕ್ತಿ, ವಿಕರ್ಷಣೆ, ಚಂದ್ರಿಕಾ ಅಂತರಂಗದಲ್ಲಿ ಸನ್ಯಾಸಿನಿ ವ್ರತ ನಿಯಮದ ನೈತಿಕ ಬ್ರಹ್ಮಚರ್ಯದ ಕಠಿಣ ಜೀವನ ನಡೆಸುತ್ತಿದ್ದಳು. ಆದರೂ ಅವಳು ತನ್ನ ಕೋಮಲ ಭಾವನೆಗಳಿಂದ ಕಾಮವನ್ನು ಶಮನಗೊಳಿಸುವ ಸ್ಪರ್ಶದಿಂದ ನಾಗಭಟ್ಟನ ಬೆಂಕಿಯಂಥ ಕಾಮವನ್ನು ಲೈಂಗಿಕ ಕ್ರಿಯೆಯೇ ಇರದೆ ಕರಗಿಸುವ ಪರಿ ಅದ್ಭುತ ಎನಿಸುತ್ತದೆ. ಅವನಿಗಾಗಿಯೇ ಚಂದ್ರಿಕೆ ತನ್ನ ಪಾತ್ರವನ್ನು ಸುಗಂಧಿಗೆ ಬಿಟ್ಟು ಕೊಟ್ಟ ತಾನು ಮಧುರೆಯಿಂದ ನಿರ್ಗಮಿಸುತ್ತಾಳೆ. ಯೋಗ ಧ್ಯಾನದಲ್ಲಿ ಆಸಕ್ತಿ ಬೆಳೆದು ಅದರ ಸಾಧನೆಯಲ್ಲಿ ತೊಡಗಿಕೊಂಡಿರುತ್ತಾಳೆ, ವಿರಾಗಿಣಿಯಾಗಿ ಸನ್ಯಾಸಿಯ ಜೀವನವನ್ನು ಕೈಗೊಂಡಿರುವ ಈಕೆ ನಾಗಭಟ್ಟನನ್ನು ಆಧ್ಯಾತ್ಮಿಕ ಪತನದಿಂದ ಉಳಿಸಬೇಕೆಂಬ ಉದ್ದೇಶದಿಂದ ತನ್ನ ಗುರುಗಳ ಅಪ್ಪಣೆಯ ಮೇರೆಗೆ ಯೋನಿಪೂಜೆಯ ವಿಧಿಯಲ್ಲಿ ಭಾಗವಹಿಸುತ್ತಾಳೆ. ನಾಗಭಟ್ಟನ ಮೇಲಿನ ಅಸೀಮ ಪ್ರೇಮದಿಂದಾಗಿ ತನ್ನ ವ್ರತ ನಿಯಮವನ್ನು ತಾನೇ ಭಂಗ ಮಾಡಿಕೊಳ್ಳುತ್ತಾಳೆ. ನಾಗಭಟ್ಟನನ್ನು ತಾಯಿಯಂತೆ, ಪತ್ನಿಯಂತೆ, ದಾನಿಯಂತೆ ತನ್ನ ಮನೆಯಲ್ಲಿ

---

[೧] 'ಸಾರ್ಥ' – ಪುಟ ೧೧೮. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೧೯೯೮.

ಉಪಚರಿಸುತ್ತಾಳೆ. ಈಕೆ ನುರಿತ ಮನಶಾಸ್ತ್ರಜ್ಞೆಯಂತೆ ನಾಗಭಟ್ಟನ ಮನಸ್ಸನ್ನು ತಾಂತ್ರಿಕ ಸಾಧನೆಯ ಮಾರ್ಗದಿಂದ ಹಿಂದಿರುಗಿಸುವ ಪರಿ ವಿಶೇಷವಾದುದು. ಪ್ರೀತಿಯಿಂದ ಸೇವೆ ಉಪಚಾರಗಳನ್ನು ಮಾಡಿದರೂ, ಚಂದ್ರಿಕೆ ನಾಗಭಟ್ಟನೊಂದಿಗೆ ವಿವಾಹಕ್ಕೆ ಒಪ್ಪುವುದಿಲ್ಲ.

ಅರಬರ ಸೆರೆಯಾಳಾಗಿ ನಾಗಭಟ್ಟ ಸಿಲುಕಿಕೊಂಡಾಗ ಆತನ ಜೀವ ಉಳಿಸಲಿಕ್ಕಾಗಿ ಅರಬರ ನವಾಬನ ಅತ್ಯಾಚಾರಕ್ಕೆ ಒಳಗಾಗುತ್ತಾಳೆ. ಹೀಗೆ ನವಾಬನಿಂದ ಲೈಂಗಿಕ ಶಿಕ್ಷೆ ಅನುಭವಿಸಿ ಗರ್ಭಧರಿಸಿ ನೊಂದುಕೊಳ್ಳುತ್ತಾಳೆ. ಇಂಥ ಪರಿಸ್ಥಿತಿಯಲ್ಲಿಯೂ ಚಂದ್ರಿಕೆಗೆ ಧ್ಯಾನ ಸಿದ್ಧಿಸುತ್ತದೆ. ತನ್ನ ಗುರುಗಳು ಸಮಾಧಿಗೆ ತೆರಳುವ ಮುನ್ನ ಅವರನ್ನು ಸಶರೀರವಾಗಿ ನೋಡಲು ಬಂದ ಚಂದ್ರಿಕೆಗೆ ಗುರುಗಳೊಂದಿಗೆ ತನ್ನ ಗರ್ಭದ ಕುಲ್ಲಕ ವಿಷಯವನ್ನು ತಿಳಿಸಲಾಗುವುದಿಲ್ಲ. ಸಮಾಧಿಯ ನಂತರ ಗುರುಗಳು ಚಂದ್ರಿಕೆಗೆ, ಅವಳು ಧ್ಯಾನದಲ್ಲಿದ್ದಾಗ, 'ನಿನ್ನ ಸಖ ಕೃಷ್ಣನನ್ನು ಮದುವೆಯಾಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸು. ಹೊಟ್ಟೆಯಲ್ಲಿರುವ ಮಗುವಿಗೆ ಎಲ್ಲ ಸಂಸ್ಕಾರಗಳನ್ನು ಮಾಡು. ಇನ್ನೂ ನಾಲ್ಕು ವೀರ್ಯವಂತ ಮಕ್ಕಳನ್ನು ಹೊತ್ತು ಹೆತ್ತು ಬೆಳೆಸು. ಧ್ಯಾನವನ್ನು ಬಿಡಬೇಡ. ಧ್ಯಾನದಲ್ಲಿ ನೀನು ಯಾವಾಗ ಕರೆದರೂ ನಾನು ಬರುತ್ತೇನೆ"ಎಂದು ನುಡಿಯುತ್ತಾರೆ. ಇದರಿಂದಾಗಿ ಆಕೆ ಕೃಷ್ಣಾನಂದ ನಾಗಭಟ್ಟನ ಜೊತೆಗೆ ಸಾಂಸಾರಿಕ ಜೀವನಕ್ಕೆ ತೆರೆದುಕೊಳ್ಳುತ್ತಾಳೆ.

೮ನೆಯ ಶತಮಾನದ ಸಾಮಾಜಿಕ, ಧಾರ್ಮಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಬದುಕಿನ ಚಿತ್ರಣವನ್ನು ಮೂಡಿಸುವ ಉದ್ದೇಶದಿಂದಾಗಿ ಕಾದಂಬರಿಕಾರರು ಈ ಕಾದಂಬರಿಯಲ್ಲಿ ಪಾತ್ರಗಳಿಗಿಂತ ಕಥೆಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿರುತ್ತಾರೆ. ಆದರೂ ಕೂಡ ಇವರು ಸೃಜಿಸಿದ ಚಂದ್ರಿಕಾಳ ಪಾತ್ರವು ಇಡೀ ಕಾದಂಬರಿಯಲ್ಲಿನ ಸಾಂಸ್ಕೃತಿಕ ಬದುಕಿನ ಚಿತ್ರಣವನ್ನು ನೀಡುವಲ್ಲಿ ಸಫಲತೆಯನ್ನು ಹೊಂದಿದೆ. ಕಥಾನಾಯಕನಾದ ನಾಗಭಟ್ಟನಷ್ಟೇ ಕಾದಂಬರಿಯಲ್ಲಿ ಗುರುತಿಸಲ್ಪಡುವ ಪಾತ್ರವಾಗಿ

ಚಂದ್ರಿಕೆಯ ಪಾತ್ರವು ಬೆಳೆದು ಬಂದು ಕಾದಂಬರಿಯ 'ಕಥನಶಿಲ್ಪ'ಕ್ಕೆ ತನ್ನದೇ ಆದ ದೇಣಿಗೆಯನ್ನು ನೀಡಿದೆ. ನಾಯಕನ ಪಾತ್ರವು ಆಗಿನ ಕಾಲದ ರಾಜಕೀಯ ಧಾರ್ಮಿಕ, ಸಾಂಸ್ಕೃತಿಕ ಜೀವನದ ದರ್ಶನವನ್ನು ಮಾಡಿಕೊಟ್ಟು ಓದುಗರ ಜನಮನವನ್ನು ಆಕ್ರಮಿಸಿಕೊಂಡರೆ, ನಾಯಕಿಯಾಗಿ ಚಂದ್ರಿಕೆಯ ಪಾತ್ರವು ಸಾಂಸ್ಕೃತಿಕ ಜೀವನವನ್ನು ನಡೆಸಿತೋರಿಸಿ, ಅಲ್ಲಿ ನಡೆಯುವ ಮೋಸ-ವಂಚನೆ ಸ್ವಾರ್ಥ ಇವುಗಳನ್ನೆಲ್ಲಾ ಬಹಿರಂಗ ಪಡಿಸುವ ಸಲುವಾಗಿ ರಚನೆಗೊಂಡ ಪಾತ್ರವಾಗಿ ಮೂಡಿ ಬಂದಿದೆ. ಈ ಪಾತ್ರದ ಮೂಲಕ ಗಂಡು-ಹೆಣ್ಣು ಸಂಬಂಧದ ಹೊಸ ಆಯಾಮವನ್ನು ಕಾದಂಬರಿಕಾರರು ಪರಿಚಯಿಸುತ್ತಾರೆ. ಚಂದ್ರಿಕೆಯ ದೈಹಿಕ ಸೌಂದರ್ಯವನ್ನು ಚಿತ್ರಿಸಿದ ಕಾದಂಬರಿಕಾರರು ಅವಳ ಮಾನಸಿಕ ಪ್ರಬುದ್ಧತೆಯನ್ನು ಆಧ್ಯಾತ್ಮಿಕ ಔನ್ನತ್ಯವನ್ನು ಸಾರಿರುತ್ತಾರೆ. ಚಂದ್ರಿಕೆ ಮತ್ತು ನಾಗಭಟ್ಟ ಇವರಲ್ಲಿ ಭಾವ ಸಹಚರ್ಯ ಉನ್ನತ ಮಟ್ಟದ ಬೌದ್ಧಿಕ ಹಾಗೂ ಆಧ್ಯಾತ್ಮಿಕ ಮಟ್ಟದ ಸ್ನೇಹದಂತೆ ಚಿತ್ರಿತವಾಗಿದೆ. ವಿರಸ ವಿಷಮತೆಗಳಿಂದ ಸಾಮರಸ್ಯದೆಡೆಗೆ ಸಾಗುವ ಪರಿಕಲ್ಪನೆಯನ್ನು ಈ ಪಾತ್ರ ಸೃಷ್ಟಿಯಲ್ಲಿ ಮಾಡಿದ್ದಾರೆ.

*******************

## 'ಮಧುಮಿತಾ'

ಎಸ್.ಎಲ್.ಭೈರಪ್ಪನವರ 'ಮಂದ್ರ' ಕಾದಂಬರಿಯ ಕೇಂದ್ರ ಪಾತ್ರ ಮಧುಮಿತಾ. ಈಕೆ ಆಗರ್ಭ ಶ್ರೀಮಂತೆ. ಬಿ.ಎ. ಪದವೀಧರೆಯಾಗಿರುವ ಈಕೆಗೆ ಸಂಗೀತದಲ್ಲಿ ವಿಶೇಷ ಆಸಕ್ತಿ. ಭಾರತದ ಶ್ರೇಷ್ಠ ಸಂಗೀತಕಾರನಾದ ಮೋಹನ್‌ಲಾಲ್‌ನಲ್ಲಿ ಸಂಗೀತ ಕಲಿತು ತಾನು ಖ್ಯಾತ ಗಾಯಕಿಯಾಗಬೇಕೆಂಬ ಕನಸನ್ನು ಹೊಂದಿದವಳು. ಹೀಗೆ ಮೋಹನ್‌ಲಾಲ್‌ನಲ್ಲಿ ಗುರುತ್ವವನ್ನು ಬಯಸಿ ಹೋದ ಮಧುಮಿತಾಳಿಗೆ "ನನ್ನಲ್ಲಿರುವುದನ್ನೆಲ್ಲ ನಾನು ನಿರ್ವಂಚನೆಯಿಂದ ಕೊಟ್ಟಿದ್ದೇನೆ. ನಿನ್ನಲ್ಲಿರುವುದನ್ನೆಲ್ಲ ಗುರುವಿಗೆ ನಿರ್ವಂಚನೆಯಿಂದ ಅರ್ಪಿಸಿದರೆ ಕಲಿಸಲು ಇನ್ನು ಉತ್ಸಾಹ ಬರುತ್ತದೆ. ನನ್ನದೇನೂ ಬಲವಂತವಿಲ್ಲ, ಬಲಾತ್ಕಾರವಿಲ್ಲ. ನೀನು ಅನುಕೂಲಸ್ಥ ಮನೆಯವಳು. ನಮ್ಮ ಹುಡುಗಿಯನ್ನು ಇವನು ಕೆಡಿಸಿದ ಅಂತ ನಾಳೆ ತಕರಾರು ಬರಬಾರದು. ಬೇರೆಯವರು ಐದು ವರ್ಷದಲ್ಲಿ ಕಲಿಸಬೇಕಾದುದನ್ನು ನಾನು ಒಂದು ತಿಂಗಳಲ್ಲಿ ಕಲಿಸುತ್ತೇನೆ. ನನ್ನ ಹಾಗೆ ನಿನ್ನನ್ನೂ ಖ್ಯಾತನಾಮಳಾನ್ನಾಗಿ ಮಾಡುತ್ತೇನೆ. ಪ್ರೀತಿ-ಪ್ರೇಮಗಳು ಬಲವಂತ ಬಲತ್ಕಾರದಿಂದ ಬೆಳೆಯುವುದಿಲ್ಲ. ಮೂರು ಗಂಟೆಯ ಪ್ರೋಗ್ರಾಮಿಗೆ ಐವತ್ತು ಸಾವಿರ ತೆಗೆದು ಕೊಳ್ಳುತ್ತೇನೆ. ನಿನ್ನ ಒಂದು ಸಾವಿರ ನನಗೆ ಯಾವ ಲೆಕ್ಕವೂ ಅಲ್ಲ. ಹತ್ತು ಗಂಟೆಯಿಂದ ಸಂಜೆ ನಾಲ್ಕರವರೆಗೆ ಇಲ್ಲಿ ಯಾರು ಬರುವುದಿಲ್ಲ. ಯಾರಿಗೂ ತಿಳಿಯುವುದು ಇಲ್ಲ. ಸಂಗೀತ ಪ್ರೇಮವಿದ್ದರೆ ಸಂಗತ ಮಾಡು"[೧] ಎಂದು ಎಲ್ಲವನ್ನೂ ಮುಚ್ಚುಮರೆಯಿಲ್ಲದೆ ಸ್ಪಷ್ಟವಾಗಿ ಹೇಳಿಬಿಡುತ್ತಾನೆ. ಆತನ ಈ ಮಾತುಗಳಿಂದ ಪತ್ರಿಕೆಗಳಲ್ಲಿ ಈತನ ರಾಸಕ್ರೀಡೆಗಳ ಬಗ್ಗೆ ಬಂದಿದ್ದೆಲ್ಲವೂ ಸತ್ಯವೆನಿಸುತ್ತದೆ. ಅಲ್ಲದೆ ಮನೆತನಸ್ಥ ಹೆಣ್ಣುಮಕ್ಕಳು ಸಂಗೀತ, ನೃತ್ಯ, ನಾಟಕ ಕಲೆಗಳ ತಂಟೆಗೆ ಹೋಗಬಾರದೆಂಬ ಸಂಪ್ರದಾಯಸ್ಥರ ಮಾತಿನಲ್ಲಿ ಅರ್ಥವಿದೆ ಅನಿಸುತ್ತದೆ.

---

[೧] 'ಮಂದ್ರ' ಪುಟ ೯೮- ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೨೦೦೨.

ಮಧುಮಿತಾ ಎಂದೂ ವಿವಾಹಪೂರ್ವ, ವಿವಾಹೋತ್ತರ ಹಗುರ ಸಂಬಂಧಗಳ ಬಗ್ಗೆ ವಿಚಾರವನ್ನು ಮಾಡಿದವಳಲ್ಲ. ಆದರೆ ಸಂಗೀತದ ಮೇಲಿನ ಆಸಕ್ತಿಯಿಂದಾಗಿ ಮತ್ತು ನಾನು ಬಲವಂತ ಮಾಡೊಲ್ಲ' ಅಂತ ಒತ್ತಿ ಒತ್ತಿ ಹೇಳಿದ್ದಾನೆ ಎಂಬುದು ನೆನಪಾಗಿ, ಗುರು ಅಂತವನಲ್ಲ ನಾನೇ ತಪ್ಪು ತಿಳಿದುಕೊಡಿದ್ದೇನೆ ಎಂದು ಆಲೋಚಿಸಿಕೊಂಡು ಆತನ ಶಿಷ್ಯಳಾಗಿ ಸೇರಿಕೊಳ್ಳುತ್ತಾಳೆ. ಸಂಗೀತದಲ್ಲಿ ವಿಶೇಷ ಆಸಕ್ತಿಯನ್ನು ಹೊಂದಿದ್ದರೂ ಮಧುಮಿತಾಳಿಗೆ ಎರಡು ತಿಂಗಳ ಕಾಲ ವಿದ್ಯಾಭ್ಯಾಸ ಮಾಡಿದರೂ ಏನನ್ನೂ ಕಲಿಯಲಾಗಲಿಲ್ಲ. ಗುರು ಕಾಟಚಾರಕ್ಕೆ ಎಂಬಂತೆ ಪಾಠ ಮಾಡುತ್ತಾನೆ, ಎನಿಸಿದ ಮಧುಮಿತಾಳಿಗೆ ಆತನ ಮೇಲೆ ತಿರಸ್ಕಾರ ಮೂಡುತ್ತದೆ. ಇದರಿಂದ ವಿನಾಯಕರಾವ್ ಮಿರಜಕರ್ ಎನ್ನುವ ಇನ್ನೊಬ್ಬ ಗುರುವಿನಿಂದ ಸಂಗೀತ ಕಲಿಯಲು ಮುಂದಾಗುತ್ತಾಳೆ. ಸ್ವತಃ ಗಾಯಕರಲ್ಲದ ಇವರಿಂದ ಸಂಗೀತ ಕಲಿತರೆ ಗಾಯಕಿಯಾಗಲೂ ಸಾಧ್ಯವಿಲ್ಲವೆಂದು ಮೋಹನ್‌ಲಾಲ್‌ನ ಸಂಗೀತದ ಕ್ಯಾಸೆಟ್ಟುಗಳನ್ನು ತಂದು ಏಕಲವ್ಯನಂತೆ ಸಾಧನೆ ಮಾಡಲು ತೊಡಗುತ್ತಾಳೆ. ಆದರೆ ಶಾಸ್ತ್ರದಿಂದ ಸಂಗೀತ ಬರುವುದಿಲ್ಲ. ಶಾಸ್ತ್ರವು ಭಾವದ ಪರಿಚಾರಿಕೆಯಾಗಬೇಕು. ಆ ರಾಗ–ಭಾವ ಕರಗತವಾಗ ಬೇಕಾದರೆ ಸಂಗೀತಗಾರನೇ ಗುರುವಾಗಬೇಕು ಎನಿಸಿಬಿಡುತ್ತದೆ. ಆ ಸಂದರ್ಭದಲ್ಲಿ ಮೋಹನ್‌ಲಾಲ್‌ನ ಸಂಗೀತ ಕಛೇರಿಯಲ್ಲಿ ಭಾಗವಹಿಸಲು ಅವಕಾಶ ಒದಗಿ ಬರುತ್ತದೆ. ಮೋಹನ್‌ಲಾಲ್‌ರು ಅಂದು ಹಾಡಿದ ಶುದ್ಧ ಕಲ್ಯಾಣಿ ರಾಗ ಮತ್ತು ಗೋರೆ ಮುಂತಾದ ಸಂಗೀತ ರಸಿಕರು ಮಾಡಿದ ಆತನ ಸ್ತುತಿಯಿಂದ ಪ್ರೇರಿತಳಾಗಿ ಗಾಂಧರ್ವ ವಿದ್ಯೆಯಾದ ಸಂಗೀತವನ್ನು ಪಡೆಯಲು, ಮೋಹನ್‌ಲಾಲ್‌ನಲ್ಲಿ ಕ್ಷಮೆಯಾಚಿಸಿ ಅವನಲ್ಲಿ ಮತ್ತೊಮ್ಮೆ ಶಿಷ್ಯಳಾಗಿ ಸೇರುತ್ತಾಳೆ. ಸಂಗೀತವನ್ನು ತನಗೆ ಅರೆದು ಅರೆದು ಕುಡಿಸುತ್ತಿರುವ ಗುರುವಿಗೆ ಆತನಿಷ್ಟದಂತೆ ತನ್ನನ್ನು ಸಂಪೂರ್ಣವಾಗಿ ಅರ್ಪಿಸಿಕೊಳ್ಳುತ್ತಾಳೆ.

ಮೋಹನ್‌ಲಾಲ್‌ರ ಸಂಗಡ ಐದೂವರೆ ವರ್ಷ ಸಂಗೀತಾಭ್ಯಾಸವನ್ನು ಮಾಡಿರುವ ಮಧುಮಿತಾ ನ್ಯೂಯಾರ್ಕಿನಲ್ಲಿರುವ ವಿಕ್ರಮ್ .ಷಾ ಎಂಬ ಕಂಪ್ಯೂಟರ್ ಇಂಜಿನಿಯರ್ ರೊಂದಿಗೆ ಮದುವೆಯಾಗುತ್ತಾಳೆ. ಆಕೆಯ ಗಂಡನೂ ಕೂಡ ಮೋಹನ್‌ಲಾಲ್‌ರ ಪರಮ ಭಕ್ತ. ನ್ಯೂಯಾರ್ಕಿಗೆ ಮೋಹನ್‌ಲಾಲ್‌ರು ಸಂಗೀತ ಕಛೇರಿಯ ಸಲುವಾಗಿ ಬಂದಿರುವಾಗ ಮಧುಮಿತಾ ಗುರುವನ್ನು ತಮ್ಮ ಮನೆಗೆ ಆಹ್ವಾನಿಸುತ್ತಾಳೆ. ಅಲ್ಲಿಯೂ ಕೂಡ ವಿವಾಹಿತಳಾಗಿರುವ ಮಧುಮಿತಾಳನ್ನು ಸೇರಲು ಆತ ಇಚ್ಛಿಸುತ್ತಾನೆ. ಒಪ್ಪದಿದ್ದಾಗಿ ಮುನಿಸಿಕೊಂಡು ಪಾರ್ಕ್‌ನಲ್ಲಿ ಹೋಗಿ ಕಾಲಕಳೆಯುತ್ತಾನೆ. ಇದರಿಂದ ಗಲಿಬಿಲಿಯಾಗುವ ಮಧುಮಿತಾ ಆತನಿಗೆ ಭರವಸೆಯನ್ನಿಟ್ಟು ಮತ್ತೆ ಮನೆಗೆ ಕರೆತರುತ್ತಾಳೆ. ಅಲ್ಲಿ ಮಧುಮಿತಾ ಮತ್ತು ಮೋಹನ್‌ಲಾಲ್‌ರ ಸಂಬಂಧ ಮುಂದುವರೆಯುತ್ತದೆ. ಮೋಹನ್‌ಲಾಲ್‌ನೊಂದಿಗೆ ಸಹಗಾಯಕಿಯಾಗಿ ನ್ಯೂಯಾರ್ಕಿನಲ್ಲಿ ಕೆಲವೊಂದು ಸಂಗೀತ ಕಛೇರಿಗಳನ್ನು ಜೊತೆಯಾಗಿ ಕೊಡುತ್ತಾರೆ. ಆತ ಭಾರತಕ್ಕೆ ಮರಳಲು ಮಧುಮಿತಾಳಿಗೆ ಸಂಗೀತ ಬಿಟ್ಟು ಜೀವನವೇ ಇಲ್ಲ ಎನಿಸುತ್ತದೆ. "ತಾನು ಗುರುವಿನ ಗಾಂಧರ್ವ ಪತ್ನಿಯಾದುದರಿಂದ ಮನೆಯಲ್ಲಿ ಗುರುವಿನೊಂದಿಗೆ ಕೂಡಿದ್ದು ಒಳ್ಳೆಯ ಗಂಡನಿಗೆ ತಾನು ಬಗೆದ ದ್ರೋಹ, ಮೋಸ, ಪಾಪವೆಂದು ಬಗೆದು ಗಂಡನಿಗೆ ದೀರ್ಘ ಪತ್ರ ಬರೆದಿಟ್ಟು" ತಾನೂ ಭಾರತಕ್ಕೆ ಬರುತ್ತಾಳೆ. ಅಲ್ಲಿ ತಾನು ಗಂಡನಿಗೆ ಬರೆದಿಟ್ಟಿರುವ ಪತ್ರದ ಪ್ರತಿಯನ್ನು ಗುರುವಿಗೆ ತೋರಿಸಿ, ಮತ್ತೇ ತಾನಾಗಿಯೇ ಸಂಗೀತದ ಗುಂಗಿನಲ್ಲಿ ತನ್ನನ್ನು ಅರ್ಪಿಸಿಕೊಳ್ಳುತ್ತಾಳೆ. ಆದರೆ ಗುರುವಿನ ಕಾಯ ಶ್ರುತಿಯಾಗುವುದಿಲ್ಲ. ಎದ್ದು ಅವಳ ಕೆನ್ನೆಗೆ ಬಿಗಿದು ಗಂಡನಿಗೆ ಎಲ್ಲವನ್ನು ಬರೆದು ಒಪ್ಪಿಸಿ ನನ್ನ ಮರ್ಯಾದೆ ತೆಗೆದೆ. ಈ ಜನ್ಮದಲ್ಲಿ ನಿನಗೆ ಸಂಗೀತ ಸಾಧಿಸುವುದಿಲ್ಲವೆಂದು ಶಪಿಸುತ್ತಾನೆ.

ಗುರು ತನ್ನನ್ನು ತಿರಸ್ಕರಿಸಿದ ಸಿಟ್ಟಿನಿಂದ ಆತನನ್ನು ಮೀರಿಸುವ ಸಂಗೀತಗಾರ್ತಿಯಾಗಬೇಕೆಂದು ಛಲ ತೊಡುತ್ತಾಳೆ. ಮೋಹನ್‌ಲಾಲ್‌ನ ಸಾಥಿದಾರನಾದ

ರಾಜಾರಾಮ ಟೆಪ್ನಿಸ್‌ನಿಂದ ಸಹಾಯ ಪಡೆದು ಸಾಧನೆ ತೊಡಗುತ್ತಾಳೆ. ಆದರೆ ಕೆಲದಿನಗಳಲ್ಲಿಯೇ ಎಲ್ಲವೂ ಬೇಸರವೆನಿಸುತ್ತದೆ. ತಾನೂ ಗಂಡನನ್ನು ಬಿಟ್ಟು ಬಂದಿರುವುದು ತಪ್ಪು ಎನಿಸುತ್ತದೆ. ಕೊನೆಗೆ ಗಂಡನಿಗೆ ತನ್ನೆಲ್ಲಾ ವಿಚಾರಗಳನ್ನು ತಿಳಿಸಿ ಕ್ಷಮಿಸಬೇಕೆಂದು ಪತ್ರ ಬರೆಯುತ್ತಾಳೆ. ಗಂಡ ಇವಳ ವಿಚಾರಕ್ಕೆ ಒಪ್ಪದೆ ವಿಚ್ಛೇದನಕ್ಕಾಗಿ ವಕೀಲರಿಂದ ಪತ್ರ ಕಳಿಸುತ್ತಾನೆ. ಗಂಡನಿಂದ ವಿಚ್ಛೇದನ ಪಡೆದ ಮಧುಮಿತಾ ತೋಟದ ಮನೆಯಲ್ಲಿ ಒಂಟಿಯಾಗಿ ಕಾಲಕಳೆಯುತ್ತಾಳೆ. ಮೋಹನ್‌ಲಾಲ್ ಅವಳನ್ನು ಮದುವೆಯಾಗಲು ಬಯಸುತ್ತಾನೆ. ಅದನ್ನು ಮಧುಮಿತಾ ತಿರಸ್ಕರಿಸುತ್ತಾಳೆ. ಮೋಹನ್‌ಲಾಲ್ ಮುಂಬಯಿ ಸಂಗೀತ ಪ್ರೇಮಿ ಏರ್ಪಡಿಸಿರುವ ಬೀಳ್ಕೊಡುಗೆಯ ಸಮಾರಂಭದಲ್ಲಿ ಅಭಿಮಾನಿಗಳ ಅಪೇಕ್ಷೆಯಂತೆ ಹಾಡಲು ತೊಡಗುತ್ತಾನೆ. ಆದರೆ ರಾಗ ಹೊರಡದೇ ಅವಮಾನಿತನಾಗಿ ಸಭೆಯಿಂದ ಹೊರಟುಹೋಗುತ್ತಾನೆ. ಈ ಸಂದರ್ಭದಲ್ಲಿ ಮಧುಮಿತಾ ಅದೇ ಶುದ್ಧ ಕಲ್ಯಾಣಿರಾಗವನ್ನು ಹಾಡ ಬಯಸುತ್ತಾಳೆ. ಅಂದು ಮಧುಮಿತಾಳಿಗೆ ರಾಗವು ಸಾಧಿತವಾಗುತ್ತದೆ.

ಎಸ್.ಎಲ್.ಭೈರಪ್ಪನವರು ಮಂದ್ರ ಕಾದಂಬರಿಯ ಪ್ರಧಾನಪಾತ್ರವಾಗಿ ಮಧುಮಿತಾಳ ಪಾತ್ರವನ್ನು ಸೃಷ್ಟಿಸಿದ್ದಾರೆ. ಸಂಗೀತದ ಕಲ್ಯಾಣಿರಾಗಕ್ಕೆ ಸಮೀಕರಣವಾಗಿ ಈ ಪಾತ್ರದ ಬೆಳವಣಿಗೆಯನ್ನು ಮಾಡಿರುತ್ತಾರೆ. ಕಾದಂಬರಿಯ ಪ್ರಾರಂಭದಲ್ಲಿ ಮಧುಮಿತಾ ಇನ್ನೂ ಸಂಗೀತ ಕಲಿತಿರಲಿಲ್ಲ, ಕಲಿಯಬೇಕೆಂಬ ಅದಮ್ಯ ಬಯಕೆಯನ್ನು ಹೊತ್ತವಳಾಗಿ ಚಿತ್ರಿತಗೊಂಡಿದ್ದರೆ ಕಾದಂಬರಿಯ ಕೊನೆಯಲ್ಲಿ ಕಲ್ಯಾಣಿ ರಾಗವನ್ನು ಹಾಡುವುದರ ಮೂಲಕವಾಗಿ ಪರಿಪೂರ್ಣ ಗಾಯಕಿಯಾಗಿ ಸಂಭವಿಸುತ್ತಾಳೆ. ಕಥೆಯ ಓಟಕ್ಕೆ ಹೊಸ ತಿರುವುವನ್ನು ತರುವ ಸಲುವಾಗಿ ಕಥಾನಾಯಕಿ ಮಧುಮಿತಾಳ ಮನಸ್ಸಿನಲ್ಲಿ ಉಂಟಾಗುವ ತುಮುಲವನ್ನು ಭೈರಪ್ಪನವರು ವರ್ಣಿಸುತ್ತಾರೆ. ಓದುಗನ ನಂಬಿಕೆ ಸೆಕ್ಸ್ ಬಗ್ಗೆ ಭಾರತೀಯರ ಪರಂಪರಾಗತ ಪವಿತ್ರ ಭಾವನೆ ಮೊದಲಾದವುಗಳು ತಟಕ್ಕನೆ ಎಚ್ಚರಗೊಳ್ಳುವಂತೆ ಈ ಪಾತ್ರದ ನಿರ್ವಹಣೆ ಆಗಿದೆ.

ಸಂತೋಷಕುಮಾರ್ ಗುಲ್ವಾಡಿಯವರು ಅಭಿಪ್ರಾಯಪಡುವಂತೆ- "ಧಾರ್ಮಿಕ ಪ್ರಭಾವ ಕಡಿಮೆಯಾದಂತೆ ಸಾಹಿತ್ಯ-ಸಂಗೀತ-ಕಲೆಗಳ ಪ್ರಭಾವ ಹೆಚ್ಚಾಗಬಹುದು. ಈ ಏರಿಳಿತಗಳು ಅವರವರ ಸಂಸ್ಕಾರ ತಾರತಮ್ಯ ಜ್ಞಾನ-ಸಂಯಮಗಳನ್ನು ಹೊಂದಿಕೊಂಡಿದೆ. ಆದುದರಿಂದ ನಾವು ಎಂಥ ಸಂಗೀತ ಕೇಳುತ್ತೇವೆ; ಎಂಥ ಸಾಹಿತ್ಯ ಓದುತ್ತೇವೆ, ಎಂಥ ಕಲೆ ನೋಡುತ್ತೇವೆ ಮತ್ತು ಇಷ್ಟಪಟ್ಟು ಅದನ್ನು ನಮ್ಮದನ್ನಾಗಿ ಮಾಡಿಕೊಳ್ಳಲು ಆಸೆ ಪಡುತ್ತೇವೆ ಎಂಬುದರ ಮೇಲೆ ವ್ಯಕ್ತಿತ್ವ ನಿರ್ಣಯವಾಗುತ್ತದೆ."[೨] ಇಂಥ ಒಂದು ವ್ಯಕ್ತಿತ್ವದ ನಿರ್ಮಾಣವನ್ನು ಭೈರಪ್ಪನವರ ಮಧುಮಿತಾ ಪಾತ್ರ ಹೊಂದಿದೆ. ಒಂದು ಸಂಗೀತವನ್ನು ನಾವು ಅಭ್ಯಾಸ ಮಾಡಿಕೊಳ್ಳಬೇಕಾದರೆ ಎಷ್ಟೆಲ್ಲ ತೊಂದರೆ, ಆತಂಕ, ಅಡಚಣೆಗಳು ಇದ್ದಾವೆ ಎಂಬುದರ ಅರಿವನ್ನು ಈ ಪಾತ್ರ ರಚನೆಯ ಮೂಲಕ ಕಾದಂಬರಿಕಾರರು ಮಾಡಿಸಿದ್ದಾರೆ. ಬದುಕಿನಲ್ಲಿ ಬರುವ ಎಲ್ಲಾ ತೊಂದರೆಗಳನ್ನು ನೀಗಿಸಿಕೊಂಡು ಯಾರಿಂದ ಸಾಧನೆಮಾಡಲು ಸಾಧ್ಯವಾಗುತ್ತದೆಯೋ ಅವರಿಗೆ ಮಾತ್ರ ಸಂಗೀತ ಫಲಿಸುತ್ತದೆ ಎಂಬ ಕಾದಂಬರಿಕಾರರ ಧ್ಯೇಯ-ಧೋರಣೆಗಳಿಗೆ ಪೂರಕವಾಗಿ ಮಧುಮಿತಾಳ ಪಾತ್ರ ಬೆಳವಣಿಗೆ ಹೊಂದಿ ಓದುಗರ ಮನಸ್ಸಿನಲ್ಲಿ ಅಚ್ಚಳಿಯದ ಪಾತ್ರವಾಗಿ ಉಳಿದು ಬಿಡುತ್ತದೆ.

'ಮಂದ್ರ' ಕಾದಂಬರಿಯ ಒಟ್ಟು ಕಥಾಹಂದರದ ನಡುವೆ ಮಧುಮಿತಾ "ಮೇಟಿಕಂಬ"ದಂತೆ ನಿಂತು ಇಡೀ ಕಾದಂಬರಿಯ ಕ್ರಿಯೆಗಳನ್ನು ನಿಯಂತ್ರಿಸುತ್ತಾಳೆ. ಇದು ಕಥನ ತಂತ್ರದ ದೃಷ್ಟಿಯಿಂದ ಅತ್ಯಂತ ಪ್ರಮುಖ ಅಂಶವಾಗುತ್ತದೆ.

---

[೨] ಭೈರಪ್ಪನವರ ಕಾದಂಬರಿಗಳ ವಿಮರ್ಶೆ-ಪುಟ ೬೭. ಸಂ.ಸುಮತೀಂದ್ರನಾಡಿಗ.

## 'ಲಕ್ಷ್ಮೀ/ರಜಿಯಾ'

ಎಸ್.ಎಲ್.ಭೈರಪ್ಪನವರ ಆವರಣ ಕಾದಂಬರಿಯ ಪ್ರಮುಖ ಪಾತ್ರ ಲಕ್ಷ್ಮೀ/ರಜಿಯಾ ನರಸಾಪುರವೆಂಬ ಒಂದು ಹಳ್ಳಿಯಲ್ಲಿ ಗೌಡರ ಮನೆತನದಲ್ಲಿ ಹುಟ್ಟಿ ಬೆಳೆಯುವ ಲಕ್ಷ್ಮೀ ಆಧುನಿಕ ಶಿಕ್ಷಣವನ್ನು ಪಡೆದು ಪುಣೆಯ ಫಿಲ್ಮ್ ಇನ್ಸ್ಟ್ಯೂಟ್‌ನಲ್ಲಿ ತರಬೇತಿ ಪಡೆಯುವಾಗ ಸಹಪಾಠಿಯಾಗಿದ್ದ ಅಮೀರ್ ಎಂಬ ಮುಸ್ಲಿಂ ಯುವಕನನ್ನು ಪ್ರೀತಿಸಿ, ಮತಾಂತರಗೊಂಡು ಅವನನ್ನು ಮದುವೆಯಾಗಿ, ತನ್ನ ಹೆಸರನ್ನು ರಜಿಯಾ ಎಂದು ಬದಲಾಯಿಸಿಕೊಳ್ಳುತ್ತಾಳೆ. ಕಾಲಕ್ರಮದಲ್ಲಿ ತನ್ನ ಗಂಡನ ಮನೆಯ ಸಾಂಪ್ರದಾಯಿಕ ಮುಸ್ಲಿಂ ಮತಾಚರಣೆ-ನಂಬಿಕೆಗಳಿಂದ ಮತ್ತು ನೇರವಾಗಿ ಅವಳ ಪಕ್ಷವನ್ನು ವಹಿಸದ ಅಮೀರನ ವರ್ತನೆಯಿಂದ ಅವಳ ವೈವಾಹಿಕ ಜೀವನ ದುರ್ಭರವಾಗುತ್ತದೆ.

ಹಂಪಿಯ ಕುರಿತ ಸಾಕ್ಷ್ಯ ಚಿತ್ರ ತೆಗೆಯಲು ಗಂಡನಾದ ಅಮೀರನೊಂದಿಗೆ ಹಂಪಿಗೆ ಬಂದಿರುವ ಲಕ್ಷ್ಮೀ/ರಜಿಯಾಳಿಗೆ ಅಲ್ಲಿಯ ಭಗ್ನ ಅವಶೇಷಗಳನ್ನು ಕಂಡಾಗ ಇದು ಹೇಗಾಯಿತು ಎಂಬ ಸತ್ಯ ತಿಳಿಯುವ ಕುತೂಹಲ. ಹಂಪಿಯ ಕೆಲಸವನ್ನು ಕೈಬಿಟ್ಟು ಹಳ್ಳಿಯ ತನ್ನ ಮನೆಗೆ ವರ್ಷಗಳೇ ಕಳೆದ ಮೇಲೆ ಮರಳುತ್ತಾಳೆ. ಧರ್ಮಾಂತರಗೊಂಡ ತನ್ನನ್ನು ಹಳ್ಳಿ ಯಾವ ರೀತಿ ಸ್ವಾಗತಿಸುವುದೋ ಎಂಬ ಸಂಕೋಚ ಒಂದೆಡೆಯಾದರೆ ತಾನು ಮುಸ್ಲಿಂ ಎಂಬ ಭಾವ ಬಲಿತು ಮುಂದೇನು ಎಂಬ ಯೋಚನೆ ಕಾಡುತ್ತದೆ. ಆ ಸಮಯದಲ್ಲಿ ಆಕೆಗೆ ಅವಳ ತಂದೆಯ ಅಧ್ಯಯನ ಕೋಣೆಯಲ್ಲಿ ನೂರಾರು ಮುಸ್ಲಿಂ ಧರ್ಮ-ಇತಿಹಾಸಗಳ ಕುರಿತಾದ ಗ್ರಂಥಗಳು ಲಭ್ಯವಾದವು. ಅವರು ಓದಿದ ಗ್ರಂಥಗಳನ್ನೆಲ್ಲ ತಾನೂ ಓದಬೇಕು ಎಂದು ಕೆಲಕಾಲ ಊರಿನಲ್ಲೇ ನಿಲ್ಲುವ ನಿರ್ಧಾರ ಮಾಡುತ್ತಾಳೆ. ತನ್ನ ತಂದೆಯ ಅಧ್ಯಯನವನ್ನು ತನ್ನದಾಗಿಸಿಕೊಂಡ ರಜಿಯಾಳ ಜೀವನ ಇಲ್ಲಿಂದ ಬದಲಾಗತೊಡಗಿತು.

ವಿಜಯನಗರ ಸಾಮ್ರಾಜ್ಯದ ಬಗ್ಗೆ ತಂದೆ ಬರೆದ ಟಿಪ್ಪಣಿಗಳಿಂದ ಬೆಳಕು ಕಂಡ ಲಕ್ಷ್ಮೀಗೆ ಜೀವಿಗಳು ನೆಚ್ಚಿಕೊಂಡ ಸಿದ್ಧಾಂತಗಳಿಗನುಗುಣವಾಗಿ ಬರೆಯುವುದು ಹೇಗೆ ಎಂಬ ಅನುಮಾನ ಕಾಡಲು ಪ್ರಾರಂಭವಾಗುತ್ತದೆ. ಇದರಿಂದಾಗಿ ಅಮೀರನ ಸ್ನೇಹಿತರು ಅಮೀರನ ಸಲಹೆಯಂತೆ ಹಳ್ಳಿಗೆ ಬಂದು ಟಿಪ್ಪುವಿನ ಕುರಿತು ನಾಟಕ ಬರೆದುಕೊಡಲು ಕೇಳಿದಾಗ ನಿರಾಕರಿಸಿ, ಗಂಡನಿಗೆ ಬರೆದ ಪತ್ರದಲ್ಲಿ ಟಿಪ್ಪುವಿನ ವೈಭವೀಕರಣದ ಬಗ್ಗೆ ತಂದೆ ಬರೆದ ಟಿಪ್ಪಣಿಗಳ ಆಧಾರದಿಂದ ಕಲಾವಿದನ ಸೃಷ್ಟಿ ಸತ್ಯದ ಅಭಿವ್ಯಕ್ತಿಯಾಗಬೇಕು ಎಂದು ಗಂಡನನ್ನು ಪ್ರಶ್ನಿಸುವ ಧೈರ್ಯಕ್ಕೆ ಮುಂದಾಗುತ್ತಾಳೆ. ತಂದೆಯ ಇತಿಹಾಸದ ಅಧ್ಯಯನವನ್ನು ಅವರು ಬರೆದ ಟಿಪ್ಪಣಿಗಳನ್ನು ಓದಿದ ಮೇಲೆ ತನ್ನ ಇತಿಹಾಸದ ಕುರಿತ ಅಜ್ಞಾನವನ್ನು ಪರಿಹರಿಸಿಕೊಂಡು ತಾನೂ ನಡೆಸುತ್ತಿದ್ದ ಅಧ್ಯಯನದಿಂದ ಪ್ರಭಾವಿತಳಾಗಿ ಲಕ್ಷ್ಮೀ ಒಂದು ಕಾದಂಬರಿಯನ್ನು ಬರೆಯಲಾರಂಭಿಸುತ್ತಾಳೆ. ಹಳ್ಳಿಯ ಸಂಪರ್ಕ ಮತ್ತೆ ಬೆಳೆದು ತಾನು ಮುಸ್ಲಿಂ ಧರ್ಮವನ್ನು ಸ್ವೀಕರಿಸಿ ಗೋಮಾಂಸ ಭಕ್ಷಣೆ ಮಾಡಿದ್ದಕ್ಕೆ ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳುತ್ತಾಳೆ.

ರಾಷ್ಟ್ರದ ಪ್ರಖ್ಯಾತ ಚಿಂತಕ ಬುದ್ಧಿ ಜೀವಿ ಪ್ರೊ.ಶಾಸ್ತ್ರಿಗಳು ಮಾಡಿದ ಭಾಷಣವೊಂದನ್ನು ಆಲಿಸಿಕೊಂಡ ಲಕ್ಷ್ಮೀ ಅವರಿಗೊಂದು ಪ್ರಶ್ನೆ ಹಾಕುವುದರ ಮೂಲಕ ಇಸ್ಲಾಂ ಧರ್ಮದ ಬಗ್ಗೆ ಮಾತನ್ನಾಡಿ, ಪ್ರವಾದಿಯ ಜೀವನ, ಸ್ತ್ರೀ ಶೋಷಣೆ ಇವೆಲ್ಲವುಗಳಿಂದ ಉದಾಹರಣೆಯನ್ನು ಕೊಟ್ಟು ಇತಿಹಾಸ ಸಾಕ್ಷ್ಯಗಳನ್ನು ಬಳಸಿಕೊಂಡು ವಿವರಿಸುತ್ತಾಳೆ. ಲಕ್ಷ್ಮೀ ಉದ್ವೇಗದಿಂದ ಮಾತನಾಡಿದ ಪರಿಣಾಮದಿಂದ ಆಕೆ ಬರೆದ ಕಾದಂಬರಿಯನ್ನು ಪ್ರಕಟಿಸಲು ಯಾವ ಪ್ರಕಾಶಕರು ಮುಂದೆ ಬರುವುದಿಲ್ಲ. ತಾನೇ ಹಣ ಕೊಟ್ಟು ಸಾವಿರ ಪ್ರತಿಗಳನ್ನು ಮುದ್ರಿಸುತ್ತಾಳೆ. ರಾಷ್ಟ್ರಘಾತಕ ಕೃತಿ, ಕೋಮು ಸೌಹಾರ್ದವನ್ನು ಕದಡುವ ಕೃತಿ ಎಂಬುದಾಗಿ ಪತ್ರಿಕೆಗಳಲ್ಲಿ ಟೀಕೆ ಬರತೊಡಗಿತು.

ಇದರಿಂದ ಸರ್ಕಾರ ಕೃತಿಯನ್ನು ಮುಟ್ಟುಗೋಲು ಹಾಕಿತು. ಕೃತಿಕಾರಳಾದ ಲಕ್ಷ್ಮೀಯನ್ನು ಬಂಧಿಸಲು ಸರಕಾರ ಮುಂದಾಗುತ್ತದೆ. ಇದನ್ನು ತಿಳಿದ ಅಮೀರ ಕಾದಂಬರಿಯ ಕೊನೆಯಲ್ಲಿ ಅವಳ ನೆರವಿಗೆ ಬಂದು ಅವಳ ಗ್ರಂಥಗಳನ್ನು ಬಿಡಿಸಿಕೊಳ್ಳುವ ಆಶ್ವಾಸನೆಯನ್ನು ನೀಡುತ್ತಾನೆ.

ಲಕ್ಷ್ಮೀ/ರಜಿಯಾ ವಿದ್ಯಾವಂತೆ, ಕಲಾವಿದೆ, ಮತಾಂತರಗೊಂಡು ವಿವಾಹವಾದ ಹೆಣ್ಣು. ಪ್ರಗತಿಪರ ಮಹಿಳೆ, ಕಾಮಕ್ಕೆ ಬಿದ್ದವಳು. ಧರ್ಮ-ಶೋಷಣೆಗಳ ಇಕ್ಕಟ್ಟಿನಲ್ಲಿ ಸಿಲುಕಿ ಬೆಂದವಳು ಎಚ್ಚೆತ್ತವಳು ಕೊನೆಗೆ ಎದೆಗುಂದದೆ ಸತ್ಯವನ್ನೇ ಪ್ರತಿಪಾದಿಸುವವಳು. ತಂದೆಯು ಸಂಗ್ರಹಿಸಿದ್ದ ಸತ್ಯಾನ್ವೇಷಣಾ ಮಾಹಿತಿಯಿಂದ ಪ್ರಭಾವಿತಳಾಗಿ, ಪ್ರೀತಿಯಿಂದ ಮದುವೆಯಾಗಿದ್ದ ಗಂಡನಿಂದ ದೂರ ಸಿಡಿದು ನಿಲ್ಲುತ್ತಾಳೆ. ಈಕೆ ತನ್ನ ಅಸಾಧಾರಣ ಸಂಕಲ್ಪದಿಂದ ಧರ್ಮಾಂತರಿಯಾಗಿ ಮಗನನ್ನು ಪ್ರೀತಿಸುವ ತಾಯಾಗಿ, ಧಾರ್ಮಿಕ ರಾಜಕೀಯ ಸಾಮಾಜಿಕ ಚಾರಿತ್ರಿಕ ಸತ್ಯಗಳನ್ನು ಹುಡುಕುವ ಶೋಧಕಿಯಾಗಿ ಯಶಸ್ವಿ ಕಾದಂಬರಿಕಾರ್ತಿಯಾಗಿ ಭಾರತೀಯ ಎಡಪಂಥೀಯ ಲಾಭಕೋರ ಬುದ್ಧಿ ಜೀವಿಗಳ ಸುಳ್ಳುಗಳನ್ನು ಭೇದಿಸಿ ತನ್ನ ಸತ್ಯನಿಷ್ಠೆಯಿಂದ ಒಮ್ಮೆ ತಲಾಕ್ ಹೇಳಿದ ಅವಳ ಗಂಡ ಅಮೀರನ ಗೌರವಕ್ಕೆ ಪಾತ್ರಳಾಗುತ್ತಾಳೆ. ಹೀಗೆ ಲಕ್ಷ್ಮೀ ಕಾದಂಬರಿಕಾರರ ವೈಚಾರಿಕತೆಯ ಪ್ರತೀಕವಾದರೂ, ಅವಳು ಒಂದು ಪಾತ್ರವಾಗಿ ಲೇಖಕರ ಕೈಗೊಂಬೆಯಾಗದೆ ತನ್ನ ವ್ಯಕ್ತಿ ಸ್ವಾತಂತ್ರ್ಯವನ್ನು ಉಳಿಸಿಕೊಂಡಿದ್ದಾಳೆ. ಅವಳು ಕಮ್ಯುನಿಸ್ಟ್ ಆಗಿದ್ದವಳು. ಒಬ್ಬ ಮುಸಲ್ಮಾನ ತರುಣನನ್ನು ಮದುವೆಯಾಗಿ ಪಕ್ಕಾ ಮುಸಲ್ಮಾನ ರಜಿಯಾ ಆಗಿರಲಿಕ್ಕಾಗಿ ಮಾಂಸವನ್ನು ತಿಂದವಳು. ರಜಿಯಾ ಆಗಿರಲಿಕ್ಕಾಗಿ ತಂದೆಯ ಸಂಬಂಧವನ್ನು ಕಡಿದುಕೊಂಡವಳು. ನಾಟಕದಲ್ಲಿ ಪಾತ್ರ ವಹಿಸಿದವಳು, ಸಾಕ್ಷ್ಯಚಿತ್ರ ನಿರ್ಮಾಣಕ್ಕಾಗಿ ಹಿನ್ನಲೆ ಸಾಹಿತ್ಯ ಬರೆಯಲಿಕ್ಕೆ ಹೊರಟವಳು. ಉರ್ದು ಮಾತನ್ನಾಡಲಿಕ್ಕೆ ಕಲಿತವಳು, ಕುರಾನ್ ಅನ್ನು ಅಭ್ಯಾಸ ಮಾಡಿ ಮುಸಲ್ಮಾನ ಕೌಟುಂಬಿಕ ಆಚರಣೆಗಳನ್ನೆಲ್ಲ ಕಟ್ಟುನಿಟ್ಟಾಗಿ ಪಾಲಿಸಲಿಕ್ಕೆ ಹೊರಟವಳು.

ಪ್ರೊ.ಶಾಸ್ತ್ರಿಗಳ ಲೈಂಗಿಕ ಚೇಷ್ಟೆಗಳನ್ನು ಸಹಿಸಿಕೊಂಡವಳು. ಆದ್ದರಿಂದ ಅವಳು ಭೈರಪ್ಪನವರ ನೆರಳಾಗದೆ, ಕೈಗೊಂಬೆಯಾಗದೆ ಇರುವವಳು.

ಲಕ್ಷ್ಮೀಯ ಪಾತ್ರದ ಮೂಲಕ ಪ್ರೊಫೆಸರ್ ಶಾಸ್ತ್ರಿಯವರಂತಹ ಅನೇಕ ಸೋಗಿನ ಬುದ್ಧಿ ಜೀವಿಗಳಿಂದ, ಸ್ವಾರ್ಥ ರಾಜಕಾರಣಿಗಳಿಂದ ಹಲವಾರು ಸಿದ್ಧಾಂತಗಳಿಂದ ಐತಿಹಾಸಿಕ ಸತ್ಯವೂ ತಿರುಚಲ್ಪಟ್ಟು ವಿರೂಪಗೊಳ್ಳುತ್ತಿದೆಯೆಂಬುದು ನಿರೂಪಿಸಲ್ಪಟ್ಟಿದೆ. ಹೀಗಾಗಿ ಕಾದಂಬರಿಯ ಮುಖ್ಯ ಪಾತ್ರವೂ, ಕಾದಂಬರಿಯೊಳಗೊಂದು ಕಾದಂಬರಿಯ ಕರ್ತೃವೂ ಆಗಿ ಲಕ್ಷ್ಮೀಯು ೮ನೇ ಶತಮಾನ, ಅನಂತರದ ಅನೇಕ ಶತಮಾನಗಳ ಮತ್ತು ವರ್ತಮಾನದ ಸಾಕ್ಷೀ ಪ್ರಜ್ಞೆಯಾಗಿ ಕಾದಂಬರಿಯಲ್ಲಿ ನಿಲ್ಲುವುದರ ಮೂಲಕ ಕಾದಂಬರಿಯ ಒಟ್ಟು 'ಕಥನಶಿಲ್ಪ'ಕ್ಕೆ ಶೋಭೆಯನ್ನುಂಟು ಮಾಡಿರುವ ಅಂಶ ಗಮನಾರ್ಹವಾದುದು.

***********

ಒಟ್ಟಿನಲ್ಲಿ ಭೈರಪ್ಪನವರ ಉಳಿದ ಎಲ್ಲಾ ಕಾದಂಬರಿಗಳಿಂದ ಭಿನ್ನವಾದ ನಾಯಕಿ ಪಾತ್ರದ ರಚನೆ ಆವರಣ ಕಾದಂಬರಿಯಲ್ಲಿ ಆಗಿದೆ. ಹೆಚ್ಚಾಗಿ ಭೈರಪ್ಪನವರ ಕಾದಂಬರಿಗಳಲ್ಲಿ ಬರುವ ಸ್ತ್ರೀ ಪಾತ್ರಗಳು ಸ್ವಂತಿಕೆಯಿಲ್ಲದ ಸ್ತ್ರೀ ಪಾತ್ರಗಳಾಗಿ ರಚನೆಗೊಂಡಿರುತ್ತವೆ. ಕೆಲವು ಕಡೆ ವಿದ್ಯಾವಂತಳಾಗಿ ಸ್ವಲ್ಪ ಸ್ವಂತಿಕೆ ತೋರಿಸಿದರೂ ಅವಳನ್ನು ಸಂಪ್ರದಾಯ ಮನೋಭಾವದ ಸರಪಳಿಗಳು ಹಿಂದಕ್ಕೆ ಜಗ್ಗುತ್ತಿರುತ್ತವೆ. ಎಲ್ಲ ಚೌಕಟ್ಟುಗಳನ್ನು ಮೀರಿ ಆಕೆಯನ್ನು ಬೆಳೆಸುವುದೇ ಇಲ್ಲ. ಭೈರಪ್ಪನವರು ಸ್ತ್ರೀವಾದದ ವಿರೋಧಿಯೇನೋ ಎಂದೆನಿಸುವಂತೆ ಅವರ ಸ್ತ್ರೀ ಪಾತ್ರಗಳು ಇರುತ್ತಿದ್ದವು. ಆದರೆ ಈ ಕಾದಂಬರಿಯಲ್ಲಿ ಲಕ್ಷ್ಮೀ/ರಜಿಯಾಳ ಪಾತ್ರ ಹೇಗೆ ನಿರೂಪಿತವಾಗಿತೆಂದರೆ ೨೦ ನೆಯ ಶತಮಾನದಲ್ಲಿ ನಿಂತು ೧೪ ರಿಂದ ೧೬ನೇ ಶತಮಾನದತ್ತ ನೋಡುತ್ತಿರುವ ಕಣ್ಣು-ಮನಸ್ಸುಗಳಂತೆ.

ಲಕ್ಷ್ಮೀಯ ಪಾತ್ರವು ಶತಮಾನಗಳ ಕಾದಂಬರಿಯಲ್ಲಿ ಶತಮಾನಗಳ ಹಿಂದಿನದಾದ ಖ್ವಾಜಾ ಜಹಾನನ ಪಾತ್ರಕ್ಕೆ ಪ್ರತಿಯಾಗಿ ರೂಪಿಸಲ್ಪಟ್ಟಿದ್ದು ತನ್ನನ್ನೇ ಅಪಾಯಕ್ಕೊಡ್ಡಿಕೊಳ್ಳುವುದನ್ನು ಲೆಕ್ಕಿಸದೆ, ಯಾರಿಗೂ ಯಾವುದಕ್ಕೂ ಹೆದರದೆ, ವೈಯಕ್ತಿಕ ಸಮಸ್ಯೆ, ದೌರ್ಬಲ್ಯಗಳನ್ನು ಹಿಮ್ಮೆಟ್ಟಿ, ಅಸತ್ಯವನ್ನು ಪ್ರತಿಭಟಿಸುತ್ತಾಳೆ. ಸತ್ಯಶೋಧನೆ, ಸತ್ಯವನ್ನು ಉದ್ಘೋಷಿಸುವ ಧೀರಶಕ್ತಿ, ಆಳವಾದ ಅಧ್ಯಯನ, ಸೃಜನಶೀಲತೆಗಳಿಂದಾಗಿ ಲಕ್ಷ್ಮೀಯ ಪಾತ್ರದಲ್ಲಿ ಸ್ತ್ರೀಯ ಶಕ್ತಿಯ ಅಂತಃಸತ್ವ ಸಂಪೂರ್ಣ ವಿಕಸನ ಹೊಂದಿದೆಯೆನಿಸುತ್ತದೆ. ಖಾಸಗೀ ಜೀವನದ ದುಃಖ ದುಮ್ಮಾನಗಳು, ಸಾಮಾಜಿಕ ಕಷ್ಟನಿಷ್ಠುರಗಳನ್ನೇ ಪೋಷಕ ದ್ರವ್ಯವನ್ನಾಗಿಸಿಕೊಂಡು ತಲೆಯೆತ್ತಿ ಅರಳಿ ನಿಲ್ಲುವ ಗಟ್ಟಿ ಹೂ ಲಕ್ಷ್ಮೀ.

ಭೈರಪ್ಪನವರ ಒಟ್ಟು ಸ್ತ್ರೀ ಪಾತ್ರ ಸೃಷ್ಟಿಯ ಕೌಶಲ್ಯತೆಯನ್ನು ಪರಿಶೀಲಿಸಿದಾಗ ಮುಖ್ಯವಾಗಿ ಕಂಡುಬರುವ ವಿಚಾರ- ಅವರ ಪ್ರತಿ ಕಾದಂಬರಿಯಲ್ಲಿನ

ಸ್ತ್ರೀ ಪಾತ್ರಗಳೆಲ್ಲವೂ ಕೊನೆಯಲ್ಲಿ ಸೋಲನ್ನು ಅನುಭವಿಸುವುದು. ವೈಚಾರಿಕವಾಗಿ ಹೆಣ್ಣಿನ ಬದುಕನ್ನು ಮೇಲಕ್ಕೆತ್ತಲು ಪ್ರಯತ್ನಿಸಿರುವ ಭೈರಪ್ಪನವರಿಗೆ ಹೀಗೆ ಎತ್ತಲೂ ಯಾವ ಕಾದಂಬರಿಯ ಮೂಲಕವು ಸಾಧ್ಯವಾಗಲಿಲ್ಲ.

'ವಂಶವೃಕ್ಷ'ದಲ್ಲಿ ಕಾತ್ಯಾಯನಿ ಪಾತ್ರವನ್ನು ವಿಧವಾ ವಿವಾಹ ತತ್ವನ್ನು ಪ್ರತಿ ಪಾದಿಸುವವಳನ್ನಾಗಿ ಚಿತ್ರಿಸಿ, ಕೊನೆಯಲ್ಲಿ ಆಕೆ ತಾನು ಮಾಡಿಕೊಂಡ ಇನ್ನೊಂದು ಮದುವೆಯೇ ತನಗೆ ಆಗುತ್ತಿರುವ ಗರ್ಭಪಾತಕ್ಕೆ ಕಾರಣವೆಂಬ ಕೊರಗಿನಲ್ಲಿಯೇ ಅನಾರೋಗಿಯಾಗಿ ಕೊನೆಯುಸಿರು ಎಳೆಯುವಂತೆ ಮಾಡುತ್ತಾರೆ. 'ಅಂಚು' ಕಾದಂಬರಿಯ ಡಾ॥ ಅಮೃತ ಸ್ವತಂತ್ರವಾಗಿ ಬದುಕಲು ಹೊರಟು ಕೊನೆಗೆ ಮಾನಸಿಕವಾಗಿ ಹದಗೆಡುತ್ತಾಳೆ. ಮನೋರೋಗಿ ಆಗುತ್ತಾಳೆ. ಇದೇ ರೀತಿಯಲ್ಲಿ ಅಂತರ್ಜಾತಿಯ ವಿವಾಹಕ್ಕೆ ಪ್ರಯತ್ನಿಸಿರುವ ಇವರ 'ದಾಟು' ಕಾದಂಬರಿಯ ನಾಯಕಿ ಸತ್ಯಭಾಮ, ಮೊದಲು ಸಮಾಜವಾದ ಪರಿವರ್ತನೆ ತನ್ನಿಂದಲೇ ಪ್ರಾರಂಭವಾಗಬೇಕೆಂಬ ಹಂಬಲದಿಂದ, ಕೆಳ ವರ್ಗದ ಶ್ರೀನಿವಾಸನನ್ನು ಮದುವೆಯಾಗಲು ಮುಂದಾಗುತ್ತಾಳೆ. ಅದು ನಡೆಯದೇ ಇದ್ದಾಗ ತನ್ನ ತಂದೆಯ ಆಸ್ತಿಯಲ್ಲಿ ಹೋಗಿ ನೆಲಸಿ ಮತ್ತೇ ಪುನಃ ಬ್ರಾಹ್ಮಣತ್ವವನ್ನು ಒಪ್ಪಿಕೊಂಡ ಹಾಗೆ ಇದ್ದು ಬಿಡುತ್ತಾಳೆ. ಇವರ ಇತ್ತೀಚಿನ ಕಾದಂಬರಿ 'ಆವರಣ'ದಲ್ಲಿಯ ಲಕ್ಷ್ಮೀಯ ಪಾತ್ರವು ಕೂಡ ಇದೆ ರೀತಿಯಲ್ಲಿ, ಅಂತರ್‌ಧರ್ಮದ ಮದುವೆ ಮಾಡಿಕೊಂಡು ಅಂತರ್‌ಧರ್ಮದ ವಿವಾಹವನ್ನು ಪ್ರೋತ್ಸಾಹಿಸುವವಳಂತೆ ಕಂಡು ಬಂದರೂ; ಕೊನೆಯಲ್ಲಿ ತಂದೆಯನ್ನು ಕಳೆದು ಕೊಂಡನಂತರ ತನ್ನ ಧರ್ಮಕ್ಕೆ ವಾಪಸು ಆಗುತ್ತಾಳೆ.

ಹೀಗೆ ಭೈರಪ್ಪನವರು ವೈಚಾರಿಕವಾದ ವಸ್ತುವನ್ನಿರಿಸಿಕೊಂಡು ಕಾದಂಬರಿಯನ್ನು ರಚಿಸಿದರೂ ಕೂಡಾ ಸಂಪೂರ್ಣವಾಗಿ ಅವರು ಸೃಷ್ಟಿಸಿರುವ ಪಾತ್ರಗಳು ವೈಚಾರಿಕವಾಗಿ ಬೆಳೆಯಲು ಸಾಧ್ಯವಾಗಲಿಲ್ಲ. ಇದಕ್ಕೆ ಭೈರಪ್ಪನವರ

ಸನಾತನವಾದಿ ಧೋರಣೆಯೂ ಕಾರಣವಾಗಿದ್ದಿರಬಹುದು. ಭಾರತೀಯ ತತ್ವಶಾಸ್ತ್ರವನ್ನು ಆಳವಾಗಿ ಅಧ್ಯಯನ ಮಾಡಿಕೊಂಡಿರುವ ಕಾದಂಬರಿಕಾರರು, ವೈಚಾರಿಕವಾಗಿ ಆಧುನಿಕವಾಗಿ ನಾವು ಎಷ್ಟೇ ಎತ್ತರಕ್ಕೆ ಬೆಳೆದರೂ ಕೂಡಾ ನಮ್ಮ ಸಂಸ್ಕೃತಿ ನಮ್ಮನ್ನು ಆಳಕ್ಕೆ ಸೆಳೆಯುತ್ತದೆ ಎಂಬುದನ್ನು ಈ ಮೂಲಕ ಪ್ರಚುರಗೊಳಿಸಲು ಹೊರಟಿರುವಂತೆ ಕಂಡುಬರುತ್ತದೆ.

ಇವರ ಕಾದಂಬರಿಗಳಲ್ಲಿ ಹೆಣ್ಣು ಅತಿಯಾಗಿ ಕಾಮುಕಳಾಗಿ ಕಂಡುಬಂದಿರಬಹುದು. ಆದರೆ ಆಧುನಿಕವಾಗಿ ಪಾಶ್ಚಾತ್ಯರ ಪ್ರಭಾವದಿಂದಾಗಿ ಹೆಣ್ಣು ತಾನೆಷ್ಟು ತೆರೆದು ಕೊಂಡರು ಕೂಡಾ, ಭಾರತೀಯ ಸನಾತನ ಸಂಸ್ಕೃತಿ ಅವಳನ್ನು ಹಾಗೆಯೇ ಮುಂದುವರಿಯಲು ಬಿಡುವುದಿಲ್ಲ ಎಂಬುದನ್ನು, ಇವರು ಪಾತ್ರಗಳ ಬದುಕಿನ ಹಿನ್ನಲೆಯಿಂದ ಬೋಧಿಸುತ್ತಾರೆ. ಇಂತಹ ಬೋಧನಾತ್ಮಕವಾದ ಪಾತ್ರಗಳನ್ನು ಸೃಷ್ಟಿಸಿ ಕಥನ ತಂತ್ರವನ್ನು ಗಟ್ಟಿಗೊಳಿಸುವುದರಿಂದಲೇ ಭೈರಪ್ಪನವರು ಜನಮನವನ್ನು ಗೆದ್ದಿರುತ್ತಾರೆ.

***************

# ಪುರುಷ ಪಾತ್ರ ಸೃಷ್ಟಿ

ಭೈರಪ್ಪನವರು ತಮ್ಮ ೨೦ ಕಾದಂಬರಿಗಳ ಮೂಲಕ ಅಸಂಖ್ಯಾತ ಸ್ತ್ರೀ ಪಾತ್ರಗಳನ್ನು ಸೃಷ್ಟಿಸಿರುವಂತೆಯೇ, ಅಸಂಖ್ಯಾತ ಪುರುಷ ಪಾತ್ರಗಳನ್ನು ಸೃಷ್ಟಿಸಿರುತ್ತಾರೆ. ಇವರ ಕಾದಂಬರಿಗಳಲ್ಲಿ ದೊರಕುವ ಪುರುಷ ಪಾತ್ರಗಳು ಮಾನವ ಸ್ವಭಾವಕ್ಕೆ ಹಿಡಿದ ಕನ್ನಡಿಗಳಾಗಿವೆ. ಒಟ್ಟು ಮಾನವ ಸಂಬಂಧಗಳ ವಿವಿಧ ಮುಖಗಳನ್ನು ಪರಿಚಯಿಸುವ ಹಲವಾರು ಪುರುಷ ಪಾತ್ರಗಳನ್ನು ಇವರು ಸೃಷ್ಟಿಸಿರುತ್ತಾರೆ. 'ಧರ್ಮಶ್ರೀ' ಕಾದಂಬರಿಯ ಸತ್ಯನಾರಾಯಣ, 'ದೂರಸರಿದರು' ಕಾದಂಬರಿಯ ವಸಂತ-ಅನಂತ, 'ವಂಶವೃಕ್ಷ'ದ ಶ್ರೀನಿವಾಸ ಶ್ರೋತ್ರಿ ಡಾ॥ ಸದಾಶಿವರಾಯ, 'ನಾಯಿನೆರಳು'ವಿನ ಕ್ಷೇತ್ರಪಾಲ, 'ಜಲಪಾತದ ಶ್ರೀಪತಿ, 'ಗ್ರಹಣ'ದ ಸನ್ಯಾಸಿ, 'ನಿರಾಕರಣ'ದ ನರಹರಿ, 'ಗೃಹಭಂಗ'ದ ಚನ್ನಿಗರಾಯ 'ಸಾಕ್ಷಿ'-ಕಾದಂಬರಿಯ ಪರಮೇಶ್ವರಯ್ಯ, 'ಅಂಚು'ವಿನ ಸೋಮಶೇಖರ, 'ತಂತು'ವಿನ ರವೀಂದ್ರ, 'ಸಾರ್ಥದ' ನಾಗಭಟ್ಟ, 'ಮಂದ್ರ'ದ ಮೋಹನ್‌ಲಾಲ್, 'ಆವರಣ'ದ ಶಾಸ್ತ್ರಿಯ ಪಾತ್ರವು ಓದುಗನ ನೆನಪಿಂಗಳಗಳಲ್ಲಿ ಅಚ್ಚಳಿಯದೇ ಉಳಿಯವಂತಹವುಗಳು. ಇವುಗಳಲ್ಲಿ ವಂಶವೃಕ್ಷದ ಶ್ರೀನಿವಾಸ ಶ್ರೋತ್ರಿ ಡಾ॥ ಸದಾಶಿವರಾಯ, 'ಜಲಪಾತ'ದ ಡಾ॥ ನಾಡಗೌಡ, 'ತಬ್ಬಲಿ ನೀನಾದೆ ಮಗನೇ' ಕಾದಂಬರಿಯ ಕಾಳಿಂಗ, 'ನಿರಾಕರಣ'ದ ನರಹರಿ, 'ನೆಲೆ' ಕಾದಂಬರಿಯ ಜವರಾಯಿ, 'ಸಾಕ್ಷಿ'ಯ ಮಂಜಯ್ಯ, 'ತಂತು'ವಿನ ರವೀಂದ್ರ, 'ಸಾರ್ಥ'ದ ನಾಗಭಟ್ಟ, 'ಮಂದ್ರ'ದ ಮೋಹನ್‌ಲಾಲ್ – ಈ ಪಾತ್ರಗಳನ್ನು 'ಕಥನಶಿಲ್ಪ'ದ ಹಿನ್ನೆಲೆಯ ಪ್ರಸ್ತುತ ಅಧ್ಯಯನದಲ್ಲಿ ವಿವೇಚನೆ ನಡೆಸಲಾಗಿದೆ.

## 'ಶ್ರೀನಿವಾಸ ಶ್ರೋತ್ರಿ'

ಶ್ರೀನಿವಾಸ ಶ್ರೋತ್ರಿ ಎಸ್.ಎಲ್.ಭೈರಪ್ಪನವರ 'ವಂಶವೃಕ್ಷ' ಕಾದಂಬರಿಯ ಪ್ರಧಾನ ಪುರುಷ ಪಾತ್ರ. 'ವಂಶವೃಕ್ಷ'ವು ಸನಾತನ ಮೌಲ್ಯ ವ್ಯವಸ್ಥೆಯ ನೆಲೆಯಿಂದ ಆಧುನಿಕ ಜೀವನದಲ್ಲಿ ಆ ಮೌಲ್ಯ ವ್ಯವಸ್ಥೆಯ ಮರು- ಹೊಂದಾಣಿಕೆಯ ಬಗ್ಗೆ ಯೋಚಿಸುತ್ತಾ ರಚಿಸಿದ ಕಾದಂಬರಿ. ಈ ಉದ್ದೇಶದಿಂದಲೇ ಸೃಷ್ಟಿಗೊಂಡ ಪಾತ್ರ ಶ್ರೀನಿವಾಸ ಶ್ರೋತ್ರಿ ಅವರದ್ದು. ಯುಗ ಸಂಧಿಕಾಲದ ಮೌಲ್ಯಗಳ ಸಂಘರ್ಷವನ್ನು ಗಂಡು-ಹೆಣ್ಣಿನ ಸಂಬಂಧ ಹಾಗೂ ಸಂತಾನಾಭಿವೃದ್ಧಿಯ ಸಮಸ್ಯೆಗೆ ಕೇಂದ್ರೀಕರಿಸಿ, ಆ ಮೂಲಕ ಮೂರು ಮುಖಗಳಲ್ಲಿ ಸಂಘರ್ಷದ ವಿವಿಧ ಪದರುಗಳ ವಿವೇಚನೆಗೆ ತೊಡಗಿದ ಕಾದಂಬರಿಕಾರರು ಶ್ರೋತ್ರಿಗಳ ಜೀವನವನ್ನೇ ಆಧಾರ ಮಾಪಕವಾಗಿರಿಸಿ ಕೊಂಡಿರುವುದು ಗಮನಾರ್ಹವಾದ ಅಂಶ.

ಶ್ರೀನಿವಾಸ ಶ್ರೋತ್ರಿಗಳ ಪ್ರಕಾರ ಸಂಸಾರವನ್ನನುಭವಿಸುವುದೇ ಜೀವನದ ಪರಮಗುರಿಯಲ್ಲ. ವಂಶೋತ್ಪತ್ತಿಗಾಗಿ ಗೃಹಸ್ಥ ಜೀವನ. ವಂಶ ಬೆಳೆದ ಮೇಲೆ ಅಕಸ್ಮಾತ್ ಗೃಹವು ನಷ್ಟವಾದರೆ ಪುನಃ ಅದಕ್ಕೆ ತಿರುಗಿ ಹೋಗುವುದು ಧರ್ಮವಲ್ಲ. ಇದು ಸನಾತನಧರ್ಮ ಒಪ್ಪಿಕೊಂಡ ಮೌಲ್ಯವ್ಯವಸ್ಥೆ. ಈ ಮೌಲ್ಯವ್ಯವಸ್ಥೆಯನ್ನು ಶ್ರೀನಿವಾಸ ಶ್ರೋತ್ರಿಯವರ ವೈಯಕ್ತಿಕ ಬದುಕಿನಲ್ಲಿ ರೂಢಿಸಿ ತೋರಿಸುವ ಪ್ರಯತ್ನವನ್ನು ಕಾದಂಬರಿಕಾರರು ಮಾಡಿರುತ್ತಾರೆ. ತನ್ನ ದೈಹಿಕ ದೌರ್ಬಲ್ಯದಿಂದ ಸಂಸಾರ ಸುಖವನ್ನು ಪತಿಗೆ ನೀಡಲು ಅಸಮರ್ಥಳಾದ ಭಾಗೀರಥಿ, ಶ್ರೋತ್ರಿಯವರು ಇನ್ನೊಂದು ಮದುವೆ ಮಾಡಿಕೊಳ್ಳಬೇಕೆಂದು ತಾನೆ ಸೂಚಿಸಿದಾಗ ಕೂಡ ಶ್ರೋತ್ರಿಯರು ಅದಕ್ಕೆ ಒಪ್ಪುವುದಿಲ್ಲ.

ಮದುವೆಯಾಗುವುದೇ ಗೃಹಸ್ಥ ಕರ್ಮಗಳ ನಿರ್ವಹಣೆಗಾಗಿ ಮತ್ತು ವಂಶೋದ್ಧಾರಕ್ಕಾಗಿ .ಈಗ ವಂಶೋದ್ಧಾರಕ್ಕಾಗಿ ಪುತ್ರ ಹುಟ್ಟಿದ್ದಾನೆ. ಗೃಹಸ್ಥ ಜೀವನಕ್ಕೆ ಅವಳು ಜೀವಂತ ಇದ್ದಾಳೆ. ಪುನಃ ಮದುವೆಯಾಗುವದು ಅಧರ್ಮ. ಪ್ರಕೃತಿ ಧರ್ಮದ ವಿರುದ್ಧ ಹೋರಾಡುವುದು ಕೂಡ ಸಾಧ್ಯವೆಂಬುದನ್ನು, ಶ್ರೋತ್ರಿಯರು ತಮ್ಮ ಬದುಕಿನಲ್ಲೇ ಲಕ್ಷ್ಮೀಯಿಂದ ಒದಗಬಹುದಾಗಿದ್ದ. ಲೌಕಿಕ ಸುಖವನ್ನು ತಿರಸ್ಕರಿಸಿ ಸಾಧಿಸಿ ತೋರಿಸುತ್ತಾರೆ. ಮೌಲ್ಯಗಳನ್ನು ಎತ್ತಿ ಹಿಡಿಯುವ ಹಂಬಲವುಳ್ಳ ಭೈರಪ್ಪನವರು ಅಸಾಧ್ಯವಲ್ಲದಿದ್ದರೂ ಅಸಾಮಾನ್ಯವಾದ ರೀತಿಯ ನಾಯಕ(ಶ್ರೋತ್ರಿ) ಪಾತ್ರವನ್ನು ಸೃಷ್ಟಿಸಿರುತ್ತಾರೆ. ಇದರಿಂದಾಗಿ ಶ್ರೋತ್ರಿಯರು ಲಕ್ಷ್ಮೀಯನ್ನು ತಿರಸ್ಕರಿಸುವ ಮೂಲಕ ತಮ್ಮ ಜೀವನ ಶ್ರದ್ಧೆಯನ್ನು ಕಾಪಾಡಿಕೊಂಡು ತಾವು ಒಪ್ಪಿಕೊಂಡ 'ದರ್ಶನ'ವನ್ನು ವಿಭಿನ್ನವಾಗಿ ಉಳಿಸಿಕೊಳ್ಳುತ್ತಾರೆ. ಗೃಹಸ್ಥ ಧರ್ಮದ ಬಗ್ಗೆ ತಾವು ಒಪ್ಪಿಕೊಂಡು ಬಂದ ಮೌಲ್ಯ ಯಾವುದಿದೆಯೋ ಅದನ್ನೆ ತಮ್ಮ ಸೊಸೆ ಕಾತ್ಯಾಯನಿಗೂ ಶ್ರೋತಿಯರು ಬೋಧಿಸುತ್ತಾರೆ. ಅವಳಿಗೆ ಈಗಾಗಲೇ ತೀರಿಹೋದ ಗಂಡನಿಂದ ಮಗು ಇದೆ ಮತ್ತು ಗೃಹವು ನಷ್ಟವಾಗಿದೆ. ಆದುದರಿಂದ ಮತ್ತೆ ಅವಳು ಗೃಹಸ್ಥ ಧರ್ಮವನ್ನು ಸ್ವೀಕರಿಸಬಾರದು. ಇದೇ ಧರ್ಮ ಎಂಬ ನಿಲುವಿಗೆ ಬರುವಷ್ಟು ಸನಾತನ ಮೌಲ್ಯ ಪ್ರಜ್ಞೆಯನ್ನು ರಕ್ತಗತ ಮಾಡಿಕೊಂಡವರಂತೆ ಶ್ರೀನಿವಾಸ ಶ್ರೋತ್ರಿ ಪಾತ್ರ ಸೃಷ್ಟಿಯಾಗಿದೆ.

ವಂಶದ ಪಾವಿತ್ರ್ಯ ಸಾತತ್ಯದ ಬಗ್ಗೆ ಅಷ್ಟೊಂದು ಹಚ್ಚಿಕೊಂಡಿದ್ದ ಶ್ರೋತ್ರಿಯ ಪಾತ್ರವು ತಮ್ಮ ಬದುಕಿನ ಕೊನೆಯ ಘಟ್ಟದಲ್ಲಿ ಇನ್ನೊಂದು ಅನಿರೀಕ್ಷಿತವಾದ ಆಘಾತವನ್ನು ಅನುಭವಿಸುವಂತೆ ಮಾಡುತ್ತಾರೆ. ಜೀನಿ ಯಾವ ವಂಶದ ಹಕ್ಕೆಂದು ಪ್ರತಿಪಾದಿಸಿ, ಮಗುವನ್ನು ಕಾತ್ಯಾಯನಿಗೆ ತಾವೇ ಕೈಯೆತ್ತಿ ಕೊಡಲು ಶ್ರೋತ್ರಿಯರು ನಿರಾಕರಿಸಿದ್ದರೋ, ಆ ವಂಶಕ್ಕೆ ತಾನೇ ಹಕ್ಕುದಾರನಲ್ಲವೆಂಬುದು ಈ ಪಾತ್ರದ ದುರಂತ. ತನ್ನ ತಂದೆ ಆಸ್ತಿಯನ್ನು ಉಳಿಸಿಕೊಳ್ಳಬೇಕೆಂಬ ಅಪವಿತ್ರ ಆಕಾಂಕ್ಷೆಯಿಂದ ಹರಿಕಥೆ ದಾಸನೊಬ್ಬನಿಂದ ತನ್ನನ್ನು ಪಡೆದರೆಂಬ ಕಠೋರಸತ್ಯ ತಿಳಿದಾಗ ಒಂದು ಕ್ಷಣ

ಶ್ರೋತ್ರಿಯರ ವ್ಯಕ್ತಿತ್ವ ಕಂಪನಕ್ಕೊಳಗಾಗುತ್ತದೆ. ಆದರೆ ಒಂದು ಕ್ಷಣ ಮಾತ್ರ ಮತ್ತೆ ತಮ್ಮ ಸ್ಥಿತಪ್ರಜ್ಞತೆಯನ್ನು ಅವರು ಯಥಾಪ್ರಕಾರ ಸಾಧಿಸುತ್ತಾರೆ. ಶ್ರದ್ಧೆಯಿಂದ ನಂಬಿಕೊಂಡ ಸನಾತನ ಧರ್ಮ ಅವರಿಗೆ ನೀಡಿದ ಅಪೂರ್ವ ಶಕ್ತಿಯೆಂಬುದು ಕಾದಂಬರಿಕಾರರ ಅಭಿಮತ. ತಾವು ಗೌರವ ಪ್ರೀತಿಯಿಂದ ಬೆಳೆಸಿಕೊಂಡು ಬಂದ ಪಾತ್ರವನ್ನು ಇಂಥಹ ಕಠೋರ ಸತ್ಯದರ್ಶನದಿಂದ ವಿಕಂಪಿತಗೊಳಿಸುವಲ್ಲಿ ಕಲಾವಿದನಾಗಿ ಭೈರಪ್ಪನವರು ತಮ್ಮ ಶಕ್ತಿಯನ್ನು ಪ್ರದರ್ಶಿಸಿದ್ದಾರೆ.

ಶ್ರೀನಿವಾಸ ಶ್ರೋತ್ರಿಯವರ ಪಾತ್ರವು ಕಾದಂಬರಿಗೆ ಬೆನ್ನೆಲುಬು ಇದ್ದ ಹಾಗೆ, ಕಥಾ ನಾಯಕಿಯಾದ ಕಾತ್ಯಾಯನಿಯ ಮಾವ. ಸದಾಶಿವರಾಯರ ಗುರುಗಳು ಆದ ಶ್ರೋತ್ರಿಯವರು ಕಾದಂಬರಿಯ ಕೇಂದ್ರ ಪಾತ್ರವಾಗಿ ಸೃಷ್ಟಿ ಗೊಂಡಿದ್ದಾರೆ. ಸನಾತನ ಧರ್ಮದ ಪ್ರತೀಕವೂ ಆಗಿದ್ದಾರೆ. ಶ್ರೋತ್ರಿಗಳ ಪಾತ್ರಯಾವುದೇ ಅರ್ಥದಲ್ಲಿ ಶುಷ್ಕ ಪಾಂಡಿತ್ಯ ಪಡೆದ ಸಿದ್ಧಾಂತ ವ್ಯಕ್ತಿಯಾಗಿ ಚಿತ್ರಿತಗೊಂಡಿಲ್ಲ. ಅವರ ಜೀವನದಲ್ಲಿ ಬಂದ ಒಂದೊಂದು ವಿಷಯವೇ ಅವರ ನಂಬುಗೆಗಳನ್ನು ಒರೆಗೆ ಹಚ್ಚುತ್ತದೆ. ಹೊರಜಗತ್ತು ಬಲವಂತದಿಂದ ವ್ಯಕ್ತಿಯ ಮೇಲೆ ಹೊರುವ ಕಟ್ಟಳೆಗಳು ಧರ್ಮದ ಪೂರ್ಣ ರೂಪವಲ್ಲ ಎಂಬುದರಲ್ಲಿ ಅವರಿಗೆ ವಿಶ್ವಾಸವಿದೆ. ಈ ಪಾತ್ರ ಸಂಪೂರ್ಣವಾಗಿ ಸನಾತನ ಧರ್ಮದಲ್ಲಿಯೇ ಜೀವಿಸಿದರೂ ಕೂಡ ತಮ್ಮ ಜೀವನದ ಕೊನೆಯ ಭಾಗದಲ್ಲಿ ಅಪರೋಕ್ಷವಾಗಿಯಾದರೂ ತಮ್ಮ ಜೀವನ ದೃಷ್ಟಿಯನ್ನು ಬದಲಿಸಿ ತೋರಿಸುತ್ತದೆ. ಎಂಥಕೆಟ್ಟ ಸಂಗತಿಯನ್ನು ಜೀರ್ಣಿಸಿಕೊಳ್ಳುವ ಶಕ್ತಿ ಈ ಪಾತ್ರಕ್ಕಿದೆ. ಕೆಲವೊಂದು ಸಂದರ್ಭದಲ್ಲಿ ಉದಾತ್ತವಾದ ಪಾತ್ರವಾಗಿಯೂ ಚಿತ್ರಿತಗೊಂಡಿದ್ದಾರೆ. ಉದಾ: ಕಾತ್ಯಾಯನಿಯ ಗಂಡ - ನಂಜುಂಡ ಶ್ರೋತ್ರಿ ತೀರಿಕೊಂಡಾಗ ಕಾತ್ಯಾಯನಿಗೆ ಮಡಿ ಮಾಡಿಸುವ ಪ್ರಸ್ತಾಪ ತನ್ನ ಹೆಂಡತಿಯ ಕಡೆಯಿಂದ ಬಂದಾಗ ಪರೆಯದ ಹೆಣ್ಣಿಗೆ ಮಡಿ ಮಾಡಿಸುವುದರಲ್ಲಿ ಯಾವ ಅರ್ಥವೂ ಇಲ್ಲವೆನ್ನುವ ವಿಚಾರ.

ಕಾದಂಬರಿಯ ಕಥೆ ಎಲ್ಲ ಸಂಘರ್ಷಗಳನ್ನು ತೂಗಿಕೊಂಡು ಹೋಗಬಲ್ಲ ಎತ್ತರದ ವ್ಯಕ್ತಿಯನ್ನು ಅಪೇಕ್ಷಿಸುತ್ತದೆ. ಈ ದೃಷ್ಟಿಯಲ್ಲಿ ಎಲ್ಲ ಹೊಡೆತಗಳನ್ನು ನುಂಗಬಲ್ಲ ಸಮಚಿತ್ತ ಸಂಯಮ ಭಾವನೆಯ ಶ್ರೋತ್ರಿ ಪಾತ್ರವನ್ನು ಎಲ್ಲರೂ ಮೆಚ್ಚುವಂತೆ ಚಿತ್ರಿಸಿದ್ದಾರೆ. ಶ್ರೋತ್ರಿಯ ಪಾತ್ರ ಸೃಷ್ಟಿಮಾಡಿ ಕಾದಂಬರಿಕಾರರು ನಿರ್ಲಿಪ್ತತೆಯಿಂದ ಕಾದಂಬರಿಯುದ್ದಕ್ಕೂ ಇದ್ದು ಬಿಡುತ್ತಾರೆ. ಅಂದರೆ ಶ್ರೀನಿವಾಸ ಶ್ರೋತ್ರಿ ಹೇಳಿದ್ದೆಲ್ಲ 'ವೇದವಾಕ್ಯ' ಎಂಬ ಧ್ವನಿಯಲ್ಲಿ ಅವರ ಪಾತ್ರ ಚಿತ್ರಣ ಮೂಡಿಬಂದಿದೆ. 'ಇವು ಶ್ರೀನಿವಾಸ ಶ್ರೋತ್ರಿಯರ ನಂಬುಗೆಗಳು' ಎಂದು ಬೆರಳು ಮಾಡಿ ತೋರಿಸಬಹುದಾದ ನಿರ್ಲಿಪ್ತತೆಯನ್ನು ಸಾಧಿಸಿದ್ದಾರೆ.

ಜೀವನದಲ್ಲಿ ದ್ವಂದ್ವ ಸಾಮಾನ್ಯವಾದದ್ದು ಯಾವುದೇ ಒಂದು ಮಾರ್ಗದಲ್ಲಿ ನಡೆದರೂ ಜೀವನದಲ್ಲಿ ದ್ವಂದ್ವ ಉಂಟಾಗುತ್ತದೆ. ಎಂದು ಶ್ರೋತ್ರಿಯರು ಹೇಳುವ ಮಾತು ಬಹಳಮಟ್ಟಿಗೆ ಅವರನ್ನೊಳಗೊಂಡು ಎಲ್ಲರಿಗೂ ಅನ್ವಯಿಸುವುದು. ಈ ಕಾರಣದಿಂದಾಗಿ 'ವಂಶವೃಕ್ಷದ' ಪಾತ್ರ ಸೃಷ್ಟಿಯ 'ಕಥನಶಿಲ್ಪ'ವು ಶ್ರೀನಿವಾಸ ಶ್ರೋತ್ರಿಯವರನ್ನು ಎಲ್ಲರ ಮನದಲ್ಲಿ ನೆಲೆ ನಿಲ್ಲಿಸಿದೆ.

***************

## 'ಡಾ॥ ಸದಾಶಿವರಾಯರು'

ಎಸ್.ಎಲ್.ಭೈರಪ್ಪನವರ ಜನಪ್ರಿಯ ಕಾದಂಬರಿಯಾದ 'ವಂಶವೃಕ್ಷದ' ಒಂದು ವಿಶಿಷ್ಟವಾದ ಪಾತ್ರ ಡಾ॥ ಸದಾಶಿವರಾಯರದು, ಸಾಮಾನ್ಯವಾಗಿ ವಿಜ್ಞಾನಿಗಳು ವಿದ್ವಾಂಸರು, ಕಲಾವಿದರು ಯಾವುದೋ ಒಂದು ಉದ್ದೇಶಕ್ಕಾಗಿ, ಗುರಿಗಾಗಿ, ಮಹತ್ತರವಾದ ಕಾರ್ಯಸಾಧನೆಗಾಗಿ ತಮ್ಮ ಜೀವನವನ್ನು ಮುಡಿಪಾಗಿಡುವುದುಂಟು. ಅಂಥವರ ಸಾಲಿನಲ್ಲಿ ವಂಶವೃಕ್ಷದ ಡಾ॥ ಸದಾಶಿವರಾಯರು ಒಬ್ಬರು, ತಮ್ಮ ಜೀವನವನ್ನು ಸಂಶೋಧನೆಗಾಗಿ ತೇಯ್ದಿರುವ ಇವರು ಭಾರತದ ಸಾಂಸ್ಕೃತಿಕ ಇತಿಹಾಸವನ್ನು ಐದು ಸಂಪುಟಗಳಲ್ಲಿ ಹೊರತಂದವರು. ಈ ಗ್ರಂಥ ನಿರ್ಮಾಣ ಮತ್ತು ಅವರ ಜೀವನ ಇವೆರಡರ ನಡುವೆ ಯಾವ ವ್ಯತ್ಯಾಸವು ಇಲ್ಲದಂತಾಗಿ ನಿದ್ರೆ ಆಹಾರ ಮೊದಲಾದ ಕೆಲಸಗಳು ಅವರ ಪ್ರಜ್ಞಾ ಜೀವನದ ಹೊರಗೆ ತಮ್ಮ ಪಾಡಿಗೆ ತಾವು ನಡೆದು ಹೋಗುವ ಕ್ರಿಯೆಗಳಾಗಿದ್ದವು.

ಸದಾಶಿವರಾಯರ ಜೀವನ ವಿದ್ವತ್ ಪ್ರಪಂಚಕ್ಕೆ ಕಳಸಪ್ರಾಯ. ಮುಂದಿನ ಪೀಳಿಗೆಗೆ ಆದರ್ಶ. ಗ್ರಂಥರಚನೆಯೇ ತಮ್ಮ ಜೀವನವೆಂಬ ತಾದಾತ್ಮ್ಯ ಭಾವ ಅವರದ್ದು ರಾಯರು ಸ್ನೇಹಜೀವಿ. ಓದು ಬರಹದ ಹೊರತಾಗಿ ಉಳಿದೆಲ್ಲ ವಿಷಯದಲ್ಲಿ ಇವರು ನಿರಾಸಕ್ತರಾಗಿದ್ದರು.

ಇಂಥ ಘನವ್ಯಕ್ತಿತ್ವವುಳ್ಳರನ್ನಾಗಿ ಸದಾಶಿವರಾಯರ ಪಾತ್ರವನ್ನು ಚಿತ್ರಿಸಿರುವ ಕಾದಂಬರಿಕಾರರು, ಅವರ ವ್ಯಕ್ತಿತ್ವದ ದೌರ್ಬಲ್ಯದ ಅಂಶವನ್ನು ಅದೇ ಸಮಯದಲ್ಲಿ ಚಿತ್ರಿಸಿರುವುದು ಗಮನಾರ್ಹವಾಗಿದೆ. ಈಗಾಗಲೇ ಮದುವೆಯಾಗಿ ಒಂದು ಗಂಡು ಮಗುವನ್ನು ಹೊಂದಿರುವ ರಾಯರು ತನ್ನ ಬೃಹತ್ ಗ್ರಂಥ ನಿರ್ಮಾಣ ಕಾರ್ಯಕ್ಕಾಗಿ ತನ್ನದೇ ವಿದ್ಯಾರ್ಥಿನಿಯಾದ ಕರುಣಾರತ್ನೆಯನ್ನು ಮದುವೆಯಾಗುತ್ತಾರೆ.

ರಾಯರ ಮೊದಲ ಸಂಪುಟವು ಅವಳ ಸಹಾಯದಿಂದ ಐದು ವರ್ಷಗಳ ಬದಲಿಗೆ ಮೂರು ವರ್ಷಗಳಲ್ಲಿಯೇ ಹೊರ ಬರಲು ಸಾಧ್ಯವಾಗಿತ್ತು. ಇದರಿಂದ ರಾಯರಿಗೆ ತಮ್ಮ ಮುಂದಿನ ಸಂಪುಟ ರಚನೆಗೆ ಕರುಣಾರತ್ನೆಯ ಕೃತು ಶಕ್ತಿಯ ನೆರವಿಲ್ಲದೆ, ಬರಿಯ ತಮ್ಮ ಶಕ್ತಿಯಿಂದಲೇ ಮುನ್ನಡೆಯುವುದು ನಿರಸವಾದ ಸಾಧನೆ ಅನಿಸಿತು. "ಸತತವಾಗಿ ನಾವಿಬ್ಬರು ಕೂಡಿಯೇ ಕೆಲಸ ಮಾಡಬೇಕಾದ್ದರಿಂದ, ಸಮಾಜದ ನಿಂದೆಗೊಳಗಾಗಬಾರದೆಂದು ತಮಗೊಂದು ನೈತಿಕ ಬಂಧನ ಬೇಕಾದ್ದರಿಂದ ಮದುವೆಯಾಗೋಣ"[೧] ಎಂದಿರುವ ಸದಾಶಿವರಾಯರು ಕೇವಲ ಕಾರ್ಯಸಾಧನೆಗಾಗಿ ಕರುಣಾರತ್ನೆಯನ್ನು ಮದುವೆಯಾಗಿರುವುದು ಎನ್ನುವ ವಿಚಾರ ದೃಢವಾಗುತ್ತದೆ. ರಾಯರು ಮತ್ತು ರತ್ನೆಗೆ ಅವರು ಬಯಸಿದ್ದೆಲ್ಲ ಸಿಗುವಂತೆ ಅವರು ಒಂದುಗೂಡಿದ ಉದ್ದೇಶವು ಈಡೇರುವಂತೆ ಮಾಡಿಸಿರುವ ಕಾದಂಬರಿಕಾರರು ರಾಯರ ನಾಗಲಕ್ಷ್ಮೀಗೆ ಅನ್ಯಾಯವೆಸಗುವಂತೆ ಮಾಡುತ್ತಾರೆ. ನಾಗಲಕ್ಷ್ಮೀ ಗಂಡನಿದ್ದು ವಿರಾಗಿಣಿಯಂತೆ ಬಾಳಬೇಕಾಗುತ್ತದೆ. ಸದಾಶಿವರಾಯರ ವಿದ್ವತ್ ಪ್ರಪಂಚದಲ್ಲಿ ಗೌರವಾನ್ವಿತರಾಗಿದ್ದರೂ ಮಗ ಹೆಂಡತಿಯ ವಿಚಾರದಲ್ಲಿ ಕರ್ತವ್ಯ ಹೀನರಾಗಿದ್ದರು. ಇದರ ಪರಿಣಾಮ ತಂದೆ ಜಗತ್‌ಪ್ರಸಿದ್ಧ ಇತಿಹಾಸಕಾರರಾದರೂ ಮಗ ಅದರ ಬಗ್ಗೆ ಪೂರ್ತಿ ಅಜ್ಞಾನಿಯಾದ. ಹೆಂಡತಿ ಮೈದುನನ ಬಾಯಿಯಿಂದ ಗಂಡನ ಸಾಧನೆಯನ್ನು ಕೇಳಿ ಅಭಿಮಾನ ಪಡಬೇಕಾಗಿ ಬಂತು. ಇದ್ಯಾವ ಹಿರಿತನ!–ಎನ್ನುವಂತೆ ಭಾರತೀಯ ಸಾಂಸ್ಕೃತಿಕ ಇತಿಹಾಸವನ್ನು ಬರೆಯಹೊರಟವರು ಸಾಂಸಾರಿಕವಾದ ಸಂಸ್ಕೃತಿಯನ್ನೇ ಮರೆತಿರುವಂತೆ ಸದಾಶಿವರಾಯರ ಪಾತ್ರ ರೂಪುಗೊಂಡಿದೆ. ಇದನ್ನು ಕಾದಂಬರಿಕಾರರು ಕಾದಂಬರಿಯ ಕೇಂದ್ರ ಪಾತ್ರವಾದ ಶ್ರೀನಿವಾಸ ಶ್ರೋತ್ರಿಯವರ "ಈ ಗ್ರಂಥ ನಿರ್ಮಾಣಕ್ಕಾಗಿ ಈ ವಿವಾಹವಾದದ್ದು ಅಂತ ನೀವು ಹೇಳ್ತೀರಿ. ಗ್ರಂಥವು ಬುದ್ಧಿ ಶಕ್ತಿಯ ಸಾಧನೆ. ಬುದ್ಧಿ ತತ್ವವೂ ಪ್ರಕೃತಿಯ ಒಂದು ಅವಸ್ಥೆ. ಬುದ್ಧಿಯ ಸಾಧನೆಗೆ ಸಿಲುಕಿ, ಆ ಸಾಧನೆಗಾಗಿಯೇ

---

[೧] 'ವಂಶವೃಕ್ಷ' ಪುಟ ೧೪೧. .ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೧೯೬೭

ಮಾಡಿಕೊಂಡ ಬೇರೊಂದು ಮದುವೆಯೂ ಪ್ರಕೃತಿಯ ಒಂದು ಆಕರ್ಷಣೆಯೇ ಕೇವಲ ಶಾರೀರಿಕ ಆಕರ್ಷಣೆಯಿಂದ ಕೆಲವರು ಬೇರೆ ಮದುವೆ ಮಾಡಿಕೊಳ್ತಾರೆ. ಅದಕ್ಕಿಂತ ಇದು ಉತ್ತಮವಾದ ಆಕರ್ಷಣೆಯಾದರೂ ಮೂಲತಃ ಭಿನ್ನವಾದುದಲ್ಲ. ನಿಜವಾದ ಜ್ಞಾನಸಿದ್ಧಿ ಬುದ್ಧಿಯನ್ನು ಮೀರಿದುದು. ಅದಕ್ಕೆ ಯಾರ ಸಹಾಯವೂ ಬೇಡ. ಆತ್ಮದ ಕೂಗು ಗಟ್ಟಿಯಾಗಿದ್ದರೆ ಸಾಕು"[೨], ಈ ಮಾತುಗಳ ಮೂಲಕ ಸದಾಶಿವರಾಯರ ಕೃತಿಯನ್ನು ಖಂಡಿಸುತ್ತಾರೆ. ಬದಲಾಗುತ್ತಿರುವ ಸಾಮಾಜಿಕ ಚೌಕಟ್ಟಿನಲ್ಲಿ ವಿವಾಹದ ಧ್ಯೇಯವೇ ಬದಲಾಗುತ್ತಿದೆ-ಎಂಬುದನ್ನು ಸದಾಶಿವರಾಯರ "ಮನುಷ್ಯನ ಜೀವನವು ಯಾವ ಸಾಧನೆಗಾಗಿ ತಲುಪಿಸುತ್ತಿದೆಯೋ ಅಂತಹ ಸಾಧನೆಗೆ ಅಡ್ಡ ಬರುವ ವಿವಾಹಕ್ಕೆ ಯಾವ ಬೆಲೆ ಇದೆ? ಆ ಜೀವನ ಧ್ಯೇಯದ ಸಿದ್ಧಿಗಾಗಿ ಮಾಡಿಕೊಂಡ ವಿವಾಹವನ್ನು ಪ್ರಕೃತಿಯ ಪ್ರಭಾವದಿಂದ ಆದದ್ದು ಅಂತ ಹೇಗೆ ಹೇಳುವುದು?"[೩] – ಈ ಮಾತುಗಳ ಮೂಲಕ ಕಾದಂಬರಿಕಾರರು ತಿಳಿಸಲು ಪ್ರಯತ್ನಿಸಿದರೂ ಕೂಡ ಅವರ ಉದ್ದೇಶ ಇದೇ ಆಗಿರಲಿಲ್ಲ, ಅದನ್ನು ಕಾದಂಬರಿಯಲ್ಲಿ ಮುಂದೆ ಬರುವ ಶ್ರೀನಿವಾಸ ಶ್ರೋತ್ರಿಯವರ ಇನ್ನೊಂದು ಮಾತಿನ ಮೂಲಕ ತಂದಿರುವುದು ಗಮನಾರ್ಹವಾಗಿದೆ. '. . .ತಿಳಿದೋ ತಿಳಿಯದೆಯೋ ನಾವು ಮಾಡಿಕೊಂಡ ವಿವಾಹವನ್ನು, ಅದಕ್ಕೆ ಸಂಬಂಧಿಸಿದ ಬೇರೊಂದು ಜೀವದ ಯಾವ ತಪ್ಪು ಇಲ್ಲದೆ ಹೇಗೆ ಲಘುವಾಗಿ ಕಾಣುವದು?' ತಮ್ಮ ವೈವಾಹಿಕ ಜೀವನವನ್ನು ಜ್ಞಾಪಿಸಿಕೊಳ್ಳುತ್ತ "ನನಗೂ ಕೆಲವು ಸಲ ಹಾಗೆಯೇ ಅನಿಸುತ್ತಿತ್ತು. ನಾನು ಸದಾ ಕೂತು ಸಂಸ್ಕೃತ ಗ್ರಂಥಗಳ ಅಧ್ಯಯನ ಮಾಡುತ್ತಿದ್ದೆ. ನನ್ನಲ್ಲಿಯೇ ವೇದಾಂತ, ತರ್ಕ ಮೀಮಾಂಸೆಗಳನ್ನು ಮನನ ಮಾಡಿಕೊಂಡು ತಿರುವಿ ಹಾಕುತ್ತಿದ್ದೆ. ಸಂಸ್ಕೃತದ ಗಂಧವಿಲ್ಲದ ಹೆಂಗಸು ನನ್ನ ಹೆಂಡತಿ ಕನ್ನಡದಲ್ಲಿ ನಾಲ್ಕು ಪಂಕ್ತಿಯ ಒಂದು ಕಾಗದ ಬರೆಯೂದು ಸಹ ಬರುತ್ತಿರಲಿಲ್ಲ. ಆದರೂ ಭಕ್ತಿಯಿಂದ

---

[೨] 'ವಂಶವೃಕ್ಷ' ಪುಟ ೩೩೨. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೧೯೬೭.
[೩] 'ವಂಶವೃಕ್ಷ' ಪುಟ ೩೩೩. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೧೯೬೭.

ಪತಿಸೇವೆ ಮಾಡುತ್ತಿದ್ದಳು. ವಂಶಾಭಿವೃದ್ಧಿಗೆ ಒಬ್ಬ ಮಗನನ್ನು ಕೊಟ್ಟಳು ದೇವತಾರ್ಚನಿಗಾಗಿ ಹೂ, ಗಂಧಗಳನ್ನು ಸಿದ್ಧ ಪಡಿಸುತ್ತಿದ್ದಳು. ಬುದ್ಧಿ ಶಕ್ತಿಯ ಸ್ತರದಲ್ಲಿ ಅರ್ಥಾರ್ಥ ಸಂಬಂಧವಿರಲಿಲ್ಲ, ಆದರೆ ಉತ್ತಮ ಧರ್ಮಪತ್ನಿಯೇ ಆಗಿದ್ದಳು."[೪] ಎಂದು ಅಪರೋಕ್ಷವಾಗಿ ಸದಾಶಿವರಾಯರು ಮಾಡಿದ್ದು ತಪ್ಪು ಎನ್ನುವ ಅಭಿಪ್ರಾಯ ಮೂಡುವಂತೆ ಅವರ ವ್ಯಕ್ತಿತ್ವದ ದೌರ್ಬಲ್ಯವನ್ನು ಪರಿಚಯಿಸುತ್ತಾರೆ.

ಸದಾಶಿವರಾಯರು ವಿದ್ವತ್ ಪ್ರಪಂಚದ ಕಣ್ಮಣಿಯಾಗಿದ್ದವರು. ತಾವು ಹಿಡಿದ ಕೆಲಸವನ್ನು ತಾವೊಬ್ಬರೇ ನಿರ್ವಹಿಸಬಲ್ಲವರಾಗಿದ್ದರು. ರಾಯರಲ್ಲಿ ಅಂತಹ ಧೀಮಂತ ಶಕ್ತಿ ಇತ್ತು. ಆದರೂ ರತ್ನೆ ಇಲ್ಲದೆ ನಾನೇ ಕೆಲಸ ನಿರ್ವಹಿಸಲಾರೆ ಎಂಬ ದೌರ್ಬಲ್ಯಕೊಳ್ಳಗಾಗುತ್ತಾರೆ. ಅದರಂತೆ ರತ್ನೆಯನ್ನು ಅವಲಂಬಿಸುತ್ತಾರೆ. ಸಂಕಲ್ಪ ದೃಥವಾಗಿದ್ದರೆ ಯಾರೂ ಇನ್ನೊಬ್ಬರನ್ನು ಅವಲಂಬಿಸಬೇಕಾಗಿಲ್ಲ. ಹಾಗೆಯೇ ಅವರು ಗುರಿಮುಟ್ಟಿದ ಮಹತ್ ಸಾಧನೆಯಲ್ಲಿ ಇದೊಂದು ಅಲ್ಪ ಸಂಗತಿಯೆಂದು ಕಡೆಗಣಿಸಲು ಸಾಧ್ಯವಿಲ್ಲವಂತೆ ಕಾದಂಬರಿಕಾರರು ಈ ಪಾತ್ರ ಚಿತ್ರಣವನ್ನು ಮಾಡಿರುತ್ತಾರೆ.

ಒಟ್ಟಿನಲ್ಲಿ ಕಾದಂಬರಿಕಾರರು ಡಾ॥ ಸದಾಶಿವರಾಯ ಅವರ ಪಾತ್ರದ ಮೂಲಕ ಭಾರತೀಯ ಸಾಂಸಾರಿಕವಾದ ಸಂಸ್ಕೃತಿಯ ಬಗ್ಗೆ ಅದರ ಮೌಲ್ಯ ಹಾಗೂ ಪವಿತ್ರತೆಯ ಬಗ್ಗೆ ತಿಳಿಸುತ್ತಾರೆ. ಯಾರು ನಮ್ಮ ಸಂಸ್ಕೃತಿಯಿಂದ ದೂರ ನಿಂತು ವಿದ್ವತ್ತಿನಿಂದ ಎಲ್ಲವನ್ನು ಸಾಧಿಸುತ್ತೇನೆಂಬ ಹಂಬಲವನ್ನು ಇರಿಸಿಕೊಳ್ಳುತ್ತಾರೋ ಅಂಥವರು ಬದುಕಿನಲ್ಲಿ ಅಸಹಾಯಕತೆಯನ್ನು, ನಿರ್ವೀರ್ಯತೆಯನ್ನು ಅನುಭವಿಸುತ್ತಾರೆ. ಅಲ್ಲದೆ ಸಂಸ್ಕೃತಿಯನ್ನು ಮರೆತು ನಾವು ಬದುಕಲು ತೊಡಗಿದರೆ ಜೀವನದಲ್ಲಿ ಮುಟ್ಟಿರುವ ಸಾಧನೆ ಯಶಸ್ಸು ಮತ್ತು ಜ್ಞಾನಗಳು ಅಸಫಲವೆನಿಸುತ್ತವೆ

[೪] 'ವಂಶವೃಕ್ಷ' ಪುಟ ೩೩೪. ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ. ಬೆಂಗಳೂರು ೧೯೬೭.

ಎಂಬುದಾಗಿ ಜನಮನದಲ್ಲಿ ಅಭಿಪ್ರಾಯ ಮೂಡುವಂತೆ ಸದಾಶಿವರಾಯರ ಪಾತ್ರ ಕೌಶಲ್ಯತೆಯಿಂದ ಮೂಡಿ ಬಂದಿದೆ.

******************

## 'ಡಾ॥ ನಾಡಗೌಡರು'

ಎಸ್.ಎಲ್.ಭೈರಪ್ಪನವರ 'ಜಲಪಾತ' ಕಾದಂಬರಿ ಕಲಾವಿದನೊಬ್ಬನ ಕುರಿತಾದ ಕಾದಂಬರಿಯಾದರೂ, ಅಲ್ಲಿ ಬರುವ ಹೃದಯ ಕಲುಕುವ ಇನ್ನೊಂದು ಪಾತ್ರ ಡಾ॥ ನಾಡಗೌಡರರದು. 'ಜಲಪಾತ' ಕಾದಂಬರಿಯ ಮುಖ್ಯ ಪಾತ್ರ ಶ್ರೀಪತಿಯ ಕಥಾಭಾಗದ ಜತೆಗೆ ಉಪಕಥೆಯಾಗಿ ಬಂದರೂ ನಾಡಗೌಡರ ಪಾತ್ರ, ಕಾದಂಬರಿಯಲ್ಲಿ ತನಗೆ ಸಿಕ್ಕಷ್ಟೇ ಅವಕಾಶದಲ್ಲಿ ತನ್ನತನದ ಪ್ರಭಾವವನ್ನು ಓದುಗರ ಮೇಲೆ ಬೀರಿ ಕೊನೆಗೆ ಕರುಣೆಯ ಮೂರ್ತಿಯಾಗಿ ನೆನಪಿನಲ್ಲುಳಿಯುತ್ತದೆ.

ಡಾ॥ನಾಡಗೌಡರು ಮುಂಬೈ ವೆಟನರಿ ಕಾಲೇಜಿನಲ್ಲಿ ಗೈನಕಾಲಜಿಯ ಪ್ರೊಫೆಸರ್. ನಾಡಗೌಡ ದಂಪತಿಗಳಿಗೆ ಮಕ್ಕಳಿರುವುದಿಲ್ಲ. ಇವರ ಪತ್ನಿಗೆ ಸ್ತ್ರೀ ಸಹಜವಾದ ಮಕ್ಕಳ ಬಯಕೆ ಇತ್ತು. ಆದರೆ ನಾಡಗೌಡರಿಗೆ ಮಕ್ಕಳು ಬೇಡವೆನಿಸುವ ವಿಚಿತ್ರವಾದ ಸ್ವಭಾವವಿತ್ತು. ನಾಡಗೌಡರು ಪಶುಸಂಶೋಧನೆಯಲ್ಲಿ ತಲ್ಲೀನರು. ಪಶುಗಳಿಗೆ ಅನ್ವಯಿಸುವುದು ಮನುಷ್ಯರಿಗೂ ಅನ್ವಯಿಸುತ್ತದೆ ಎಂಬುದು ಅವರ ಅಭಿಪ್ರಾಯ. ಸ್ವೀಡನ್ ದೇಶಕ್ಕೆ ಹೋಗಿ ಎಫ್.ಆರ್.ವಿ.ಸಿ.ಎಸ್. ಪದವೀಧರರಾದ ಈ ಡಾಕ್ಟರರಿಗೆ ನಿತ್ಯ ಜೀವನದಲ್ಲೂ ವಿಜ್ಞಾನವನ್ನು ಅನುಸರಿಸುವ ಬಯಕೆ. ನಾಡಗೌಡರಿಗೆ ಬೇಕಾದುದು ನಮ್ಮ ದೇಶದ ಸಮಸ್ಯೆಯಾದ ಜನನ ನಿಯಂತ್ರಣವಲ್ಲ, ಜನನ ನಿರ್ದೇಶನ. ಒಳ್ಳೇ ಮರಿ ಈಯಲು ಎಲ್ಲ ಪ್ರಾಣಿಗಳು ಹೇಗೆ ಯೋಗ್ಯವಲ್ಲವೋ, ಹಾಗೆ ಮನುಷ್ಯರೂ ಕೂಡ. ಎಲ್ಲ ಗಂಡು ಹೆಣ್ಣುಗಳೂ ಸಮರ್ಥ ತಂದೆ-ತಾಯಿಯಾಗಲಾರರು. ಅನುವಂಶಿಕವಾಗಿ ನಿರೋಗಿಗಳಾಗಿದ್ದು, ಮೇಲ್ಮಟ್ಟದ ಬುದ್ಧಿಶಕ್ತಿಯನ್ನು ಹೊಂದಿ ಸಧೃಡ ಶರೀರದ ಗಂಡಸರು ಹೆಂಗಸರು ಮಾತ್ರ ತಂದೆ-ತಾಯಿಗಳಾಗಬೇಕು. ಉಳಿದವರು ಮದುವೆಯಾದರೂ ಮಕ್ಕಳಾಗಬಾರದು. ದುರ್ಬಲ, ರೋಗಿ, ಬುದ್ಧಿಹೀನ ಸಂತಾನ ಬೆಳೆಯುವುದಕ್ಕೆ ಅವಕಾಶ ಕೊಡಬಾರದೆನ್ನುವ ನಿಲುವಿಗೆ ಬಂದಿದ್ದರು.

ನಾಡಗೌಡರು ಹುಚ್ಚು ಕಲ್ಪನೆಯ ಪಶುವೈದ್ಯರಲ್ಲ. ಹೊಸಯುಗದ ವಿಚಾರವನ್ನು ಅದರ ತಾರ್ಕಿಕ ನಿಷ್ಕರ್ಷೆಯವರೆಗೂ ಮುಟ್ಟಿಸಿದ ವೈಚಾರಿಕರು. ಹೊಸಯುಗದ ವಿಚಾರವನ್ನು ಸತ್ಯವೆಂದು ಭ್ರಮಿಸಿ ಅನುಸರಿಸ ಹೊರಟ ಅವರು ದುರಂತ ತಂದುಕೊಂಡರು, ನಾಡಗೌಡರು ಕೇವಲ ಪಶುವೈದ್ಯರಾಗಿ ಸಂಶೋಧಕರಾಗಿ ಈ ವಿಚಾರ ಮಾಡಲಿಲ್ಲ, ಅದನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡರು. ಸುಧಾಬಾಯಿಗೆ ಮಕ್ಕಳಾಗಬೇಕೆಂಬ ಬಯಕೆ ಹೆಚ್ಚಿದಂತೆ ನಾಡಗೌಡರ ವಿಚಾರವು ದೃಢವಾಗುತ್ತ ಹೋಗುತ್ತದೆ. ಮಕ್ಕಳೇ ಬೇಡವೆಂದು ಆಪರೇಶನ್ ಮಾಡಿಸಿಕೊಳ್ಳುತ್ತಾರೆ. ನಮ್ಮ ಹೆಣ್ಣು ಮಕ್ಕಳು ಬಡತನವನ್ನು ಸಂತೋಷದಿಂದ ಸಹಿಸಿಯಾರು, ಬಂಜೆತನವನ್ನು ಮಾತ್ರ ಸಹಿಸಲಾರರೂ ಮಾತೃತ್ವದಲ್ಲೇ ಸ್ತ್ರೀ ವಿಕಾಸ, ಇದು ಅವರ ಜೀವನ ಮೌಲ್ಯ ಆ ಮೌಲ್ಯಕ್ಕೆ ಹೊರತಾಗಿ ಬಾಳುವುದೆಂದರೆ ಅವರಿಗೆ ಜೀವನವೇ ಇಲ್ಲ. ಯಾವುದು ಸುಧಾಳಿಗೆ ಜೀವನ ಮೌಲ್ಯವಾಗಿತ್ತೋ ಅದು ನಾಡಗೌಡರಿಗೆ ಅಪಮೌಲ್ಯವಾಗಿತ್ತು. ಈ ಇಜ್ಜೋಡು ದಾಂಪತ್ಯ ಯಾವ ರೀತಿ ಕೊನೆಗೊಳ್ಳಬೇಕಾಗಿತ್ತೋ ಆ ರೀತಿಯಲ್ಲಿ ಕೊನೆಗೊಳ್ಳುವಂತೆ ನಾಡಗೌಡರ ಪತ್ನಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಮಡದಿ ಆತ್ಮಹತ್ಯೆ ಮಾಡಕೊಂಡ ಕೆಲವು ದಿನಗಳಲ್ಲಿ ನಾಡಗೌಡರು ಮೊದಲಿನ ವ್ಯಕ್ತಿಯಾಗಿ ಉಳಿಯುವುದಿಲ್ಲ. ವಿಪರೀತವಾಗಿ ಸೂಳೆಗೇರಿಗೆ ಹೋಗುವುದು, ವಿಪರೀತವಾಗಿ ಮದ್ಯ ಸೇವಿಸುವುದು ಮಾಡತೊಡಗಿದರು. ಅನಂತರ ಮಾರ್ಫಿನ್ ಇಂಜೆಕ್ಷನ್ ತೆಗೆದುಕೊಂಡು ಸಾವನ್ನು ಅಪ್ಪುತ್ತಾರೆ. ಇಲ್ಲಿ ವಿಚಾರವಾದಿ ನಾಡಗೌಡರು ಸ್ವಲ್ಪ ವಿವೇಕದಿಂದ ವರ್ತಿಸಿದ್ದರೆ ಆಗುವ ಅನಾಹುತ ತಪ್ಪಿಸಬಹುದಾಗಿತ್ತು. ಅವರ ಪ್ರಾಮಾಣಿಕತೆ ಒಪ್ಪುವಂತಹುದು. ಆದರೆ ಸತ್ಯವನ್ನು ಆಚರಣೆಯಲ್ಲಿ ತರುವುದು ಅವರು ತಿಳಿದುಕೊಂಡಷ್ಟು ಸುಲಭವಲ್ಲ. ಜೀವನ ಕಸಾಯಿಖಾನೆಯಲ್ಲಿ ವಿಜ್ಞಾನವನ್ನು ನೂರಕ್ಕೆ ನೂರರಷ್ಟೂ ಉಪಯೋಗಿಸಿ ಯಶಸ್ಸುಗಳಿಸುವ ಸಂಶೋಧನಾಯಲವೂ ಅಲ್ಲ. ಅದಕ್ಕೆ ತನ್ನದೇ ಆದ ನೀತಿ ನಿಯಮಗಳಿವೆ. ಬಳಸುವ ರಸಾಯನ ಪ್ರಮಾಣಗಳು ಹೆಚ್ಚು

ಕಡಿಮೆಯಾದರೆ ಸ್ಫೋಟವಾಗುವಂತೆ ನೀತಿ ನಿಯಮಗಳಲ್ಲಿ ಹೆಚ್ಚು ಕಡಿಮೆಯಾದರೆ ಅಲ್ಲಿ ಸ್ಫೋಟಗೊಳ್ಳುವುದು ನಿಶ್ಚಿತ. ಹೊಸ ಪ್ರಯೋಗ ಕಂಡುಹಿಡಿಯುವ ವಿಜ್ಞಾನಿ, ತನ್ನ ಪ್ರಯೋಗ ಶಾಲೆಯಲ್ಲಾದ ದುರ್ಘಟನೆಗೆ ತಾನೇ ಆಹುತಿಯಾದಂತೆ. ನಾಡ ಗೌಡರು ತಮ್ಮ ಪ್ರಯೋಗಕ್ಕೆ ತಮ್ಮ ದಾಂಪತ್ಯವನ್ನೇ ಆಹುತಿಯಾಗಿ ಕೊಟ್ಟು ಕೊಂಡರು. ಯಾವುದೋ ವೈಜ್ಞಾನಿಕ ಭಾವದಲ್ಲಿ ತಾನು ಇದ್ದದ್ದನ್ನು ಇದ್ದಂತೆ ಹೇಳಿದ ನಾಡಗೌಡರ ಸರಳವಾದ ಪ್ರಾಮಾಣಿಕತೆ ಸ್ವಭಾವವೇ ಅವರ ಬಗ್ಗೆ ಅನುಕಂಪ ಹುಟ್ಟಿಸುವುದು. ಜೊತೆಗೆ ಕಾದಂಬರಿಯ 'ಕಥನಶಿಲ್ಪ'ಕ್ಕೆ ಸರಳ-ಪ್ರಾಮಾಣಿಕ ಸತ್ಯ ಗುಣಗಳ ಸಾಕ್ಷಾತ್ಕಾರ ರೂಪವನ್ನು ಒದಗಿಸಿ, ಕಾದಂಬರಿಯ ಒಟ್ಟಂದದ ಮೆರುಗನ್ನು ಅಧಿಕಗೊಳ್ಳಿಸಿರುವುದು ಗಮನಾರ್ಹವಾದ ಅಂಶವಾಗಿದೆ.

**************

## 'ಕಾಳಿಂಗ'

ಎಸ್.ಎಲ್.ಭೈರಪ್ಪನವರ 'ತಬ್ಬಲಿಯು ನೀನಾದೆ ಮಗನೇ' ಕಾದಂಬರಿಯ ಪ್ರಮುಖ ಪಾತ್ರ ಕಾಳಿಂಗ. ಈತ ಗೊಲ್ಲ ವಂಶದ ಕಾಳಿಂಗಜ್ಜನ ಮೊಮ್ಮಗ. ಕಾಳಿಂಗ ಸಾಂಪ್ರದಾಯಕ ಕುಂಟುಂಬದಲ್ಲಿ ಜನಿಸಿದರೂ ಅಮೆರಿಕದಂತಹ ಕೈಗಾರೀಕರಣಗೊಂಡಿರುವ ದೇಶದಿಂದ ಉನ್ನತ ವ್ಯಾಸಂಗ ಮಾಡಿ ಬಂದವನು. ಅಮೆರಿಕಾದಲ್ಲಿ ಕೃಷಿ ಪದವಿ ಪಡೆಯಲು ಹೋದ ಕಾಳಿಂಗ ತನ್ನ ಸಹಪಾಠಿ ಹಿಲ್ಡಾಳಲಿ ಅನುರಕ್ತನಾಗಿ ಅವಳನ್ನು ವಿವಾಹವಾಗುತ್ತಾನೆ. ತನ್ನ ದೇಶದ ಕೃಷಿಯನ್ನು ವೈಜ್ಞಾನೀಕರಣಗೊಳಿಸಿ, ಹೆಚ್ಚಿನ ಬೆಳೆ ತೆಗೆದು ಇಲ್ಲಿನ ಬಡತನವನ್ನು ನಿರ್ಮೂಲನಗೊಳಿಸುವ ಬಯಕೆ ಕಾಳಿಂಗನ ಈ ವಿವಾಹದ ಹಿಂದಿನ ಉದ್ದೇಶ.

ಅಜ್ಜನ ಮರಣದ ನಂತರ ಕಾಳಿಂಗ ವಿದೇಶದಿಂದ ಮರಳಿ ಬಂದು ಹಿಲ್ಡಾಳೊಂದಿಗೆ ಭಾರತದಲ್ಲಿ ನೆಲೆಸುವುದಕ್ಕಾಗಿ ಊರ ಹೊರಗೆ ಫಾರ್ಮ್‌ಹೌಸ್ ಕಟ್ಟಿಸುತ್ತಾನೆ. ಈತನ ವಿದೇಶೀ ಹೆಂಡತಿ, ಸುಧಾರಿತ ಕೃಷಿ, ಇವೆಲ್ಲವೂ ಗ್ರಾಮಸ್ಥರಲ್ಲಿ ಕುತೂಹಲದ ಜೊತೆಗೆ ಭಯವನ್ನು ಹುಟ್ಟಿಸುತ್ತದೆ. ಕಾಳಿಂಗ ಹಾಲು ಕೊಡದ ಮುದಿ ಆಕಳನ್ನು ಮಾರುವುದು, ಗದ್ದೆಯಲ್ಲಿ ತಂಬಾಕು ಬೆಳೆಸುವುದು, ಪವಿತ್ರ ಕಲ್ಯಾಣಿಯಲ್ಲಿ ಈಜಾಡುವುದು, ಅದರ ನೀರನ್ನು ತನ್ನ ತೋಟಕ್ಕೆ ಬೆಳೆಸುವುದು ಹಾಗೂ ಈತನ ಹೆಂಡತಿಯ ಅಮಾನವೀಯ ವ್ಯವಹಾರಗಳ ವಿರುದ್ಧ ತಾಯಿ ಹಾಗೂ ಗ್ರಾಮಸ್ಥರು ಧ್ವನಿಯೆತ್ತುತ್ತಾರೆ. "..... ಗೋದನ ಇದ್ದು ಕಟುಕನಿಗೆ ಕೊಟ್ಟಿದೀಯಾ ಅಂತ ಊರ್ನಲ್ಲಿ ಏಳಿ ನಿನ್ ಮನೆಗೆ ಯಾವನೂ ಬಾರದಂಗ ಕಟ್ ಮಾಡಿಸ್‌ಬುಡ್ತೀನಿ ಕಂಡ್ಯಾ? ಗೌಡಜ್ಜನ ಮನೆ ಅಂತ ನಾನ್ ಸುಮ್ಕಿದೀನಿ ತಿಳ್ಕ. ನೀನ್ ಇದ್ಯಾವಂತ ಅಂತ ಯಾವ

ನನ್ ಹೆಂಡ್ತಿ ಮಗನೂ ಹ್ಯದರ್‌ಕೊಳಾಕ್ಕಿಲ್ಲ?[೧] 'ಕಲ್ಯಾಣಿಯಲ್ಲಿ ನೀರಿನ ಪಂಪು ಹಾಕಿದ್ದು ತಪ್ಪು, ದೇವರ ಅಭಿಷೇಕದ ನೀರು ಅಪವಿತ್ರವಾಗುತ್ತದೆ. ದೇವರಿಗಾಗಿ ಕಟ್ಟಿಸಿದ ಕಲ್ಯಾಣಿಯನ್ನು ಸ್ವಂತಕ್ಕಾಗಿ ಬಳಸುವ ಅಧಿಕಾರ ಕಾಳಿಂಗನಿಗಿಲ್ಲ. ದೇವಸ್ಥಾನವೂ ಕಲ್ಯಾಣಿಯೂ ಸಮಾಜದ ಸೊತ್ತು, ಅದನ್ನು ಸ್ವಾರ್ಥಕ್ಕಾಗಿ ಬಳಸುವುದು ಅಧರ್ಮ' ಈ ಬಗೆಯ ಭಾವನೆಗಳಿಂದ ಕಾಳಿಂಗನಿಗೆ ಅತಿ ಆಪ್ತಳಾದ ತಾಯಿ ತಾಯವ್ವನಲ್ಲಿಗೂ ಗೆಳೆಯ ವೆಂಕಟರಮಣನಲ್ಲಿಯೂ ವೈಷಮ್ಯಗಳು ಬೆಳೆಯುತ್ತಾ ಹೋಗುತ್ತದೆ. ಇದರಿಂದ ಕಾಳಿಂಗನ ಜೀವನವೂ ಹಳ್ಳಿಗರಿಂದ ದೂರ ಸಿಡಿದು ಬೇರೇಯಾಗಿಯೇ ರೂಪುಗೊಳ್ಳುತ್ತದೆ.

ಭಾರತ ದೇಶದ ಆಚಾರ-ವಿಚಾರಗಳ ಬಗ್ಗೆ ತಪ್ಪು ತಿಳಿವಳಿಕೆಯನ್ನು ಹೊಂದಿರುವ ಕಾಳಿಂಗನ ಹೆಂಡತಿ ಹಿಲ್ಡಾ, ಈತನ ಸ್ನೇಹಿತನಾದ ವೆಂಕಟರಮಣ ಹೇಳುವ ಯಾವುದೇ ಮಾತಿನಲ್ಲಿ ಹುರುಳಿಲ್ಲ ಎಂದು ವಾದಿಸುವವಳು . ಆತನು ಹೇಳುವ ಗೋವಿನಲ್ಲಿ ೩೩ ಕೋಟಿ ದೇವತೆಗಳು ವಾಸಿಸುತ್ತಿರುವುದನ್ನು ಪರೀಕ್ಷಿಸಿಯೇ ಬಿಡುವ ಹಟದಿಂದ, ಈರ್ಷೆಯಿಂದ ಗೋವೊಂದನ್ನು ಕೊಂದು ಅದರಲ್ಲಿ ದೇವತೆಗಳನ್ನು ಕಾಣದೆ ಆ ಮಾಂಸವನ್ನು ತಾನು ತಿಂದು ಪತಿ ಕಾಳಿಂಗನಿಗೂ ತಿನ್ನಿಸುತ್ತಾಳೆ. ಇದರಿಂದ ಆಘಾತಕ್ಕೆ ಒಳಗಾದ ಕಾಳಿಂಗನ ತಾಯಿ ತಾಯವ್ವ ಸಾವನಪ್ಪುತ್ತಾಳೆ. ಈ ನಡುವೆ ಹಿಲ್ಡಾ ಎರಡನೆಯ ಮಗುವಿಗೆ ಜನ್ಮ ನೀಡಿದಳು. ಮಗುವಿಗೆ ತಾಯಿಯ ಎದೆ ಹಾಲು ಇಲ್ಲದಂತಾಗಿ ಪುಣ್ಯ ಕೋಟಿಯ ಹಸುವೇ ಮಗುವಿಗೆ ಮೊಲೆ ಕೊಟ್ಟು ಜೀವ ಬದುಕಿಸಿತ್ತು. ಹೀಗಾಗಿ ಗೋವುಗಳ ವಿಷಯದಲ್ಲಿ ಕಾಳಿಂಗನಿಗೆ, ಬಾಲ್ಯದ ಹಳೆಯ ಸಂಸ್ಕಾರ ಪುನಃ ಜಾಗ್ರತಗೊಂಡಿತ್ತು. ತಾವು ಕಟುಕರಿಗೆ ಮಾರಿದ ಹಸುಗಳನ್ನು ಮರಳಿ ಪಡೆಯ ಬೇಕೆಂದು, ಬಾಂದ್ರದ ಕಸಾಯಿಖಾನೆಯವರೆಗೂ ಹೋಗಿ ತನ್ನ ಹಸುಗಳನ್ನು ಗುರುತಿಸಲಾರದೇ ಹೋಗುತ್ತಾನೆ. ಅಲ್ಲಿ ಒಂದೊಂದೆ ದನವನ್ನು ವಧಾಂಗಣಕ್ಕೆ

[೧] 'ತಬ್ಬಲಿಯು ನೀನಾದೆ ಮಗನೇ' ಪುಟ ೨೨೦-ಎಸ್.ಎಲ್.ಭೈರಪ್ಪ. ಸಾಹಿತ್ಯ ಭಂಡಾರ ಬೆಂಗಳೂರು. ೧೯೬೮.

ಎಳೆದುಕೊಂಡು ಹೋಗುವಾಗ ಆ ದನಗಳ ಮುಖದಲ್ಲಿ ತನ್ನ ತಾಯಿಯ ಹೋಲಿಕೆಯನ್ನೇ ಕಂಡು, ತಾಯಿ ಸಾಯುವ ಮುನ್ನ ಅವಳ ಮುಖದಲ್ಲಿ ಇದ್ದ ಕಳೆಯನ್ನೇ ಕಂಡು ನಿರ್ವೀರ್ಯನಾಗುತ್ತಾನೆ. ತನ್ನ ತಾಯಿ ಬದುಕಿರಬೇಕಿತ್ತು ಅನಿಸುತ್ತದೆ. ಕಾಳಿಂಗನಲ್ಲಿ ಹಳೆಯ ಸಂಸ್ಕಾರವೇ ಮತ್ತೆ ತನ್ನ ಶಕ್ತಿಯನ್ನು ಸ್ಥಾಪಿಸಿಕೊಂಡಿರುವುದನ್ನು ಗುರುತಿಸಿದ ಹಿಲ್ಡಾ ತನ್ನ ಮಗನೊಂದಿಗೆ ಹಿಂತಿರುಗಿ ತನ್ನ ದೇಶಕ್ಕೆ ತೆರಳುತ್ತಾಳೆ. ಈ ಕಡೆಯಲ್ಲಿ ತಾಯಿಯನ್ನು ಮೊದಲೇ ಕಳೆದುಕೊಂಡಿರುವ ಕಾಳಿಂಗ ಈ ಸಂದರ್ಭದಲ್ಲಿ ನಿಜವಾಗಿಯೂ ತಬ್ಬಲಿಯಾಗಿ ಉಳಿದುಬಿಡುತ್ತಾನೆ.

ಹಳೆ-ಹೊಸ ಮೌಲ್ಯಗಳ ಪ್ರತ್ಯಕ್ಷ ಅನ್ವೇಷಣೆಯಲ್ಲಿ ಹಳೆಯದನ್ನು ಸಂಪೂರ್ಣ ಬಿಡಲಾರದ ಮತ್ತು ಹೊಸ ಮಾರ್ಗವನ್ನು ಸಂಪೂರ್ಣ ಅಳವಡಿಸಿಕೊಂಡರೂ ಸಮಾಜದ ಭೀತಿಯಿಂದ ಹೆದರುತ್ತಿರುವ ವ್ಯಕ್ತಿಯ ಜೀವನದ ಕಡೆಗೆ ಲೇಖಕರು ಬೆಳಕನ್ನು ಚೆಲ್ಲಿರುವಂತೆ ಈ ಪಾತ್ರವನ್ನು ಚಿತ್ರಿಸಿರುತ್ತಾರೆ. ಸಮಾಜದ ಯಾವುದೇ ಅಂಗದ ಕುಂದು-ಕೊರತೆಗಳನ್ನು ಸ್ಫುಟವಾಗಿ ತೋರಿಸಲು ಇಂತಹ ಪಾತ್ರ ಒಳ್ಳೆಯ ನಿದರ್ಶನವೆಂಬುದನ್ನು ಮನಗೊಂಡಿರುವ ಕಾದಂಬರಿಕಾರರು, ಈ ಕಾದಂಬರಿಯಲ್ಲಿ ಕಾಳಿಂಗನಂತಹ ನಿಃಶಕ್ತ ನಾಯಕನನ್ನು ಕೇಂದ್ರವ್ಯಕ್ತಿಯನ್ನಾಗಿ ತಂದಿರುತ್ತಾರೆ. ಈ ಪಾತ್ರದ ಮೂಲಕ ವ್ಯಕ್ತಿಯೊಬ್ಬ ಬೆಳೆದಂತೆ, ಆತನು ಓದು ಮುಂದುವರಿಸಿಕೊಂಡು ಹೋಗಿ ಈ ಪರಿಸರ ಬದಲಾಗುತ್ತ ಹೋದಂತೆ ಅವನ ಮಾನಸಿಕ ಸ್ಥಿತಿಗತಿಗಳಲ್ಲಿ ಪರಿಸರಕ್ಕೆ ಒಮ್ಮೆ ಸೋಲುತ್ತಲೂ ಮತ್ತೊಮ್ಮೆ ಹಳೆಯ ಸಂಪ್ರದಾಯವನ್ನು ಅರಸುತ್ತಲೂ ಸಾಗುವುದನ್ನು ಲೇಖಕರು ಬಹು ರಮ್ಯವಾಗಿ ಚಿತ್ರಿಸಿದ್ದಾರೆ.

ಹೀಗೆ ಕಾದಂಬರಿಯನ್ನು ಆಮೂಲಾಗ್ರವಾಗಿ ಓದಿ ಮುಗಿಸಿದಾಗ ಸಹೃದಯರ ಮನೋರಂಗದಲ್ಲಿ ಅಚ್ಚಳಿಯದೆ ಬೀರುವ ಪಾತ್ರವೆಂದರೆ ಕಾಳಿಂಗ

ಪಾತ್ರವೆನ್ನುವಂತೆ ಕಾದಂಬರಿಕಾರರು ಈತನ ಪಾತ್ರಪೋಷಣೆ ಮಾಡಿದ್ದಾರೆ. ಕತೆಯ ಓಟಕ್ಕೆ ಹಾಗೂ ಅಪ್ರತಿಮ ಪರಿಣಾಮಕ್ಕೆ ಕಳೆ ಕಟ್ಟುವಂತೆ ಕಾದಂಬರಿಯಲ್ಲಿ ಕಾಳಿಂಗನ ಪಾತ್ರವು ಸೃಷ್ಟಿಗೊಂಡು ಕಥನತಂತ್ರದ ಕ್ರಿಯಾಸಿದ್ಧಿಗೆ ಸಹಕಾರಿಯಾಗಿದೆ.

*************

# 'ನರಹರಿ'

ಎಸ್.ಎಲ್.ಭೈರಪ್ಪನವರ 'ನಿರಾಕರಣ' ಕಾದಂಬರಿ ತನ್ನದೇ ಆದ ಕುಶಲತೆಯಿಂದ, ಓದುಗರನ್ನು ಹೊಸ ಪ್ರಪಂಚವೊಂದಕ್ಕೆ ಕೊಂಡೊಯ್ದು ಹೊಸ ಅನುಭವದರ್ಶನವನ್ನು ಮಾಡಿಸಿದ ಕೃತಿ. ಈ ಕಾದಂಬರಿಯುದ್ದಕ್ಕೂ ಜೀವವಾಹಿನಿಯಾಗಿ ಹರಿದು ಬಂದ ಪಾತ್ರ ನರಹರಿಯದು. ಕಾದಂಬರಿಕಾರರು ತಾನು ಆಯ್ಕೆ ಮಾಡಿಕೊಂಡಿರುವ ಕಥೆಗೆ ಅನುಗುಣವಾಗಿ ಈ ಪಾತ್ರವನ್ನು ತುಂಬಾ ಸೊಗಸಾಗಿ ಚಿತ್ರಿಸಿದ್ದಾರೆ. ನರಹರಿಯ ವಿಲಕ್ಷಣ ವ್ಯಕ್ತಿತ್ವ ಅವನ ನಿರ್ಧಾರಗಳ ಹಿಂದಿನ ಪೊಳ್ಳುತನ, ಅವನ ಬಾಯಿಂದ ಹೊರಬೀಳುವ ಮಾತುಗಳು ಅವನ ವರ್ತನೆ ಎಲ್ಲವೂ ಕಥೆಯ ಘಟನೆಗಳಿಗೆ ಪೂರಕವಾಗಿ ನಡೆಯುತ್ತದೆ.

ಕಾದಂಬರಿಯ ಪುಟ ತಿರುಗಿಸುತ್ತಾ ಹೋದಂತೆ ಅವನ ವಿಲಕ್ಷಣ ವ್ಯಕ್ತಿತ್ವ ಎಳೆ-ಎಳೆಯಾಗಿ ಮನದಲ್ಲಿ ಸುಳಿದು ಮರೆಯಾಗುತ್ತಾ ಹೋಗುತ್ತದೆ. ಮಕ್ಕಳನ್ನು ದತ್ತು ಕೊಡಲಾಗುತ್ತದೆ ಎಂದು ಬೊಂಬಾಯಿಯ 'ಟೈಮ್ಸ್' ಪತ್ರಿಕೆಯಲ್ಲಿ ಮಕ್ಕಳ ಭಾವಚಿತ್ರದೊಂದಿಗೆ ಪ್ರಕಟಿಸುವುದರ ಜೊತೆಗೆ ನರಹರಿಯ ವ್ಯಕ್ತಿತ್ವ ಸುರುಳಿ ಬಿಚ್ಚಿಕೊಳ್ಳುತ್ತವೆ. ಓರ್ವ ತಂದೆಯಾಗಿ ತನ್ನ ಐವರು ಮಕ್ಕಳನ್ನು ದತ್ತು ಕೊಡಲು ನಿರ್ಧರಿಸಿ ಈ ಪ್ರಕಟನೆ ಹೊರಡಿಸಿದ್ದಾನೆ. ಬಹುದೀರ್ಘವಾದ ಜಾಹೀರಾತು ಇದು. ಇದರಲ್ಲಿ ತಂದೆ-ತಾಯಿ, ಮಕ್ಕಳ ವಿನಯ ಬರುತ್ತದೆ. ಅವುಗಳ ಅಂದ-ಚೆಂದ, ಸಾಂಸ್ಕೃತಿಕ ಗತಿ-ಸ್ಥಿತಿ, ದತ್ತು ಕೊಡುವ ಉದ್ದೇಶ, ದತ್ತು ಕೊಡಲು ಕಾರಣ ಹೀಗೆ ಎಲ್ಲ ವಿವರಗಳೂ ಅಲ್ಲಿವೆ. ಈ ವಿವರಗಳನ್ನು ನರಹರಿಯ ಪಾತ್ರದ ಮೂಲಕ ಕಾದಂಬರಿಕಾರ ಓದುಗರಿಗೆ ನೀಡುತ್ತಾನೆ.

ವಿಲಕ್ಷಣ ವ್ಯಕ್ತಿತ್ವದ ನರಹರಿಯಲ್ಲಿ ಅವನ ಸ್ನೇಹಿತ ಪತ್ರಿಕೆಯಲ್ಲಿ ಬಂದ ಜಾಹೀರಾತು ಸರಿಯಾಗಿದೆಯೇ ಎಂದು ಕೇಳಿದಾಗ - 'ಹೆಣದ ಜೊತೆಗೆ ಸುಡೋ ಚಟ್ಟ ಹ್ಯಾಗೆ ಕಟ್ಟಿದರೇನು? ಭಾರ ಹೊತ್ತರೆ ಸಾಕಲ್ಲ'. ಎಂದು ಉತ್ತರಿಸುತ್ತಾನೆ. ಮುಂದೆ ಒಂದು ಸಂದರ್ಭದಲ್ಲಿ - "ಇನ್ನು ಕೆಲವು ದಿನಗಳಲ್ಲಿ ಈ ಎಲ್ಲ ಮಕ್ಕಳೂ ತನ್ನ ಪಾಲಿಗೆ ಸಾಯುತ್ತವೆ. ಇಲ್ಲವೆ ತಾನು ಅವರ ಪಾಲಿಗೆ ಸಾಯುತ್ತೇನೆ ಎಂದೂ ವಿಚಾರ ಮಾಡುತ್ತಾನೆ. ದತ್ತು ನೀಡುವ ಪ್ರಕ್ರಿಯೆ ದಟ್ಟವಾಗುತ್ತ ಹೋದ ಹಾಗೆ ನರಹರಿ ಮಕ್ಕಳ ಜತೆ ಹೆಚ್ಚು ಕಾಲ ಕಳೆಯುತ್ತಾನೆ. ಅವರ ಜತೆ ಮಾತನ್ನಾಡುತ್ತಾನೆ. ಅವರನ್ನು ಪ್ರೀತಿಸುತ್ತಾನೆ. ಇಷ್ಟಾದರೂ ಮಕ್ಕಳನ್ನು ಅಗಲಿ ಇರಲು ಸಿದ್ಧನಾಗುತ್ತಾನೆ. ಒಂಟಿತನ ಏಕಾಕಿತನವನ್ನು ಹಾರ್ದಿಕವಾಗಿ ಬಯಸುತ್ತಾ ಹೋಗುತ್ತಾನೆ. ದತ್ತು ಕೊಟ್ಟ ಮಕ್ಕಳೇನೋ ಅತ್ತು ಕರೆದು ಗೋಳಾಡಿ ತಂದೆಯನ್ನು ತೊರೆದು ಹೋಗುತ್ತವೆ. ಆದರೆ ನರಹರಿ ಧೂಳು ಕವಿದ ಮರದ ಪೆಟ್ಟಿಗೆಗಳಿಂದ ವೇದಾಂತದ ಪುಸ್ತಕಗಳನ್ನು ಹೊರತೆಗೆದು ಯಾವುದಕ್ಕೂ ಅಂಟಿಕೊಂಡಿರಬಾರದೆಂಬ ವೇದಾಂತವನ್ನು ಗಟ್ಟಿಗೊಳಿಸಿಕೊಳ್ಳುವ ಯತ್ನದಲ್ಲಿ ತೊಡಗುತ್ತಾನೆ. ಸನ್ಯಾಸ ಬದುಕಿನ ಸ್ಪರ್ಶಕ್ಕೆ ಒಳಗಾಗುತ್ತಾನೆ. ಹಿಮಾಲಯವನ್ನು ಏರುವುದರ ಮೂಲಕ ಸನ್ಯಾಸವನ್ನು ಪಡೆಯಬೇಕೆಂಬ ನಿರ್ಧಾರ ಕ್ರಮೇಣ ಸಡಿಲವಾಗಿ ನರಹರಿ ಭಿಕ್ಷೆ ಬೇಡುತ್ತಾನೆ. ತ್ರಿವೇಣಿ ಸಂಗಮ, ಕಾಶಿ ಎಂದೆಲ್ಲ ಅಲೆದಾಡುತ್ತಾನೆ. ಕ್ರಮೇಣ ತಾಯಿ, ಲಲಿತ ವೈದೇಹಿಯರ ನೆನಪು ಕಾಡುತ್ತದೆ. ಓರ್ವ ಸನ್ಯಾಸಿ ಅವನನ್ನು ವೇಶ್ಯೆಯರ ಮನೆಗೂ ಕರೆದೊಯ್ಯುತ್ತಾನೆ. ನರಹರಿ ಮತ್ತೆ ಮನುಷ್ಯನಾಗುತ್ತಾನೆ. ಸನ್ಯಾಸವನ್ನು ಒಪ್ಪಿಕೊಳ್ಳಲು ಅಪ್ಪಿಕೊಳ್ಳಲು ಒಂದು ವಿಶಿಷ್ಟ ವ್ಯಕ್ತಿತ್ವಬೇಕು. ಅದು ನರಹರಿಯಂತಹ ದ್ವಿಮುಖಿಗಳಿಗೆ ಕಷ್ಟಸಾಧ್ಯ ಎಂಬುದನ್ನು ಹೇಳಲು ಹೊರಟ ಕಾದಂಬರಿಕಾರರು ಮೊದಲು ನರಹರಿಯ ಹೆಂಡಿರನ್ನು ಸಾಯಿಸಿ, ಹೆಂಡಿರ ತಾಯಿಯನ್ನು ಸಾಯಿಸಿ, ಮಕ್ಕಳನ್ನು ಅನಾಥರನ್ನಾಗಿ ಮಾಡಿ ನಾಯಕನಾದ ನರಹರಿಗೆ ವಿಲಕ್ಷಣವಾದ ವ್ಯಕ್ತಿತ್ವವನ್ನು ನೀಡುತ್ತಾರೆ.

ಮನುಷ್ಯ ಸ್ವಭಾವದ ನಾನಾ ಮುಖಗಳ ಹರಿತವಾದ ವಿಡಂಬನೆಯ ಸಂಕೇತವಾಗಿ ಇಲ್ಲಿಯ ನರಹರಿಯ ಪಾತ್ರ (ವ್ಯಕ್ತಿತ್ವ) ರೂಪುಗೊಂಡಿದೆ. ತನ್ನ ಬಾಳಿನಲ್ಲಿ ಸಾಧನೆಯ ಮಾರ್ಗವನ್ನು ಹಿಡಿದು ದೈವತ್ವವನ್ನು ಸಂದರ್ಶಿಸಿ ಪುನೀತನಾಗಬೇಕೆನ್ನುವ ಆತ ಒಂದು ಹೆಜ್ಜೆಯನ್ನು ಮುಂದಿಡಲಾಗದೆ ವಿಫಲನಾಗುತ್ತಾನೆ. ಕಾದಂಬರಿಯ ಆದಿಯಲ್ಲಿ ಹೇಗಿದ್ದನೋ ಮುಕ್ತಾಯದ ಘಟ್ಟದಲ್ಲೂ ಹಾಗೆಯೇ ಇರುತ್ತಾನೆ. ಎಂದ ಮಾತ್ರಕ್ಕೆ ಅವನ ವ್ಯಕ್ತಿತ್ವದಲ್ಲಿ ಬೆಳವಣಿಗೆ ಇಲ್ಲವೆಂದಲ್ಲ. ಮಕ್ಕಳನ್ನು ಹಂಚಿದಾಗ, ಹಿಮಾಲಯವನ್ನು ಹತ್ತಿದಾಗ, ಬಾರಾಮಾಸಿ ಮಹಾರಾಜರನ್ನು ಕಂಡಾಗ ಬಿಸಿನೀರಿನಲ್ಲಿ ಮಿಂದಾಗ ಮುಂಬಯಿಯ ಕನ್ನೇರಿಯನ್ನು ಏರಿ ಚಿಂತನೆಯನ್ನು ಮಾಡುತ್ತಿದ್ದಾಗ ಮತ್ತು ಕಾಶಿಯಲ್ಲಿ ಭಿಕ್ಷೆ ಬೇಡುತ್ತಿದ್ದಾಗಿನ ಸಂದರ್ಭಗಳು ರಾಮಕೃಷ್ಣನ 'ಹೊಗೆಸೊಪ್ಪಿನ ಕತೆ'ಯ ವರ್ಣನೆಯ ಸನ್ನಿವೇಶ ಈ ಏರಿಳಿತಗಳನ್ನು ಮಾನಸಿಕ ದ್ವಂದ್ವಗಳನ್ನು ವಿವೇಚಿಸುವಾಗ ಅರ್ಥಪೂರ್ಣ ಹಿನ್ನೆಲೆಯಾಗಿ ಪರಿಣಮಿಸಿವೆ.

ಈ ಪಾತ್ರದ ಮತ್ತೊಂದು ವೈಶಿಷ್ಟ್ಯವೇನೆಂದರೆ ಮತ್ತೆ ಮತ್ತೆ ಮುತ್ತಿ ಬರುವ ನೆನಪುಗಳು, ನೆನಪುಗಳ ತುಂತುರಿನಲ್ಲಿ ನೆನೆದ ನರಹರಿ ತಾಯಿ, ಲಲಿತ, ವೈದೇಹಿಯರನ್ನು ವೇಶ್ಯೆ 'ಲಲ್ಲೂ'ವಿನ ತೊಡೆಯ ಮೇಲೆ ನೆನೆಯುತ್ತಾನೆ. ಸಾಂಸಾರಿಕ ಜವಾಬ್ದಾರಿಗಳನ್ನು ತೊರೆದು ಸನ್ಯಾಸವನ್ನು ಸ್ವೀಕರಿಸುವುದರಲ್ಲಿ ಅರ್ಥವಿಲ್ಲ ಎಂಬ ಅಂಶವನ್ನು ಪ್ರತಿಪಾದಿಸುವ ಸಲುವಾಗಿ ಈ ಪಾತ್ರ ಸೃಜಿಸಿದೆ ಎಂಬಂತೆ ಕಂಡುಬರುತ್ತದೆ. ಕಲಾತ್ಮಕ ನಿರೂಪಣೆಯ ದೃಷ್ಟಿಯಿಂದ 'ನರಹರಿ' ಯಶಸ್ವಿ ಪಾತ್ರವೆನ್ನಬಹುದು. ಲೇಖಕರು ಯಾವ ಬಗೆಯ ಉಪನ್ಯಾಸಗಳಿಗೂ ಪಕ್ಕಾಗದೆ ಧಾರ್ಮಿಕ ಮೌಲ್ಯಗಳ ವಿಚಾರ ಪ್ರಣಾಲಿಗಳ ಘೋಷಣೆ ಹೊರಡಿಸದೆ, ಕಾದಂಬರಿಯಲ್ಲಿ ಒಬ್ಬ ವ್ಯಕ್ತಿಯ ಮಾನಸಿಕ ತುಮುಲ, ತಳಮಳ, ಆದರ್ಶ, ಸಮಸ್ಯೆಗಳ ಸುಳಿ, ದ್ವಂದ್ವ ಪ್ರಕೃತಿಯಾಕರ್ಷಣೆ, ನಿರಂತರ ಹೋರಾಟ ಇವುಗಳ ಬಗ್ಗೆ ಮಾರ್ಮಿಕವಾಗಿ, ತಿಳಿಯಾದ

ಭಾಷೆಯಲ್ಲಿ ಸೌಮ್ಯವಾಗಿ ಚಿತ್ರಿಸಿದ್ದಾರೆ. ಭಾಷೆಯ ಮೇಲಿನ ಹಿಡಿತ, ವ್ಯಕ್ತಿಗೆ ತಕ್ಕ ಉಕ್ತಿ ಮತ್ತು ಪಾತ್ರ ಪರಿಪೂರ್ಣತೆಯಿಂದಾಗಿ ನರಹರಿಯ ಪಾತ್ರ ಮೈದುಂಬಿ ನಿಂತಿದೆ. ಕಾದಂಬರಿಕಾರನ ಉದ್ದೇಶ ಏನೇ ಇದ್ದರೂ ಕೂಡ ವಿಲಕ್ಷಣವಾದ ವ್ಯಕ್ತಿತ್ವವನ್ನು ನರಹರಿ ಹೊಂದಿದ್ದರೂ ಕೂಡ ಕಾದಂಬರಿ ಕೊನೆಗೊಳ್ಳುವಾಗ ಈ ಪಾತ್ರ ತಮ್ಮ ಮನಸ್ಸನ್ನು ಆವರಿಸಿ ಬಿಡುವ ರೀತಿಯಲ್ಲಿ ರಚನೆ ಗೊಂಡಿರುವುದು ವಿಶೇಷ.

ಭೈರಪ್ಪನವರ ಇತರ ಕಾದಂಬರಿಗಳಲ್ಲಿ ಬರುವ ಸತ್ಯನಾರಾಯಣ, ಶ್ರೀನಿವಾಸ ಶ್ರೋತ್ರಿ, ಸದಾಶಿವರಾಯ, ಆನಂದ, ವಸಂತ, ಸತ್ಯಭಾಮಾ ಮೊದಲಾದವರು ಒಂದು ರೀತಿಯಾದರೆ 'ನಿರಾಕರಣ'ದಲ್ಲಿ ನರಹರಿಯ ಪಾತ್ರವು ಬೇರೊಂದು ರೀತಿಯದು. 'ಧರ್ಮಶ್ರೀ'ಯ ಸತ್ಯನಾರಾಯಣ 'ವಂಶವೃಕ್ಷ'ದ ಶ್ರೋತ್ರಿ ಮತ್ತು ಸದಾಶಿವರಾಯರು 'ದೂರಸರಿದರು'ವಿನ ಆನಂದ, ವಸಂತ 'ದಾಟು'ವಿನ ಸತ್ಯಭಾಮಾ ಮೊದಲಾದ ಪಾತ್ರಗಳಲ್ಲಿ ಯಾವುದೋ ಒಂದು ಗುರಿ ಇಟ್ಟುಕೊಂಡು, ಆ ಗುರಿ ಮುಟ್ಟಿದ ಉದಾತ್ತ ಪಾತ್ರಗಳನ್ನು ಲೇಖಕರು ಚಿತ್ರಿಸಿದ್ದಾರೆ. ಇವೆಲ್ಲ ಪಾತ್ರಗಳಿಂದ ಭಿನ್ನವಾಗಿ ನಿಂತ ಪಾತ್ರ ನರಹರಿಯದು. ಯಾವುದೋ ಒಂದು ಉದಾತ್ತ ಗುರಿಯನ್ನು ಮುಂದಿಟ್ಟುಕೊಂಡು ಆ ಗುರಿ ಮುಟ್ಟದೆ ಅಧಃಪತನ ಹೊಂದಿದ ಪಾತ್ರವಾದ್ದರೂ 'ಕಥಾಶಿಲ್ಪ'ಕ್ಕೆ ತನ್ನದೆ ದೇಣಿಗೆ ನೀಡುತ್ತದೆ.

***************

## 'ಜವರಾಯಿ'

ಎಸ್.ಎಲ್.ಭೈರಪ್ಪನವರ 'ನೆಲೆ' ಕಾದಂಬರಿಯ ಪ್ರಮುಖ ಪಾತ್ರ ಜವರಾಯಿ. ಈತ. ತಾಲೂಕು ಸಬ್-ರೆಜಿಸ್ಟಾರ್ ಆಫೀಸಿನಲ್ಲಿ ಸ್ಟಾಂಪ್‌ವೆಂಡರ್ ಆಗಿರುತ್ತಾನೆ. ಈತನ ಜೀವನದ ಘಟನೆಗಳು ವೈಯಕ್ತಿಕ ಬದುಕಿನ ನೂರಾರು ವಿವರಗಳು, ಸಂಬಂಧಗಳು ಬಿಚ್ಚಿಕೊಳ್ಳುತ್ತಾ ಹೋಗುವುದರ ಮೂಲಕ ಕಾದಂಬರಿ ಕುತೂಹಲವನ್ನು ಕೊನೆಯವರೆಗೆ ಕೆರಳಿಸುತ್ತಾ, ವಿಚಾರವನ್ನು ಚಿಂತನೆಯ ಓರೆಗಲ್ಲಿಗೆ ಹಚ್ಚುತ್ತ ಹೋಗುತ್ತದೆ.

ಜವರಾಯಿ ಭಾವುಕ ಹಾಗೂ ನಾದಲೋಲ ಆತುರದಲ್ಲಿ ಮದುವೆಯಾಗಿ ಸುಬ್ಬಲಕ್ಷ್ಮೀಯಲ್ಲಿ ಐದು ಮಕ್ಕಳನ್ನು ಪಡೆದು ಹಳ್ಳಿಯಲ್ಲಿ ಚಿಕ್ಕಪುಟ್ಟ ಕೆಲಸಮಾಡಿ ಅವಮಾನ ಸಹಿಸಿ, ತನಗೆ ಅವಮಾನವಾದರೂ, ತನ್ನ ಹೆಂಡತಿ ಮಕ್ಕಳನ್ನು ಗೌರವದ ಎತ್ತರದಲ್ಲಿ ಉಳಿಸಲು ಹೆಣಗಾಡಿ ಮಕ್ಕಳನ್ನು ತುಂಬ ಪ್ರೀತಿಯಿಂದ ಬೆಳೆಸಿ, ಕುಟುಂಬವನ್ನು ಒಂದು ನೆಲೆಗೆ ತಂದಿರುತ್ತಾನೆ. ತಾನು ಪ್ರೀತಿಯಿಂದ ಬೆಳೆಸಿದ ಮಗ 'ತನ್ನನ್ನೇಕೆ ಹುಟ್ಟಿಸಿದಿರಿ? ನಾನು ಹುಟ್ಟಿಸು ಎಂದು ಕೇಳಿದ್ದೇನೆ? ಎಂದು ಕೇಳಿದಾಗ ಅವನಿಂದ ಧಿಕ್ಕಾರಕ್ಕೆ ಒಳಗಾಗುತ್ತಾನೆ. ತಾನು ಪ್ರೀತಿಸದಿದ್ದ ತನ್ನ ಹೆಂಡತಿಗೆ ತಾಳಿ ಕಟ್ಟಿದ್ದು ಮೂರ್ಖತನ ಎಂಬುದನ್ನು ಅರ್ಥಮಾಡಿಕೊಂಡು, ತಾನು ಸುಬ್ಬಲಕ್ಷ್ಮೀಯಿಂದ ಪಡೆಯಲಾಗದಿದ್ದ ಭಾವನಾತ್ಮಕ ತೃಪ್ತಿಯನ್ನು ಪಾರ್ವತಿಯೆಂಬ ನರ್ಸ ಮೂಲಕ ಪಡೆಯಲೆತ್ನಿಸಿ ತನ್ನ ಸಂಸಾರದ ತಿರಸ್ಕಾರಕ್ಕೆ ಗುರಿಯಾಗುತ್ತಾನೆ. ಜವರಾಯಿಯ ಪತ್ನಿ ಸುಬ್ಬಲಕ್ಷ್ಮೀ ಗೃಹಿಣಿಯಾಗಿ ಅವನಿಗೆ ದೈಹಿಕವಾದ ಸುಖ-ಸಂತಸ ನೀಡಿದರೂ ಅವನ ಅಂತರಂಗದಲ್ಲಿ ಯಾವುದೊ ಅಪೂರ್ಣತೆಯ ತುಡಿತ ನಡದೇ ಇರುತ್ತದೆ. ಕಲೆಯ ಮೂಲಕ ಬದುಕಿನ ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂಬ ಜವರಾಯಿಯ ಹಂಬಲ ಅವನ ಜೀವನದ ತುಡಿಗಳಲ್ಲೊಂದಾಗಿದೆ. ಇದಕ್ಕೆ ಅನುಗುಣವಾಗಿ ನರ್ಸು ಪಾರ್ವತಿಯ

ಸಂಬಂಧವು ಜವರಾಯಿಗೆ ಆಗುತ್ತದೆ. ತಾನು ಪಾರ್ವತಿಯೊಡನೆ ಮೊದಲ ಬಾರಿ ಬೆರೆತ ರಾತ್ರಿಯ ಅನುಭವವನ್ನು ಜವರಾಯಿ ವಿಥಿತಪಡಿಸಿರುವ ಭಾಗವು 'ನೆಲೆ' ಕಾದಂಬರಿಯ ಮುಖ್ಯ ಭಾಗಗಳಲ್ಲೊಂದಾಗಿದೆ. ತನ್ನ ಸಂಗೀತ ಕಲೆಯ ರಾಗದ ವಿವಿಧ ನೆಲೆಗಳನ್ನು ಪಾರ್ವತಿಗೆ ಜವರಾಯಿ ಹಾಡಿ ತೋರಿಸುತ್ತಾನೆ. ಗಾನಗಂಧರ್ವ ಲೋಕದಲ್ಲಿ ವಿಹಾರಿಗಳಾದ ಜವರಾಯಿ ಪಾರ್ವತಿ ಅನುರಾಗದ ಬಂಧನದಲ್ಲಿ ಬಂಧಿತರಾಗುತ್ತಾರೆ. ಅರವತ್ತರ ಅಂಚಿನಲ್ಲಿರುವ ಜವರಾಯಿಯು ಪಾರ್ವತಿಯೊಡನೆ ಹೊಂದಿದ ಸಂಬಂಧವು ದೈಹಿಕ ಸಂಬಂಧಕ್ಕಿಂತ ಕಲೆಯ ಮೂಲಕ ಪಡೆದುಕೊಂಡ ಸಂಬಂಧವೇ ಪ್ರಮುಖವಾದದ್ದಾಗಿದೆ. 'ದೂರ ಸರಿದರು' ಕಾದಂಬರಿಯಲ್ಲಿ ಭೈರಪ್ಪನವರು ಹೇಳುವಂತೆ 'ಪ್ರೇಮವು ಬೌದ್ಧಿಕ ಸಾಹಚರ್ಯದ ಮೂಲಕವೇ ಪರಿಪೂರ್ಣವಾಗುತ್ತದೆ' ಎಂಬ ವಿಚಾರವು ಇಲ್ಲಿಯ ಜವರಾಯಿ, ಪಾರ್ವತಿ ಸಂಬಂಧದಲ್ಲಿ ನಾವು ಮನಗಾಣುತ್ತೇವೆ.

ನೂರಾರು ಮನೆತನಗಳ ಕಾಗದ ಪತ್ರಗಳನ್ನು ಬರೆಯುವ ಜವರಾಯಿ, ತನ್ನ ಬದುಕಿನ ಪುಟಗಳನ್ನು ಟಿಪ್ಪಣಿಯ ರೂಪದಲ್ಲಿ ಬರೆದಿದ್ದ ಬಗೆಯೂ ಕೂತೂಹಲಕರವಾದದ್ದು. ಜವರಾಯಿ ಟಿಪ್ಪಣಿಯಲ್ಲಿ ಬರುವ ಗಂಡು ಹೆಣ್ಣಿನ ಸಂಬಂಧದ ಸ್ವರೂಪವು ಅರ್ಥಪೂರ್ಣವಾಗಿದೆ ಕಾಮಕ್ಕಾಗಿ ಆದ ಮದುವೆ ಕಾಮ ಬತ್ತಿದ ಮೇಲೆ ಕಳಚಿ ಬೀಳಲೇಬೇಕು. ಜವರಾಯಿಯ ಬದುಕಿನಲ್ಲಿ ನೈತಿಕ ಹೊಣೆಗಾರಿಕೆಯ ಪಾತ್ರವನ್ನು ಕಾದಂಬರಿಕಾರರು ಮುಖ್ಯ ಸಂಗತಿಯನ್ನಾಗಿಸದೆ, ಕಲೆಗಾಗಿ ಹಂಬಲಿಸಿದ ಜೀವ ಬೌದ್ಧಿಕ ಸಹಚರ್ಯಕ್ಕಾಗಿ ಹುಡುಕಾಟ ನಡೆಸಿ, ಕೊನೆಗೆ ಪಾರ್ವತಿಯ ಸಂಬಂಧದಲ್ಲಿ ಅನಂತ ವಿಶ್ರಾಂತಿ ಪಡೆದ ಬಗೆಯನ್ನು ಚಿತ್ರಿಸಿದ್ದಾರೆ.

ಜವರಾಯಿ ಕಂಡುಕೊಳ್ಳುವ ಸಾವಿನ ಅನುಭವದ ಗಾಢತೆಯನ್ನು, ಹಾಗೂ ಆ ಅನುಭವ ಒದಗುವ ಕ್ರೂರತೆಯನ್ನು ಗಮನಿಸಿದರೆ, ಕಾದಂಬರಿ ಕಾಮ ಮತ್ತು ಸಾವು ಇವುಗಳನ್ನು ಪರ್ಯಾಯಗಳೆಂದು ಸ್ವೀಕರಿಸುವ ನೆಲೆಗೆ ಸಾಗಿದಂತೆ

ಕಾಣುತ್ತದೆ. ಈ ಹಿನ್ನೆಲೆಯಿಂದಾಗಿ ಕಾದಂಬರಿ ಓದು ಮುಗಿದ ಕ್ಷಣ ಓದುಗನ ಮನಃಪಟಲದಲ್ಲಿ ನಿಲ್ಲುಘ ಪಾತ್ರ ಜವರಾಯಿಯದ್ದಾಗುತ್ತದೆ.

*************

## 'ಮಂಜಯ್ಯ'

'ಸಾಕ್ಷಿ' ಕಾದಂಬರಿಯ ಪ್ರಮುಖ ಪಾತ್ರ ಮಂಜಯ್ಯನದು. ಈತನು ಸುಳ್ಳಿನ ಪ್ರತೀಕ. ಭೈರಪ್ಪನವರು ಸೃಷ್ಟಿಸಿರುವ ಪಾತ್ರಗಳಲ್ಲಿ ಈ ಪಾತ್ರವು ವಿಭಿನ್ನವಾದದ್ದು. ಅತಿಕಾಮುಕ ಮತ್ತು ಲಂಪಟನಾಗಿದ್ದ ಈತನ ದೃಷ್ಟಿಗೆ ಬಿದ್ದ ಹೆಣ್ಣುಗಳನ್ನು ರಸಿಕತನದಿಂದ ಗೆದ್ದುಬಿಡುವ ಸ್ವಭಾವದವನಾಗಿರುತ್ತಾನೆ. ಈತನ ದೃಷ್ಟಿಯಲ್ಲಿ ಎಲ್ಲ ಹೆಣ್ಣುಗಳು ಒಂದೇ. ತನಗಿಂತ ಹಿರಿಯವಳಾದ ಜಾನಕಮ್ಮನಾಗಲಿ, ಮಗಳ ವಯಸ್ಸಿನ ಲತಾಳಾಗಲಿ, ಸರೋಜಾಕ್ಷಿ, ಲಕ್ಕುವಿನಂಥ ವಿವಾಹಿತೆಯಾಗಲಿ, ಚಂದ್ರಿಕೆಯಂಥ ಅವಿವಾಹಿತೆಯಾಗಲಿ ತನ್ನ ಜಾತಿಯ ಹೆಣ್ಣಾಗಿರಲಿ ಇಲ್ಲವೇ ಕೆಳಜಾತಿಯ ಹೆಣ್ಣಾಗಲಿ ಎಲ್ಲರೂ ಒಂದೇ.

ಬದುಕಿನಲ್ಲಿ ಯಾವುದೇ ಮೌಲ್ಯವಿಲ್ಲದೆ, ಮೌಲ್ಯಹೀನ ಬದುಕನ್ನು ಬಾಳಿ ತನ್ನ ಸುತ್ತ ಇರುವವರನ್ನು ಹಾಳುಮಾಡುವ ಪ್ರವೃತ್ತಿಯವನು. ಅವನ ಸಾವು ಲಕ್ಕುವಿನಿಂದ ಆದರೂ, ಅವನು ತನ್ನ ಶಕ್ತಿಯನ್ನು ಕಳೆದುಕೊಂಡದ್ದು ಸರೋಜಾಕ್ಷಿಯ ಎದುರಿಗೆ, ಲಕ್ಕು ಅವನ ಸಾವಿಗೆ ನೆಪ ಮಾತ್ರ, ಮಂಜಯ್ಯ ಸತ್ತ ನಂತರವೂ ಚಿತ್ರಗುಪ್ತನ ಎದುರು ಸುಳ್ಳನ್ನು ಹೇಳುತ್ತಾನೆ. ಪರಮೇಶ್ವರಯ್ಯನ ಹೆಂಡತಿ ಜಾನಕಮ್ಮ ಯಮಲೋಕದಲ್ಲಿ ಸಿಕ್ಕಾಗ ಅವಳನ್ನು ಬಿಟ್ಟಿರಲು ಸಾಧ್ಯವಾಗದೆ ಅವಳಿಗೋಸ್ಕರವಾಗಿ ಅಲ್ಲಿಗೆ ಬಂದಿರುವುದಾಗಿ ಹೇಳುವನು. ಹೀಗೆ ಮಂಜಯ್ಯ ಬದುಕಿರುವಾಗ ಭೂಲೋಕದಲ್ಲಿಯೂ ಸತ್ತಿರುವಾಗ ಯಮಲೋಕದಲ್ಲಿಯೂ ಸುಳ್ಳನ್ನು ಹೇಳುತ್ತ ಬರುವನು. ಸುಳ್ಳು ಹೇಳುವುದನ್ನೇ ಗುರಿಯಾಗಿ ಅದನ್ನೇ ಮೌಲ್ಯವೆಂದು ಭಾವಿಸಿದ ವ್ಯಕ್ತಿಯಾಗಿದ್ದಾನೆ. ಹೀಗೆ ಮಂಜಯ್ಯನು 'ಸಾಕ್ಷಿ' ಕಾದಂಬರಿಯ ಮುಖ್ಯ ಪಾತ್ರವಾಗಿ ನೀತಿಯ ಬೇರುಗಳನ್ನು ಶೋಧಿಸುವ ತನ್ನ ನಡೆವಳಿಕೆಯಿಂದ ಅಲುಗಾಡಿಸುವ ಕೊನೆಗೆ ಕಾದಂಬರಿಯ ಘಟನೆಗಳ ನಿರೂಪಣೆಗೆ ತುಸು ವ್ಯತಿರಿಕ್ತವಾಗಿ ತೋರುವಂತೆ,

ಚಿತ್ರಗುಪ್ತರು ಒಪ್ಪಿಸುವ ವರಿದಿಯಂತೆ 'ಆತ್ಮಹತ್ಯೆ' ಮಾಡಿಕೊಳ್ಳುವ (ಕಾಮದ ಸಂಕೇತವಾದ ಶಿಶ್ನವನ್ನೆ ಛೇದಗೊಳಿಸಿಕೊಳ್ಳುವ) ಒಟ್ಟು ಕಾದಂಬರಿಯ ಆಶಯವನ್ನು ಧ್ವನಿಸುವ ಪಾತ್ರವಾಗಿ ಸೃಷ್ಟಿಗೊಂಡಿದೆ. ಕನ್ನಡ ಕಾದಂಬರಿಗಳಲ್ಲಿ ಪ್ರಾಯಶಃ ಇಷ್ಟು ಪ್ರಭಾವಕಾರಿಯಾಗಿ ಕಾಮವನ್ನು ಸಂಕೇತಿಸುವ ಪಾತ್ರ ಸೃಷ್ಟಿಗೊಂಡಿಲ್ಲ ಎನ್ನುವಷ್ಟು ಪ್ರಭಾವವನ್ನು ಜನಮನದಲ್ಲಿ ನೆಲೆಯೂರುವಂತೆ ಸೃಷ್ಟಿಗೊಂಡಿದೆ. ಕಾದಂಬರಿಯ ಸಮಗ್ರ ಕಥನಕ್ರಿಯೆಗೆ ಈ ಪಾತ್ರವೇ ಚಾಲಕ ಶಕ್ತಿಯಾಗಿರುವಂತೆ ನಿರೂಪಿತವಾಗಿದೆ.

ಮಂಜಯ್ಯನಿಗೆ ತನ್ನ ಪುರುಷತ್ವದಲ್ಲಿ, ಕಾಮದ ಆಟದಲ್ಲಿ ಹೆಣ್ಣುಗಳ ಬೇಟೆಯಲ್ಲಿ ತನ್ನನ್ನು ಮೀರಿಸುವವರೇ ಇಲ್ಲ, ತನಗೆ ಮಣಿಯದ ತಾನು ಮಣಿಸಲಾರದ ಹೆಣ್ಣೇ ಇಲ್ಲವೆಂಬ ನಂಬಿಕೆ. ಇದು ಅವನಿಗೆ ಅತೀವವಾದದ ಹೆಮ್ಮೆ, ಸಂತೋಷ ಮತ್ತು ಬಲ ತಂದುಕೊಡುತ್ತದೆ. ಅವನ ಈ ನಂಬಿಕೆಗೆ ನೀರೆರೆಯುವಂತೆ ಅನೇಕ ಹೆಣ್ಣುಗಳೂ ಸಹ ಅವನಿಗೆ ಸಹಕರಿಸುತ್ತಿದ್ದರು. ತಾನು ಭೋಗಿಸಿದ ಹೆಣ್ಣುಗಳ ಸಂಖ್ಯೆ ಹೆಚ್ಚಿದಷ್ಟೂ ಮಂಜಯ್ಯನ ಅಹಂಕಾರದ ಗಾತ್ರವೂ ಹೆಚ್ಚುತ್ತದೆ. ಉಚಿತ–ಅನುಚಿತಗಳನ್ನು ಸಂಪೂರ್ಣ ಬದಿಗೊತ್ತಿ, ತಾಯಿ ಮಗಳು ಇಬ್ಬರನ್ನೂ ಅವನು ಕೂಡಿದಾಗ ಅವನ ಅವಸಾನದ ಬೀಜ ಆ ಶಕ್ತಿಮೂಲದಲ್ಲಿಯೇ ಅಡಗಿರುತ್ತದೆಂಬುದು ರಾವಣ ಭಸ್ಮಾಸುರರಂತಹ ಪಾತ್ರಗಳ ಮೂಲಕ ಸಿದ್ಧಪಡಿಸಲ್ಪಟ್ಟಿರುವ ಸತ್ಯ. ಎಲ್ಲ ಅತಿಗಳೂ ತಮ್ಮ ನಾಶದ ಬೀಜವನ್ನು ತಮ್ಮಲ್ಲಿಯೇ ಅಡಗಿಸಿಕೊಂಡಿರುವುವು ಎಂಬ ಈ ಸತ್ಯವನ್ನು ಮಂಜಯ್ಯನ ಪಾತ್ರದ ಮೂಲಕ ಕಾದಂಬರಿಕಾರರು ಕಂಡಿರಿಸಿದ್ದಾರೆ.

ಚನ್ನರಾಯಪಟ್ಟಣ, ಹಾಸನ, ತಿಪಟೂರು ಈ ಎಲ್ಲೆಗಳಲ್ಲಿ ಸುತ್ತಿ ಹರಿದಾಡುವ ಮಂಜಯ್ಯನ ಪಾತ್ರ, ಒಂದು ಪರಿಮಿತಿ ಪರಿಧಿಯಲ್ಲಿಯೇ ಕಾಮದ ಸರ್ವ ವ್ಯಾಪಕತೆಯನ್ನು ಸೂಚಿಸುತ್ತದೆ. 'ಕಾಮ' ತನ್ನೆಲ್ಲ ಕೆಡುವಿನ ಶಕ್ತಿಗಳ ಜೊತೆಗೂಡಿ ಮಂಜಯ್ಯನ ಪಾತ್ರದಲ್ಲಿ ವಿಜೃಂಭಿಸುವಂತೆ ಕಾದಂಬರಿಕಾರರು ಕಾದಂಬರಿಯ

'ಕಥನಶಿಲ್ಪ'ದಲ್ಲಿ ಮಂಜಯ್ಯನ ಪಾತ್ರದ ನಿರ್ಮಿತಿಯನ್ನು ಮಾಡಿರುವುದು ಗಮನಿಸಬಹುದಾದ ಅಂಶವಾಗಿದೆ.

ಮಂಜಯ್ಯನ ಪಾತ್ರವನ್ನು ಕಾದಂಬರಿಕಾರರು ಶುದ್ಧ ಕೆಡುಕಿನ ಪ್ರತೀಕವಾಗಿಯೂ ಚಿತ್ರಿಸಿದ್ದಾರೆ. ಕೆಡುಕು ತನ್ನನ್ನು ತಾನು ಬಲವಾಗಿ ಎಲ್ಲದರೊಡನೆಯೂ ಹೆಣೆದುಕೊಂಡು ಹೆಣಿಗೆಯ ವ್ಯಾಪ್ತವಾದ ಮೂರ್ತರೂಪವೇ ಮಂಜಯ್ಯ. ಕಾಮದ ನಕಾರಾತ್ಮಕ ಶಕ್ತಿಗಳೆಲ್ಲಾ ಅವನಲ್ಲಿ-ಪರ್ಯಾಪ್ತ ದ್ರಾವಣವಾಗಿ ಸಾಂದ್ರಗೊಂಡಿವೆ. ಅವನ ತೀವ್ರತೆ, ಅದರಿಂದ ಉದ್ಭಮಿಸುವ ಕ್ರೌರ್ಯ, ಸುಳ್ಳು, ಸಂಚು, ಕೊಲೆ ಮಾಡುವಂತಹ ಕ್ರೋಧ, ಮೋಸ, ಸ್ವಾರ್ಥ ಇವು ಅವನನ್ನು ಒಬ್ಬ ತೀವ್ರ ಸಾಂಕ್ರಾಮಿಕ ರೋಗಿಯನ್ನಾಗಿಸುತ್ತದೆ. ಹಾಗಾಗಿ ಅವನ ಪರಿಧಿಗೆ ಬಂದವರೆಲ್ಲಾ, ತಮ್ಮ ಮನಸ್ಸಿನ ಸ್ವಾಸ್ಥ್ಯವನ್ನು ಕಳೆದುಕೊಂಡು ತಮ್ಮ ಅಸ್ತಿತ್ವದ ವಿನಾಶದ ಅಂಚಿಗೆ ಬರುತ್ತಾರೆ. ಹಾಗಾಗಿ ಅವನನ್ನು ಹೇಗೆಯೂ ಸಮಾಜದ ಮುಖ್ಯ ವಾಹಿನಿಗೆ ಸೇರಿಸಲು ಸಾಧ್ಯವೇ ಆಗದ್ದರಿಂದಾಗಿ, ದೇಹದ ಕೊಳೆತ ಭಾಗವನ್ನು ನಿರ್ದಾಕ್ಷಿಣ್ಯವಾಗಿ ಕತ್ತರಿಸಿ ಬೇರ್ಪಡಿಸುವಂತೆ ಮಂಜಯ್ಯನ ಪಾತ್ರಕ್ಕೆ ಸಾವನ್ನು ತಂದುಕೊಡುವುದರ ಮೂಲಕ ಸಮಾಜದಿಂದ ಆತನನ್ನು ಬೇರ್ಪಡಿಸುತ್ತಾರೆ. ಹೀಗೆ ಮಂಜಯ್ಯನ ಸಾವಿನೊಂದಿಗೆ ಎಲ್ಲ ಕಡೆ ಹರಡಿ, ಎಲ್ಲರನ್ನೂ ಸುತ್ತುವರೆದಿದ್ದ ಕೆಡುಕು–ಕೆಡುಕಿನ ರೂಪ ಸಾಯುತ್ತದೆ. ಹೀಗೆ ಕಾದಂಬರಿಯ ಮುಖ್ಯ ಆಶಯಕ್ಕೆ ಪೂರಕವಾಗಿ ಮಂಜಯ್ಯನ ಪಾತ್ರ ನಿರ್ಮಿತಗೊಂಡಿದೆ.

********** .

## 'ರವೀಂದ್ರ'

'ತಂತು' ಕಾದಂಬರಿಯ ಪ್ರಧಾನ ಪುರುಷಪಾತ್ರ ರವೀಂದ್ರ. ಈತ ಇಂಡಿಯನ್ ಟ್ರಿಬ್ಯೂನ್ ಪತ್ರಿಕೆಯ ರೆಸಿಡಂಟ್ ಎಡಿಟರ್. ಈತ ತನ್ನೂರಾದ ಬಸವನಪುರದಲ್ಲಿ ಚೆನ್ನಕೇಶವ ದೇವಾಲಯದ ಸರಸ್ವತಿ ವಿಗ್ರಹ ಕಳ್ಳತನವಾಗಿರುವುದನ್ನು ತಿಳಿದು, ಊರಿಗೆ ಬರುತ್ತಾನೆ. ಅಲ್ಲಿಯೂ ಕೂಡ ಪಟ್ಟಣದ ಗಾಳಿ ಬೀಸಿ ಬದಲಾವಣೆಯಾಗಿರುತ್ತದೆ. ಊರಿನಲ್ಲಿನ ಜಾತೀಯತೆ, ರಾಜಕೀಯ ಕಂಡು ರವೀಂದ್ರ ರೋಸಿ ಹೋಗುತ್ತಾನೆ. ಅಲ್ಲಿ ಗಾಂಧೀವಾದಿಯಾದ ಅಣ್ಣಯ್ಯ ಈತನಿಗೆ ಸಿಗುತ್ತಾನೆ. ಗಾಂಧಿತತ್ವ ಆಧಾರಿತ ವಿವೇಕಾನಂದ ಶಾಲೆಯನ್ನು ಪ್ರಾರಂಭಿಸಿರುವುದಾಗಿ ಹೇಳುತ್ತಾನೆ. ರವೀಂದ್ರನ ಮಗ ಅನೂಪ ಕೆಟ್ಟ ಅಭ್ಯಾಸವನ್ನು ಕಲಿತುಕೊಂಡಿರುವವನು, ಹೆಂಡತಿ ಆಧುನಿಕ ಮನೋಧರ್ಮದವಳು. ಹಳ್ಳಿಗೆ ಬಂದಿರುವ ರವೀಂದ್ರ ಮಗನನ್ನು ಸುಧಾರಿಸಲು ವಿವೇಕಾನಂದ ಶಾಲೆಗೆ ಸೇರಿಸುತ್ತಾನೆ.

ರವೀಂದ್ರ ಕಳ್ಳಸಾಗಾಣಿಕೆ ಮಾಡಿದ ಸರಸ್ವತಿ ವಿಗ್ರಹ ಕುರಿತು ಒಂದು ಲೇಖನ ಬರೆಯುತ್ತಾನೆ. ಅದರ ಜೊತೆಯೇ ಕಲ್ಲಿನ ಗಣಿಯಲ್ಲಿ ಜೀತದಾಳುಗಳ ಶೋಷಣೆ, ಜೋಗಿ ಬೆಟ್ಟದಲ್ಲಿ ಕಬ್ಬಿಣದ ಅದರನ್ನು ರಾಜಕಾರಣಿಗಳು ಬಳಸುವುದರ ಎಲ್ಲ ವಿವರಗಳನ್ನು ಎಳೆಎಳೆಯಾಗಿ ತನ್ನ ಪತ್ರಿಕೆಯಲ್ಲಿ ಬಿಚ್ಚಿಡುವನು. ರವೀಂದ್ರನ ಈ ಕಾರ್ಯಾಚರಣೆಯಿಂದಾಗಿ ಪತ್ರಿಕೆಯ ಮಾಲೀಕನಿಗೆ ಕೇಂದ್ರದಿಂದ ಕಿರುಕುಳ ಪ್ರಾರಂಭವಾಗುತ್ತದೆ. ರವೀಂದ್ರನ ಮೇಲೆ ಮಾಲೀಕರ ಒತ್ತಡ ಬರುತ್ತದೆ. ಇದರಿಂದ ಪತ್ರಿಕಾ ಸ್ವಾತಂತ್ರ್ಯಕ್ಕೆ ಧಕ್ಕೇ ಉಂಟಾಯಿತೆಂದು ರವೀಂದ್ರ ರಾಜೀನಾಮೆ ನೀಡುತ್ತಾನೆ. ಇದೇ ಸಂದರ್ಭದಲ್ಲಿ ಕಾದಂಬರಿಕಾರರು ರವೀಂದ್ರನ ವೈಯಕ್ತಿಕ ಬದುಕಿನ ದುರಂತಗಳನ್ನು ಕಾದಂಬರಿಯಲ್ಲಿ ಬಿಡಿಸಿಡುತ್ತಾ ಹೋಗುತ್ತಾರೆ. ಈತನ ಹೆಂಡತಿ ಆಧುನಿಕ ಮನೋಧರ್ಮದವಳಾದ ಕಾಂತಿ ತನ್ನ ತಂದೆಯ ಹುಟ್ಟು-ಹಬ್ಬದ ನಿಮಿತ್ತ

ದೆಹಲಿಗೆ ಹೋದವಳು ಅಲ್ಲಿಯೇ ಉಳಿದು ನಿರ್ಯಾತ ಉದ್ದಿಮೆ ಪ್ರಾರಂಭಿಸುತ್ತಾಳೆ. ಗಂಡನಿಗೆ ಒಂದು ಮಾತನ್ನು ಕೇಳುವುದಿಲ್ಲ. ಆದ್ದರಿಂದ ಅವನು ಅವಳ ಪಾಡಿಗೆ ಅವಳನ್ನು ಇರಲು ಬಿಟ್ಟು ಬಿಡುತ್ತಾನೆ. ವಿದ್ಯಾಶಾಲೆಯಲ್ಲಿ ರವೀಂದ್ರನಿಗೆ ಸ್ನೇಹಿತ ಹೊನ್ನತ್ತಿಯ ಭೇಟಿಯಾಗುತ್ತದೆ. ಅವನಿಗೆ ಸಹಾಯಮಾಡಿ ಸಹೋದರ ಪ್ರೀತಿ ತೋರುತ್ತಾನೆ. ಆದರೆ ದೆಹಲಿಗೆ ಹೋದಮೇಲೆ ಕಾಂತಿಯ ಜೊತೆ ಹೊನ್ನತ್ತಿ ಅನೈತಿಕ ಸಂಬಂಧವಿಟ್ಟುಕೊಂಡಿರುವುದಾಗಿ ಅನಾಮಧೇಯ ಪತ್ರದ ಮೂಲಕ ತಿಳಿದಾಗ ಅವನ ಮನಸ್ಸಿಗೆ ನೋವಾಗುತ್ತದೆ. ನಿಜಾಂಶ ತಿಳಿಯಲು ದೆಹಲಿಗೆ ಹೋದ ಮೇಲೆ ಅದು ಸತ್ಯವೆಂದು ತಿಳಿದು ಉತ್ಸಾಹಹೀನನಾಗುತ್ತಾನೆ. ತನ್ನನ್ನು ತ್ಯಜಿಸಿ ಹೋಗಿದ್ದರಿಂದ ಕಾಂತಿ ಸ್ವತಂತ್ರಳು ಎಂದು ನಿರ್ಲಿಪ್ತ ಭಾವನೆ ತಾಳುತ್ತಾನೆ. ಹೊನ್ನತ್ತಿಯನ್ನು ಕಂಡಾಗ ಅದೇ ಭಾವನೆ ತಾಳಿ ಅವನನ್ನು ಕ್ಷಮಿಸುತ್ತಾನೆ.

ವೈಯಕ್ತಿಕ ಬದುಕಿನಲ್ಲಾದ ದುರಂತವನ್ನು ಮರೆಯಲು ರವೀಂದ್ರ ದೆಹಲಿಯಲ್ಲಿ ;ದಿ ಫ್ಯಾಕ್ಟ್' ಎಂಬ ಪತ್ರಿಕೆ ಸೇರಿಕೊಳ್ಳುತ್ತಾನೆ. ಪತ್ರಿಕೆಯ ಮೂಲಕ ರಾಜಕೀಯದಲ್ಲಿ ನಡೆಯುವ ಘಟನೆಗಳನ್ನು ಬಹಿರಂಗಗೊಳಿಸುವುದರಿಂದ ಸರಕಾರದ ವಿರೋಧಕ್ಕೆ ಒಳಗಾಗುತ್ತಾನೆ. ಅದೇ ಸಮಯದಲ್ಲಿ ಇಂದಿರಾಗಾಂಧಿ ತುರ್ತು ಪರಿಸ್ಥಿತಿ ಘೋಷಿಸಿದಾಗ, ಈತನನ್ನು ಸೆರೆಮನೆಗೆ ತಳ್ಳುತ್ತಾರೆ. ಸೆರೆಯಲ್ಲಿರುವಾಗ ಲಂಡನ್ ಪತ್ರಿಕೆಯವರು ವಿಗ್ರಹ ಕಳ್ಳತನದ ಕುರಿತು ವಿವರವಾದ ಲೇಖನ ಬರೆದದ್ದು ಅವನ ಕೈ ಸೇರುತ್ತದೆ. ತಾನು ಪ್ರಾರಂಭಿಸಿದ ಕಾರ್ಯವನ್ನು ವಿದೇಶಿ ಪತ್ರಕರ್ತ ಮುಗಿಸಿರುತ್ತಾನೆ ಎಂಬುದನ್ನು ತಿಳಿದುಕೊಂಡ ರವೀಂದ್ರ ಸತ್ಯಾನ್ವೇಷಣೆಯೇ ಪತ್ರಕರ್ತನ ಧರ್ಮವೆಂದುಕೊಳ್ಳುತ್ತಾನೆ. ಇದರೊಂದಿಗೆ 'ತಂತು' ಕಾದಂಬರಿಯು ಮುಕ್ತಾಯಗೊಳ್ಳುತ್ತದೆ.

ಎಸ್.ಎಲ್.ಭೈರಪ್ಪನವರು ಸ್ವಾತಂತ್ರ್ಯಾನಂತರದ ಕಾಲದಿಂದ ೧೯೭೭ರ ತುರ್ತುಪರಿಸ್ಥಿತಿಯ ಕಾಲದವರೆಗೆ ಭಾರತದಲ್ಲಾದ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ, ನೈತಿಕ ಸ್ಥಿತ್ಯಂತರಗಳನ್ನು ಗುರುತಿಸುವ ಉದ್ದೇಶಗಳನ್ನಿಟ್ಟುಕೊಂಡು ರಚಿಸಿರುವ, ಈ ಕಾದಂಬರಿಯಲ್ಲಿ ಆಯ್ಕೆ ಮಾಡಿಕೊಂಡಿರುವ ನಾಯಕ ಪಾತ್ರ ಪತ್ರಕರ್ತನಾದ ರವೀಂದ್ರನದು. ಇಡೀ ದೇಶದ ಪರಿಸ್ಥಿತಿಯನ್ನು ಈ ಒಂದು ಪ್ರಮುಖವಾದ ಪಾತ್ರದ ಮೂಲಕ ಪರಿಚಯಿಸುತ್ತಾರೆ. ದೇಶದ ಪರಿಸ್ಥಿತಿಯನ್ನು ಪರಿಚಯಿಸುವ ನಾಯಕ ಪಾತ್ರಕ್ಕೆ ಒಂದು ವೈಯಕ್ತಿಕತೆಯನ್ನು ಕೊಡುವ ಸಲುವಾಗಿ, ಆತನ ಹೆಂಡತಿ ಮಗ ಒಟ್ಟು ಕುಟುಂಬದ ಚಿತ್ರಣವನ್ನು ಕೊಡುತ್ತಾರೆ. ನಿಷ್ಠಾವಂತರಾದ ಪತ್ರಕರ್ತರಿದ್ದಷ್ಟು ದೇಶದ ಪರಿಸ್ಥಿತಿ ಉತ್ತಮವಾಗುತ್ತದೆ ಎಂಬುದನ್ನು ತಿಳಿಸುವ ಸಲುವಾಗಿ ಮತ್ತು ಒಬ್ಬ ನಿಷ್ಠಾವಂತ ಪತ್ರಕರ್ತನಿಂದ ಮಾತ್ರ ದೇಶದ ರಾಜಕೀಯ ಅಧಃಪತನ, ನೈತಿಕ ಅಧಃಪತನ ಹಾಗೂ ಸಂಸ್ಕೃತಿಯ ಅಧಃಪತನವನ್ನು ಹೊರಗೆಡಲು ಸಾಧ್ಯವಾಗುವುದು ಎನ್ನುವ ಕಾರಣದಿಂದ ಪತ್ರಕರ್ತನಾದ ರವೀಂದ್ರನ ಪಾತ್ರವನ್ನು ಸೃಷ್ಟಿಸುತ್ತಾರೆ. ಜಾತಿಯತೆಯ ಹಾವಳಿ, ಭ್ರಷ್ಟತೆ, ತನ್ನ ಸಂಸ್ಕೃತಿ-ಪರಂಪರೆಯ ಬಗ್ಗೆ ಅರಿವಿಲ್ಲದೆ, ಹೆಮ್ಮೆಯಿಲ್ಲದ, ಕಾಳಜಿ ಇಲ್ಲದ ಜನತೆ ವಿದೇಶ ವ್ಯಾಮೋಹ, ಮನುಷ್ಯನ ಸಣ್ಣತನ ದುಷ್ಟತೆ ಇವುಗಳ ನಡುವೆ ತಮ್ಮ ಆದರ್ಶಗಳನ್ನು, ಜೀವನ ಮೌಲ್ಯಗಳನ್ನು ತಮ್ಮ ಕನಸುಗಳನ್ನು ಒಳ್ಳೆಯತನವನ್ನು ಉಳಿಸಿಕೊಳ್ಳಲು ಹೋರಾಡಬೇಕಾಗಿ ಬಂದ, ಹೆಣಗಬೇಕಾಗಿ ಬಂದ ಅಸಹಾಯಕ ಪಾತ್ರವಾಗಿ ರವೀಂದ್ರನ ಪಾತ್ರ ಸೃಷ್ಟಿಯ 'ಕಥನಶಿಲ್ಪ'ವು ಕಾದಂಬರಿಯಲ್ಲಿ ಏರ್ಪಟ್ಟಿರುವುದನ್ನು ಗಮನಿಸಬಹುದಾಗಿದೆ.

**********

## 'ನಾಗಭಟ್ಟ/ಕೃಷ್ಣಾನಂದ'

ಎಸ್.ಎಲ್.ಭೈರಪ್ಪನವರ 'ಸಾರ್ಥ' ಕಾದಂಬರಿಯ ಪ್ರಮುಖ ಪಾತ್ರ ನಾಗಭಟ್ಟ/ಕೃಷ್ಣಾನಂದ. ಈತ ಯಜ್ಞಭಟ್ಟನ ಮಗನಾಗಿ, ಪರಂಪರೆಯಿಂದ ಬಂದ ಬ್ರಾಹ್ಮಣ ವೃತ್ತಿಗೆ ವಿರುದ್ಧವಾಗಿ, ಒಡೆಯನ ಜೊತೆಗೆ ಗೆಳೆಯನೂ ಆದ ಅಮರುಕ ಮಹಾರಾಜನ ಮಾತಿಗೆ ಒಪ್ಪಿ, ರಾಜ್ಯದ ವಾಣಿಜ್ಯಾಧ್ಯಕ್ಷನಾಗುವ ನಿರೀಕ್ಷೆಯಲ್ಲಿ, ರಾಜ್ಯದ ವಾಣಿಜ್ಯ ಕ್ಷೇತ್ರವನ್ನು ವಿಸ್ತರಿಸುವ ಸಲುವಾಗಿ, ವೈಶ್ಯ ವೃತ್ತಿಯತ್ತ ವಾಲಿದ. ರಾಜನಾದ ಅಮರುಕನ ಆಜ್ಞೆಯ ಮೇರೆಗೆ ಸಾರ್ಥದ ಮರ್ಮವನ್ನು ಅರಿಯುವ ಸಲುವಾಗಿ, ಹೊರಟ ನಾಗಭಟ್ಟ ಸಾರ್ಥದಲ್ಲಿ ಕಂಡದ್ದು ಇಡೀ ಭರತ ಖಂಡವನ್ನು. ಕಥಾನಾಯಕನಾದ ನಾಗಭಟ್ಟನ ಪ್ರವಾಸ ಕಥನದಂತೆ 'ಸಾರ್ಥ' ಕಾದಂಬರಿಯೂ ನಿರೂಪಿತಗೊಂಡಿದೆ.

'ವೈದಿಕ ಪರಂಪರೆಯಲ್ಲಿ ಸಾರ್ಥರನ್ನು, ಪಯಣಿಗರನ್ನು ರಕ್ಷಿಸಲೆಂದೇ ನಿಯುಕ್ತನಾಗಿರುವ ಒಂದು ದೇವತೆ ಇಲ್ಲವೆನ್ನುವ ಕಾರಣದಿಂದ, ಅಂತಹ ರಕ್ಷಣೆಯ ಕಾರ್ಯಕ್ಕೆ ಬೌದ್ಧಧರ್ಮದಲ್ಲಿ ಪ್ರತ್ಯೇಕವಾಗಿಯೇ ಇದ್ದ ಮಣಿಭದ್ರಯಕ್ಷನನ್ನು ನಂಬಿದ್ದ ಸಾರ್ಥವಾಹರು ಬೌದ್ಧಧರ್ಮದತ್ತವಾಲುತ್ತಿದ್ದ ಅರಿವನ್ನು ಕಾದಂಬರಿಕಾರರು ನಾಗಭಟ್ಟನ ಪಾತ್ರದ ಮೂಲಕ ನೀಡುತ್ತಾರೆ. ಬೌದ್ಧಧರ್ಮವು ಶ್ರೇಷ್ಠತೆಯನ್ನು ಸಾಧಿಸಲು ವೈದಿಕ ಧರ್ಮವನ್ನುಹಳಿಯುತ್ತಾ, ಅಲ್ಲಿನ ಎಷ್ಟೋ ವಿಷಯಗಳನ್ನು ತಮ್ಮ ಧರ್ಮಕ್ಕೆ ಸೇರಿದವು ಎಂದು ಪ್ರತಿಪಾದಿಸುತ್ತಾ, ಹಿರಿಮೆಯನ್ನು ಸಾಧಿಸಲು ಶ್ರಮಿಸುತ್ತಿದ್ದ ಸಮಯದಲ್ಲಿ, ಇಡೀ ಭರತ ಖಂಡದಲ್ಲಿ ನಡೆಯುತ್ತಿದ್ದ ವಿದ್ಯಮಾನಗಳಿಗೆ ಸಾಕ್ಷಿಯಾಗಿ ನಾಗಭಟ್ಟನ ಪಾತ್ರ ರಚನೆ ಆಗಿದೆ.

ಮಥುರೆಯಲ್ಲಿ ವೈದಿಕ ಧರ್ಮಾನುಯಾಯಿಯಾದ ಸ್ಥಪತಿಯ ಸಂಪರ್ಕದಲ್ಲಿರುವಾಗ ಬೌದ್ಧ ಚೈತ್ಯದಲ್ಲಿ, ವೈದಿಕ ಪುರಾಣದ ದೇವ ದೇವತೆಗಳಲ್ಲಿ ಅವರ ಮತದ ವೇಷ ತೊಡಿಸಿ ರೂಪಾಂತರ ಕ್ರಿಯೆಯು ಉದ್ದೇಶಪೂರ್ವಕವಾಗಿಯೇ ನಡೆಯುತ್ತಿದ್ದ ತಂತ್ರಗಾರಿಕೆಯ ದರ್ಶನವನ್ನು ನಾಗಭಟ್ಟನಿಗೆ ಮಾಡಿಸಿ, ಆ ಮೂಲಕ ಒಂದು ಮತವು ತನ್ನ ಶ್ರೇಷ್ಠತೆಯನ್ನು ಎತ್ತಿ ಹಿಡಿಯಲು ಇನ್ನೊಂದು ಧರ್ಮವನ್ನು ಬಳಸಿಕೊಳ್ಳುತ್ತಿದ್ದ ಜಾಣತನವನ್ನು ನಾಗಭಟ್ಟನ ಪಾತ್ರದ ಮೂಲಕ ಗುರುತಿಸುತ್ತಾರೆ.

ಬೌದ್ಧಧರ್ಮದವರೊಂದಿಗೆ ಸ್ಪರ್ಧೆಗಿಳಿದ ವೈದಿಕ ಧರ್ಮದವರು ನಾಟಕಗಳ ಮೂಲಕ ಪೌರಾಣಿಕ ದೇವತೆಗಳ ಶ್ರೇಷ್ಠತೆಯನ್ನು ಎತ್ತಿ ಹಿಡಿಯಲು ಪ್ರಯತ್ನಿಸಿದ ಸಂದರ್ಭದಲ್ಲಿ, ನಾಗಭಟ್ಟನನ್ನು ಕಾದಂಬರಿಕಾರರು ಕೃಷ್ಣನ ಪಾತ್ರಕ್ಕೆ ಅಯ್ಕೆ ಮಾಡಿಸಿ, ಹುಟ್ಟಿನಿಂದ ತನ್ನದಲ್ಲದ ವೃತ್ತಿಯನ್ನು ಎರಡನೆಯ ಬಾರಿಯೂ ಕೈಗೊಳ್ಳುವಂತೆ ಚಿತ್ರಿಸಿ, ತನ್ನ ಬದುಕಿಗೆ ಸಂಬಂಧಿಸಿದ ಬಹು ಮಹತ್ವದ ಯಾವುದೆ ನಿರ್ಣಯಗಳನ್ನು ಸ್ವಂತವಾಗಿ ಮಾಡಲಾರದ ನಾಗಭಟ್ಟನನ್ನು ಸ್ವಂತಿಕೆ ಕಳೆದುಕೊಂಡ ಯಾವುದೇ ವ್ಯಕ್ತಿಯ ಪ್ರತಿರೂಪದಂತೆ ಪರಿಚಯಿಸುತ್ತಾರೆ.

ಹೀಗೆ ಕಾದಂಬರಿಕಾರರು ನಾಗಭಟ್ಟನನ್ನು ಕಾದಂಬರಿಯಲ್ಲಿ ಕಲಾವಿದನನ್ನಾಗಿ ಪರಿಚಯಿಸಿ, ನಾಯಕಿ ಪಾತ್ರವಾದ ಚಂದ್ರಿಕೆಯೊಂದಿಗೆ ಜೊತೆಗೂಡಿಸಿ, ನಾಗಭಟ್ಟನ ಪಾತ್ರದ ಬೆಳವಣಿಗೆಗೆ ಅವಕಾಶವನ್ನು ಮಾಡುತ್ತಾರೆ. ನಾಟಕದಲ್ಲಿ ತನ್ನ ಜೊತೆ ನಟಿಸುವ ನಟಿ ಕಸುಬಿನ ಚಂದ್ರಿಕೆಯನ್ನು ಪ್ರೇಮಿಸಿ, ಅವಳ ಸಂಗದಲ್ಲಿ ನೆಮ್ಮದಿಯನ್ನು ಕಾಣಲು ಪ್ರಯತ್ನಿಸುತ್ತಾನೆ. ಆದರೆ ನಾಗಭಟ್ಟನ ದೈಹಿಕ ಅವಶ್ಯಕತೆಯನ್ನು ಪೂರೈಸಲಾಗದೇ ಚಂದ್ರಿಕೆ ದೂರವಾಗುತ್ತಾಳೆ. ಆಕೆಯಿಂದ ಪಡೆಯಲಾಗದ ದೈಹಿಕ ಸುಖವನ್ನು ನಾಗಭಟ್ಟ ಸುಗಂಧಿಯಿಂದ ಪಡೆಯಲು ಪ್ರಯತ್ನಿಸಿದ, ಅದಕ್ಕೂ ಚಂದ್ರಿಕೆಯೇ ಕಾರಣಳಾಗಿದ್ದು ನಾಗಭಟ್ಟನ ಸ್ವಂತಿಕೆ ಕಾಣುವುದಿಲ್ಲ. ಕಲಾವಿದನಾಗಿ ಬೆಳೆದ

'ನಾಗಭಟ್ಟ'ನ ಹೆಸರೂ ಕ್ರಮೇಣವಾಗಿ 'ಕೃಷ್ಣಾನಂದ' ಎಂಬುದಾಗಿ ಮಾರ್ಪಾಡಾಗುತ್ತದೆ. ಈ ಮಾರ್ಪಾಡು ಕೂಡ ಸ್ವ-ಇಚ್ಛೆಯಿಂದ ನಡೆದುದಲ್ಲ.

ಗೆಳೆಯ ಅಮರುಕ ಮತ್ತು ಹೆಂಡತಿ ಶಾಲಿನಿಯರ ಅಂತರಂಗ-ಬಹಿರಂಗಗಳನ್ನು ತಿಳಿಯಬೇಕೆಂಬ ಹಂಬಲದಲ್ಲಿ, ನಾಗಭಟ್ಟನು ಸನ್ಯಾಸಿಯೊಬ್ಬನನ್ನು ಗುರುವಾಗಿ ಪಡೆದು ಯೋಗ ವಿದ್ಯೆಯನ್ನು ಕಲಿಯಲು ಪ್ರಯತ್ನಿಸಿದ. ಆದರೆ ಆತನ ಗುರಿ ಸರಿಯಿಲ್ಲದ ಕಾರಣ ವಿದ್ಯಾಸಿದ್ಧಿ ಪ್ರಾಪ್ತವಾಗಲಿಲ್ಲ. ನಾಗಭಟ್ಟ ತನ್ನ ಗುರಿಸಾಧನೆಗಾಗಿ ತಂತ್ರ ವಿದ್ಯೆ ಕಲಿತ. ಅಸಹ್ಯ ರೂಕ್ಷ ಎಂದೆಲ್ಲಾ ಅನಿಸಿದರೂ, ಅವೆಲ್ಲವನ್ನೂ ಗೌಣ ಮಾಡಿ ತಾಂತ್ರಿಕಾಚರಣೆಗಳನ್ನು ಕಲಿತು ಪಂಚಮ ಕಾರಗಳಿಗೆ ಮಹತ್ವ ನೀಡಿ, ಸಿದ್ಧಿಯ ಕೊನೆಯ ಹಂತವಾದ ಯೋನಿಪೂಜೆಗೆ, ಚಂದ್ರಿಕೆಯೇ ಬೇಕು ಎಂಬ ಹಠದಿಂದ, ಪಾಟಲೀಪುತ್ರದಲ್ಲಿದ್ದ ಚಂದ್ರಿಕೆಯ ಸುಳಿವು ಪಡೆದು, ಕಂಡು, ಒಪ್ಪಿಸಿ, ಯೋನಿ ಪೂಜೆಯನ್ನು ಪೂರೈಸಿದ. ಆ ಸಂದರ್ಭದಲ್ಲಿ ಅವಳ ಬದುಕಿನ ಕತೆ ಕೇಳಿದ ನಾಗಭಟ್ಟನಿಗೆ ಅವಳ ಸಾತ್ವಿಕ ಸ್ವಭಾವಕ್ಕೆ ತನ್ನ ಸ್ವಭಾವ ವಿರುದ್ಧವಾದದ್ದು ಎನಿಸಿಬಿಡುತ್ತದೆ. ಮುಂದೆ ವಜ್ರಪಾದ ಭಿಕ್ಷು ಮತ್ತು ವಿಶ್ವಕರ್ಮ ಸ್ಥಪತಿಯರನ್ನು ಕಂಡು, ನಾಲಂದಕ್ಕೆ ವಿದ್ಯೆ ಕಲಿಯಲು ಹೊರಡುತ್ತಾನೆ. ಆ ಹೊತ್ತಿಗೆ ವೈದಿಕ ಧರ್ಮದ ವಿಶ್ವಕರ್ಮ ಸ್ಥಪತಿ ಬೌದ್ಧ ಧರ್ಮವನ್ನು ಅವಲಂಬಿಸಿದ್ದ. ಇವರ ಜೊತೆಯಲ್ಲಿ ಬೌದ್ಧ ತಾಂತ್ರಿಕಾಚಾರಗಳ ಪರಿಚಯವನ್ನು ಮಾಡಿಕೊಂಡ ನಾಗಭಟ್ಟ, ಅವರೆಗಿನ ತನ್ನ ಅನುಭವಗಳ ಫಲವಾಗಿ ಬುದ್ಧಗಯೆಗೆ ಹೋಗಿಯು ಶ್ರಾದ್ಧ ಮಾಡಬೇಕೆ ಅಥವಾ ಮಾಡಬಾರದೆ ಎಂಬ ಜಿಜ್ಞಾಸೆಯಲ್ಲಿ ಮಾತಾ-ಪಿತೃಗಳ ಶ್ರಾದ್ಧವನ್ನು ಮಾಡದೇ, ಕರ್ಮ ಕಾಂಡದ ಬಗ್ಗೆ ಅನುಮಾನಗಳನ್ನು ಬೆಳೆಸಿಕೊಂಡ .

ನಂತರ ಜಯಸಿಂಹನ ಜೊತೆಗೆ ಮಥುರೆಗೆ ಬಂದ ನಾಗಭಟ್ಟ, ಸಾರ್ಥಗಳು ಬೀಡುಬಿಡುವ ಸ್ಥಳಕ್ಕೆ ಹೋಗಿ ವಾಯುವ್ಯ ನಾಡುಗಳಿಗೆ ಹೋಗಿ

ಹಿಂತಿರುಗಿದ್ದ. ಸಾರ್ಥಗಳಿಂದ 'ಆ ಕಡೆ ಎಲ್ಲ ಮ್ಲೇಚ್ಛರ ಆಡಳಿತ, ನಮ್ಮವರ ಸಾರ್ಥದ ಸರಕುಗಳನ್ನು ಅವರಿಗೆ ಕೊಟ್ಟು ಅವರು ಕೊಡುವ ಬೆಲೆಯನ್ನು ಪಡೆದು ಹಿಂತಿರುಗಬೇಕು. ನೇರವಾಗಿ ಮಿತ್ರ, ರೋಮಕಗಳೊಡನೆ ವ್ಯಾಪಾರವನ್ನು ತಡೆದಿದ್ದಾರೆ' ಎಂಬ ಆ ಕಾಲದ ವಾಣಿಜ್ಯ ಪರಿಸ್ಥಿತಿಯನ್ನು ಇಂತಹ ಅನೇಕ ಸಮಕಾಲೀನ ವಿಷಯಗಳನ್ನು ತಿಳಿಸುವ ಸಲುವಾಗಿ ನಾಗಭಟ್ಟನ ಪಾತ್ರ ಸೃಷ್ಟಿಯಾಗಿದೆ. ಅಲ್ಲದೆ ಮಾಹಿಷ್ಮತಿಯಲ್ಲಿ ಶಂಕರಾಚಾರ್ಯ, ಮಂಡನ ಮಿಶ್ರ ಮತ್ತು ಭಾರತೀ ದೇವಿಯರ ನಡುವೆ ನಡೆದ ವಾದ, ಚರ್ಚೆ ಮತ್ತು ಗೆಲುವು ಸೋಲುಗಳು ಮಾತ್ರವಲ್ಲದೆ, ಶಂಕರಾಚಾರ್ಯರು ಸತ್ತ ಅಮರುಕನ ದೇಹವನ್ನು ಪ್ರವೇಶಿಸಿ, ಸ್ತ್ರೀ ಸಂಗದಲ್ಲಿ ದೈಹಿಕ ಸುಖದ ಅನುಭವವನ್ನು ಪಡೆದದ್ದು ಇತ್ಯಾದಿ ಎಲ್ಲ ವಿಚಾರಗಳಿಗೂ ನಾಗಭಟ್ಟನ ಪಾತ್ರವೂ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸಾಕ್ಷಿಯಾಗಿ ನಿಲ್ಲುತ್ತದೆ.

ಹೀಗೆ ಹೆಂಡತಿಯನ್ನು ಅಗಲಿ, ಹೆಚ್ಚಿನ ವಿದ್ಯಾರ್ಜನೆಯ ನೆಪದಿಂದ, ಹುಟ್ಟಿನಿಂದ ತನ್ನದಲ್ಲದ ವೈಶ್ಯ ವಿದ್ಯೆಯನ್ನು ತಿಳಿಯುವ ಸಲುವಾಗಿ, ಗೆಳೆಯನ ಮಾತಿನಂತೆ ಸಾರ್ಥದ ಜೊತೆ ಹೊರಟ ನಾಗಭಟ್ಟ ಮಥುರೆ, ಪಾಟಲೀಪುತ್ರ ಮತ್ತು ನಲಂದಾಗಳಲ್ಲಿ ಇದ್ದು, ಹೊರಪ್ರಪಂಚವನ್ನು ತಿಳಿಯಲು ಪ್ರಯತ್ನಿಸಿ, ತನ್ನ ಮೂಲ ಕ್ಷೇತ್ರವಾದ ತಾರಾವತಿ ಮತ್ತು ವಿದ್ಯಾಕ್ಷೇತ್ರವಾದ ಮಾಹಿಷ್ಮತಿಗಳಲ್ಲಿ ಮತ್ತೆ ತನ್ನನ್ನು ತಾನು ತಿಳಿಯಲು ಪ್ರಯತ್ನಿಸಿ, ಎಲ್ಲ ಕಡೆಯೂ ಸೋತು, ತಂತ್ರ ವಿದ್ಯೆ, ಧ್ಯಾನ, ಬೌದ್ಧಧರ್ಮ ಹೀಗೆ ಹತ್ತು ಹಲವು ವಿದ್ಯೆಯನ್ನು ಕಲಿತಾಗಲು ಜೀವನದಲ್ಲಿ ಸಾರ್ಥಕ್ಯವಿಲ್ಲ ಎನಿಸಿಬಿಡುತ್ತದೆ. ಕೊನೆಯಲ್ಲಿ ಅರಬರ ವಿರುದ್ಧ ನಾಟಕವಾಡಿ ಸೆರೆಯಾಳಾಗುತ್ತಾನೆ. ಚಂದ್ರಿಕೆಯ ಸಹಾಯದಿಂದ ತಪ್ಪಿಸಿಕೊಂಡು ಬಂದು, ಅವಳ ಜೊತೆ ಗೃಹಸ್ಥ ಜೀವನಕ್ಕೆ ತೊಡಗುವುದರ ಮೂಲಕ ಬದುಕಿನಲ್ಲಿ ಸಾರ್ಥಕತೆಯನ್ನು ಕಂಡುಕೊಳ್ಳುತ್ತಾನೆ.

ತನ್ನ ಯಾವ ಗುರಿಯನ್ನು ಸಾಧಿಸಲಾಗದೆ ವಿಫಲನಾಗಿ, ಬದುಕನ್ನು ಅದು ಬಂದಂತೆಯೆ ಎದುರಿಸುವ ನಾಗಭಟ್ಟನ ಜೀವನ ವೃತ್ತಾಂತದಂತೆ, ಕಾದಂಬರಿಕಾರರು 'ಸಾರ್ಥ' ಕಾದಂಬರಿಯನ್ನು ರಚಿಸಿದ್ದರೂ ಕೂಡ, ಇಲ್ಲಿನ ಕಥಾ ನಾಯಕನಾದ ನಾಗಭಟ್ಟ ನಾಟಕ, ಧ್ಯಾನ, ಯೋಗ, ತಂತ್ರ ಇತ್ಯಾದಿಗಳಲ್ಲಿ ತನ್ನನ್ನು ತಾನೆ ತೊಡಗಿಸಿಕೊಂಡು, ಧಾರ್ಮಿಕ ಸ್ಥಿತ್ಯಂತರಗಳು ಮತ್ತು ಆ ಮೂಲಕ ನಾಟಕ ವಾಸ್ತುಶಿಲ್ಪಗಳ ಸ್ವರೂಪದಲ್ಲಾದ ಬದಲಾವಣೆ ಅಥವಾ ರೂಪಾಂತರಗಳನ್ನು ಹಾಗೂ ತನ್ನದಲ್ಲದ ಏನ್ನನ್ನೋ ತನ್ನದಾಗಿಸಿಕೊಳ್ಳುವ, ಯಾವುದೇ ಕ್ರಮದಲ್ಲಿ ಎದುರಾಗುವ ವೈಫಲ್ಯಗಳನ್ನು ಗುರುತಿಸುವವನಂತೆ ಚಿತ್ರಿತಗೊಂಡಿದ್ದಾನೆ.

**********

೬

## 'ಮೋಹನ್‌ಲಾಲ್'

ಎಸ್.ಎಲ್.ಭೈರಪ್ಪನವರ 'ಮಂದ್ರ' ಕಾದಂಬರಿಯ ಕಥಾನಾಯಕ ಮೋಹನ್‌ಲಾಲ್. ಈತ ಹರಿದ್ವಾರ ಸಮೀಪದ ಒಂದು ಹಳ್ಳಿಯ ಅನಾಥ ಬಾಲಕ. ಹುಟ್ಟಿನಿಂದಲೇ ಮಧುರವಾದ ಕಂಠವನ್ನು ಹೊಂದಿರುವ ಈತ ಹೆಚ್ಚು ಜನರು ಸ್ಪಂದಿಸುವ ಗಂಗಾನದಿಯ ದಡದಲ್ಲಿ ಹಾಡು ಹೇಳಿ ಭಿಕ್ಷೆ ಸಂಪಾದಿಸುತ್ತಿದ್ದ. ಹರಿದ್ವಾರದ ಓಂಕಾರದ ಬಾಬಾ ಈತನ ದೈವದತ್ತವಾದ ಮಧುರ ಕಂಠಕ್ಕೆ ಮನಸೋತು ತನ್ನ ಆಶ್ರಮಕ್ಕೆ ಕರೆದೊಯ್ದು ಶಿಕ್ಷಣ ಕೊಡುತ್ತಾನೆ. ಓಂಕಾರ ಬಾಬಾ ಕಲಿಸುತ್ತಿರುವುದು ಈತನಿಗೆ ಸಾಲದಾಗುತ್ತದೆ. ದೊಡ್ಡಗವಾಯಿಯ ಹತ್ತಿರ ಶುದ್ಧ ಸಂಗೀತ ಕಲಿಯುವ ಆಶೆಯಾಗಿ ಸಾಗರದ ಪಂಡಿತ ನಾರಾಯಣ ರೋಹಿಲಾರವರ ಶಿಷ್ಯತ್ವ ಪಡೆಯುತ್ತಾನೆ. ನಂತರ ರಾಜಾ ಸಾಹೇಬರ ಶಿಷ್ಯತ್ವವನ್ನು ಅವರ ಸಾಥೀದಾರನ ಸಹಾಯದಿಂದ ಭೋರೀವಲಯ ಭೈಜನಾರಾಯಣ ಸತ್ತೂನ ಶಿಷ್ಯನಾಗಿ ಮುಂಬಯಿಯಲ್ಲಿ ನೆಲೆಸುತ್ತಾನೆ. ಸ್ವಲ್ಪವೇ ಅವಧಿಯಲ್ಲಿ ಬಹಿರಂಗವಾಗಿ ಕಛೇರಿ ನಡೆಸುವಷ್ಟರ ಮಟ್ಟಿಗೆ ಬೆಳೆಯುತ್ತಾನೆ. ಮುಂಬಯಿಯಲ್ಲಿ ಸಂಗೀತ ರಸಿಕ ಗೋಶೆ ಮುಂತಾದವರ ಸಹಾಯ ಸಹಕಾರಗಳಿಂದ ಈತನ ಸಂಗೀತ ಕಛೇರಿಗಳು ಯಶಸ್ವಿಯಾಗುವುದಲ್ಲದೆ ಪತ್ರಿಕೆಗಳ ಪ್ರಚಾರವು ದೊರೆಯುತ್ತದೆ. ಮುಂಬಯಿ ನಗರವಲ್ಲದೆ ರಾಜಧಾನಿ ದೆಹಲಿ ನಾಗಪುರ ಹಾಗೂ ಉತ್ತರ ಭಾರತ ದಕ್ಷಿಣ ಭಾರತದಲ್ಲೆಲ್ಲ ಕಛೇರಿಗಳು ನಡೆದು ಪಂಡಿತ ಮೋಹನ್‌ಲಾಲ್‌ನೆಂದು ಖ್ಯಾತಿಗಳಿಸುತ್ತಾನೆ. ಈತನ ಕೀರ್ತಿ ಭಾರತ ಮಾತ್ರವಲ್ಲದೆ ಅಮೆರಿಕೆಯ ಕೆಲಿಫೋರ್ನಿಯಾ, ನ್ಯೂಯಾರ್ಕ್, ಪ್ಯಾರಿಸ್ ಮುಂತಾದ ವಿದೇಶಗಳಿಗೂ ಹಬ್ಬುತ್ತದೆ.

ಮೋಹನ್‌ಲಾಲ್‌ನ ಕೀರ್ತಿ ಸಂಗೀತ ಕ್ಷೇತ್ರದಲ್ಲಿ ದೇಶ-ವಿದೇಶಗಳಲ್ಲಿ ತಲೆ ಎತ್ತಿ ನಿಂತರೆ ವೈಯಕ್ತಿಕ ಜೀವನದಲ್ಲಿ ಅದು ಪ್ರಪಾತಕ್ಕೆ ಬೀಳುತ್ತದೆ. ಅತಿ ಕಾಮಿಯಾಗಿರುವ ಈತನ ಕಾಮ, ದಾಂಪತ್ಯ ಜೀವನಕ್ಕೆ ಮಾತ್ರ ಸೀಮಿತವಾಗದೆ ಕುಟುಂಬದ ಹೊರಗೂ ಕಾಲು ಚಾಚುತ್ತದೆ. ತಾರುಣ್ಯದಲ್ಲಿ ಕಾಲಿಡುವಾಗಲೆ ಕಾಮವು ಈತನನ್ನೂ ಜರ್ಜರಿತಗೊಳಿಸುತ್ತದೆ. ಚಿತ್ರಪುರದಲ್ಲಿ ಸಾಧನೆ ಮಾಡುತ್ತಿರುವಾಗ ದಿನಾಲೂ ಊಟ ತಂದು ಕೊಡುತ್ತಿದ್ದ. ಚುನ್ನಿ ಎಂಬ ಬಡ ಹೆಂಗಸನ್ನು ಬಗಲಿಗೇರಿಸಿಕೊಳ್ಳುತ್ತಾನೆ. ಇವನಿಂದ ಎರಡು ಮಕ್ಕಳೂ ಆಗುತ್ತವೆ. ಇಪ್ಪತ್ತೈದು ರೂಪಾಯಿಗೆ ತಂಬೂರಿಯನ್ನು ಒತ್ತೆಯಿಟ್ಟು ಮುಂಬಯಿಯ ಸುಕಲಾಜಿ ಗಲ್ಲಿಗೂ ಹೋಗಿ ಬರುತ್ತಾನೆ. ರಾಮಕುಮಾರಿ ಎಂಬ ಬಡ ಹೆಂಗಸಿನೊಂದಿಗೆ ಮದುವೆಯಾಗಿ ಎರಡು ಮಕ್ಕಳಾದರೂ ಕೀರ್ತಿಗಾಗಿ 'ಚಂಪಾ' ಎಂಬ ಶಿಷ್ಯೆಯೊಂದಿಗೆ ರಿಜಿಸ್ಟರ್ ಮದುವೆಯಾಗುತ್ತಾನೆ. ಇವಳಿಗೂ ಎರಡು ಮಕ್ಕಳಾಗುತ್ತವೆ. ಇವಳೊಂದಿಗೆ ಜಗಳವಾಡಿ ಮನೋಹರಿದಾಸಳೆಂಬ ಖ್ಯಾತ ನೃತ್ಯ ಕಲಾವಿದೆಯೊಂದಿಗೆ ಹೇಳದೇ ದೆಹಲಿಗೆ ಹೊರಟು ಹೋಗುತ್ತಾನೆ. ಅವಳೊಂದಿಗೆ ಮೂರು ವರ್ಷವಿದ್ದು ಅವಳನ್ನು ಹೊಡೆದು ತಾನು ಹೊಡೆಸಿಕೊಂಡು ಮರಳಿ ಮುಂಬಯಿಗೆ ಬಂದು ಅಲ್ಲಿಯ ರಾಮಕುಮಾರಿ ಹಾಗೂ ಚಂಪಾಳನ್ನು ಮರೆತು ಬೇರೆ ರೂಮು ಮಾಡಿಕೊಂಡು ವಾಸಿಸುತ್ತಾನೆ.

ಈ ಸಂದರ್ಭದಲ್ಲಿ ಮುಂಬಯಿಯ 'ಮಧುಮಿತಾ' ಎಂಬ ಶ್ರೀಮಂತ ಮನೆತನದ ಹುಡುಗಿ ಸಂಗೀತದಲ್ಲಿ ಅಪಾರ ಆಸಕ್ತಿ ಇದ್ದು ಈತನ ಶಿಷ್ಯೆಯಾಗಿ ಬರುತ್ತಾಳೆ. ಸಂಗೀತದ ಪ್ರೇಮಿ ಆಗಿರುವ ಆಕೆಯನ್ನು ಸಂಗತ ಮಾಡಲು ಆಹ್ವಾನಿಸಿ ಆಕೆಯನ್ನು ಗಾಂಧರ್ವ ಪತ್ನಿಯನ್ನಾಗಿ ಸ್ವೀಕರಿಸುತ್ತಾನೆ. ಮುಂದೆ ಆಕೆ ಮದುವೆಯಾಗಿ ಪತಿಯೊಡನೆ ನ್ಯೂಯಾರ್ಕಿನಲ್ಲಿರುವ ಸಂದರ್ಭದಲ್ಲಿ, ಗುರುವಿನ ಕಾರ್ಯಕ್ರಮ ನ್ಯೂಯಾರ್ಕಿನಲ್ಲಿರುವುದನ್ನು ತಿಳಿದು ಗುರುಭಕ್ತಿಯಿಂದ ಮನೆಗೆ ಆಹ್ವಾನಿಸುತ್ತಾಳೆ. ಅಲ್ಲಿ ೬೦ ವರ್ಷದ ಮೋಹನ್‌ಲಾಲ್ ೩೦ ವರ್ಷದ ವಿವಾಹಿತಳನ್ನು ಬಯಸಿ ತನ್ನ ವಾಂಛೆ

ತೀರಿಸಿಕೊಳ್ಳುತ್ತಾನೆ. ಅಲ್ಲಿರುವಷ್ಟು ಕಾಲ ಅವಳೊಡನೆ ಸಂಗತ ಮಾಡುತ್ತಾನೆ. ಜೊತೆಯಾಗಿ ಸಂಗೀತ ಕಛೇರಿಗಳನ್ನು ನಡೆಸುತ್ತಾನ. ನ್ಯೂಯಾರ್ಕಿನಲ್ಲಿ ಈತನ ಸಂಗೀತಕ್ಕೆ ಮಾರುಹೋದ ಲಾರೆನ್‌ಸ್ಮಿತ್‌ಳನ್ನು ಅನುಭವಿಸುತ್ತಾನೆ. ವಿದೇಶಿಗಳಾದ ಆಕೆಯನ್ನು ಭಾರತಕ್ಕೆ ಕರೆತಂದು ಸಹವಾಸ ಮುಂದುವರಿಸುತ್ತಾನೆ. ಹೈದರಾಬಾದಿನ ಭಕ್ತಗೃಹಿಣಿ ಪ್ರಭಾರಾವಳನ್ನು ಉಪಭೋಗಿಸುತ್ತಾನೆ. ತನ್ನ ಮಗಳು ಬಕುಲಾ ೨೦ ವರ್ಷದ ಮೇಲೆ ಭೇಟಿಯಾದಾಗ ಅವಳ ಮೈಕೈ ಮಾಟವನ್ನು ಕಂಡು ಮೋಹಿತನಾಗುತ್ತಾನೆ. ಈತನ ರಾಸಲೀಲೆ ಪತ್ರಿಕೆಗಳಲ್ಲೆಲ್ಲ ಪ್ರಕಟವಾದರೂ ನಾಚುವುದಿಲ್ಲ, ಜಾರುವಿಕೆಯಿಂದ ಮೇಳೇಳಲು ಪ್ರಯತ್ನಿಸುವುದಿಲ್ಲ.

ಕೀರ್ತಿ ಶಿಖರವನ್ನೇರಿ ಮುಪ್ಪು ಆವರಿಸಿ ಕೈಯಿಂದ ಏನೂ ಆಗದಿದ್ದಾಗ ಹರಿದ್ವಾರದ ಓಂಕಾರ ಬಾಬಾನ ಆಶ್ರಮವಾಸಿಯಾಗಿದ್ದು ಸಂಗೀತಶಾಲೆ ತೆಗೆಯುವ ತೀರ್ಮಾನ ಮಾಡುತ್ತಾನೆ. ಈತನು ಹರಿದ್ವಾರಕ್ಕೆ ಹೊರಟು ಹೋಗುತ್ತಾನೆಂದು ಕೇಳಿದ ಈತನ ಸಂಗೀತ ಪ್ರೇಮಿ ಮುಂಬಯಿ ನಾಗರೀಕರು ಬೀಳ್ಕೊಡುವ ಸಮಾರಂಭವನ್ನು ಏರ್ಪಡಿಸಿ ಸನ್ಮಾನಿಸಿ, ಆತನ ಸಂಗೀತ ಶಾಲೆಗೆ ಮೂರು ಲಕ್ಷ ರೂಪಾಯಿ ಕಾಣಿಕೆಯನ್ನು ಅರ್ಪಿಸುತ್ತಾರೆ. ತನ್ನ ಸಂಗೀತಾಭಿಮಾನಿಗಳಿಗೆ ಕೊನೆಯದಾಗಿ ಶುದ್ಧ ಕಲ್ಯಾಣವನ್ನು ಹಾಡಿ ತಣಿಸಲು ಮನಸ್ಸು ಮಾಡುತ್ತಾನೆ. ಆದರೆ ರಾಗದ ಭಾವವೇ ಹುಟ್ಟುವುದಿಲ್ಲ. ಸಭಿಕರ ಮುಂದೆ ಸೋಲಬಾರದೆಂದು ಕಣ್ಣುಮುಚ್ಚಿ, ಎಷ್ಟೇ ಪ್ರಯತ್ನಿಸಿದರೂ ರಾಗದ ನಡಿಯೇ ಸಿಕ್ಕುವುದಿಲ್ಲ. ಇವನ ಶಿಷ್ಯತ್ವನ್ನು ಧಿಕ್ಕರಿಸಿದ ಮಧುಮಿತಾ ಎದುರಿಗೆ ಕುಳಿತಿದ್ದಳು. ಸಾಥಿದಾರನ ಮೂಲಕ ಅವಳನ್ನು ನಯವಾಗಿ ಎಬ್ಬಿಸಿ ಕಳಿಸಿ ಪ್ರಯತ್ನಿಸಿದರೂ ರಾಗ ಹೊರಡುವುದೇ ಇಲ್ಲ, ಸಂಗೀತಜ್ಞಾನಿ ನಿವೃತ್ತ ಪ್ರಾಚಾರ್ಯ ತ್ರ್ಯೈಬಕ ಪುರಾಧರ ವೇದಿಕೆ ಹತ್ತಿರ ಬಂದು ಆಶಿಸ್ತು ಬೇಜವಾಬ್ದಾರಿಗಳಿದ್ದರೆ ಸಂಗೀತ ಹೇಗೆ ಹೊರಡುತ್ತದೆ ಎಂದು ಮೋಹನ್‌ಲಾಲ್‌ನಿಗೆ ಅವಮಾನ ಮಾಡುತ್ತಾನೆ. ಇದುದರಿಂದ ಕೋಪಗೊಂಡ ಮೋಹನ್‌ಲಾಲ್ ಅಗೌರವದ ಹಣ ನನ್ನ ಆಶ್ರಮಕ್ಕೆ

ಬೇಡ. ನಾನು ಹಾಡುವುದಿಲ್ಲ ತೆಗೆದುಕೊಳ್ಳಿ ನಿಮ್ಮ ಚೆಕ್ಕು ಎಂದು ಹೇಳಿ ಚೆಕ್ಕನ್ನೂ ಮೈಕನ್ನೂ ಎಸೆದು ಹೊರಟು ಹೋಗುತ್ತಾನೆ.

ಕಾಸಿನ ಭಿಕ್ಷೆಗಾಗಿ ಹಾಡುತ್ತಿದ್ದ ಬಾಲಕ ತನ್ನ ಭಾವಪೂರ್ಣ ಗಾಯನದಿಂದಾಗಿ, ಓಂಕಾರ ಬಾಬಾರನ್ನು ಆಕರ್ಷಿಸಿ, ನಂತರ ಕ್ರಮಬದ್ಧ ಶಿಕ್ಷಣ ಪಡೆದು, ಮುಂಬೈನ ಪ್ರಖ್ಯಾತ ಗಾಯಕನಾಗಿ, ತಾನ್‌ಸೇನ್ ಪ್ರಶಸ್ತಿ ಪಡೆದು, ದೇಶ ವಿದೇಶಗಳಲ್ಲಿ ಖ್ಯಾತನಾಗುವ, ಅದ್ಭುತ ಎನಿಸುವ ಅವನ ಜೀವನದಿಂದಾಗಿ, ಅಸದೃಶ ಎನಿಸುವ ಅವನ ಕಲೆಯ ಜೊತೆಯಲ್ಲಿ ತಳಕು ಹಾಕಿಕೊಂಡಿರುವ ಕಾಮ-ಲೈಂಗಿಕತೆಗಳಿಂದಾಗಿ, ಉತ್ಕೃಷ್ಟ ಪ್ರತಿಭೆ, ಶ್ರೇಷ್ಠ ಅವಿರತ ಸಾಧನೆಗಳಿದ್ದೂ ಸಾಮಾಜಿಕ ನಿಯಮಗಳನ್ನು ಲಂಘಿಸುವಂತಹ ಪ್ರವೃತ್ತಿಗೊಂದು ಮೂಲ ಮಾದರಿಯಾಗಿ ಮೋಹನಲಾಲನ ಪಾತ್ರ ಸೃಷ್ಟಿಗೊಂಡಿದೆ. ಮೋಹನಲಾಲನ ಪಾತ್ರವು ಎರಡು ಅದಮ್ಯ ಒತ್ತಡ ಮತ್ತು ಸೆಳೆತಗಳಿಂದ ನಿರ್ಮಿತಗೊಂಡಿವೆ. ಮೊದಲನೆಯದು ಮಂದ್ರಸ್ವರದಂತೆ ಒಳಗೇ ಹುಟ್ಟಿ, ವಿಶ್ವರೂಪಿಯಾಗಿ ಹರಡಿ, ಅವನ ನರನಾಡಿಗಳನ್ನು ಹಿಂಡಿ, ಅವನನ್ನು ಅಧೋಮುಖವಾಗಿ ಜಗ್ಗುವ, ಆದರೆ ಸ್ಫೂರ್ತಿಯೂ ಆಗುವ, ಅದಮ್ಯ ಹಸಿವಾಗಿ ಕಾಡುವ ಕಾಮ. ಎರಡನೆಯದು ಮಂದ್ರಸ್ವರದಂತೆ ಒಳಗೇ ಹುಟ್ಟಿ ಅನಂತಾನಂತವಾಗಿ ವಿಸ್ತರಿಸಿ ಕೇಳುವವರನ್ನು, ಕ್ಷುಲ್ಲಕ ಎನಿಸುವಂತಹ ಪ್ರವೃತ್ತಿಗಳಿಂದ ಬಿಡುಗಡೆ ಮಾಡುತ್ತಾ, ಕೇಳಿದವರ ಮನಸ್ಸಿನಲ್ಲಿ ಸ್ವರ್ಗದರ್ಶನ ಮಾಡಿಸುತ್ತಾ ಅವರ ಆತ್ಮಗಳನ್ನು ಚೇತನಗಳನ್ನು ಊರ್ಧ್ವಮುಖಿಯನ್ನಾಗಿ ಮಾಡೀ ಅವರನ್ನು ಔನ್ನತ್ಯಕ್ಕೆ ಕೊಂಡೊಯ್ಯುವಂತಹ ಅತ್ಯದ್ಭುತ ಕಲಾಪ್ರತಿಭೆ. ಈ ಕಲಾಪ್ರತಿಭೆ ಲೈಂಗಿಕ ಕಾಮನೆ ಒಂದಕ್ಕೊಂದು ಹಣೆದುಕೊಂಡು, ಒಂದಕ್ಕೊಂದು ಪೂರಕವೂ ಬಾಧಕವೂ ಆಗುವ ವಿಪರ್ಯಾಸವನ್ನು ಚಿತ್ರಿಸಿರುವುದೇ ಮೋಹನಲಾಲನ ಪಾತ್ರದ ವೈಶಿಷ್ಟ್ಯ. ಮೋಹನಲಾಲನ ಪಾತ್ರದ ಮೂಲಕ ಕಲೆಗೂ ಕಲಾವಿದನಿಗೂ ಇರುವ ಸಂಬಂಧ, ಅವನ ಕಲೆಗೂ ಅವನ ಲೈಂಗಿಕತೆಗೂ ಇರುವ ಸಂಬಂಧದ ಮಜಲುಗಳನ್ನು ಪದರ ಪದರವಾಗಿ, ದೀರ್ಘವಾಗಿ, ಕೆಲವೊಮ್ಮೆ

ವಿಶೇಷವಾಗಿ ತರುವುದರ ಮೂಲಕ ಮೋಹನಲಾಲನ ಜೀವನವೆಂಬ ಪುಸ್ತಕವನ್ನು, ಸಂಪೂರ್ಣವಾಗಿ ತೆರೆದಿಟ್ಟಿದ್ದಾರೆ ಲೇಖಕರು. ಅವನಲ್ಲಿನ ಒಳಿತನ್ನು ವೈಭವೀಕರಿಸದೇ ಕೆಡುಕು ಎಂಬುದನ್ನು ತುಚ್ಛೀಕರಿಸದೇ ಇದ್ದುದಿದ್ದಂತೆ ತೆರೆದಿಟ್ಟಿರುವುದು ಇಲ್ಲಿ ವಿಶೇಷವಾಗಿ ಕಂಡುಬರುತ್ತದೆ.

ಹೀಗೆ, 'ಮಂದ್ರ' ಕಾದಂಬರಿಯ ಕೇಂದ್ರಪಾತ್ರವಾಗಿ ಮೋಹನ್‌ಲಾಲ್‌ನ ಪಾತ್ರವನ್ನು ಚಿತ್ರಿಸಿದ ಕಾದಂಬರಿಕಾರರು "ಕಲೆಯನ್ನು ನೋಡಿದಾಗ ಸ್ವರ್ಗ ಪ್ರವೇಶ ಮಾಡಿದ ಹಾಗಾಗುತ್ತೆ ಕಲಾವಿದನ ಒಳ ಹೊಕ್ಕಾಗ ಬೇರೇಯೇ ಇರುತ್ತೆ ಯಾಕೆ ಈ ಕಾಂಟ್ರಡಿಕ್ಷನ್? ಎಂದು ಜೋನ್ಸ್‌ಳ ಪಾತ್ರದ ಮೂಲಕ ಕಾದಂಬರಿಯಲ್ಲಿ ಉದ್ಗರಿಸಿರುವುದನ್ನು ಕಾಣಬಹುದು. ಅದರಂತೆ ಕಾದಂಬರಿಯಲ್ಲಿ ಮೋಹನ್‌ಲಾಲ್‌ರ ಪಾತ್ರವನ್ನು ಸೃಷ್ಟಿಸಿರುತ್ತಾರೆ. ತೀರ ಚಿಕ್ಕ ವಯಸ್ಸಿನಲ್ಲಿ ಅನಾಥನಾದ ಒಬ್ಬ ಬಾಲಕ ಸಂಗೀತದಲ್ಲಿ ವಿಶೇಷ ಆಸಕ್ತಿ ಉಳ್ಳವನ್ನಾಗಿದ್ದು, ಅತ್ಯಂತ ಪರಿಶ್ರಮದಿಂದ ಸಂಗೀತವನ್ನು ಕರಗತಮಾಡಿಕೊಂಡು ಅತ್ಯಂತ ಉನ್ನತವಾದ 'ತಾನ್‌ಸೇನ್' ಪ್ರಶಸ್ತಿಯನ್ನು ಪಡೆದು ಜನಾಕರ್ಷಣೆಗೆ ಒಳಗಾದ ರೀತನು, ಬೇರೇ ಬೇರೇ ಕಡೆಗಳಲ್ಲಿ ಕಛೇರಿಯನ್ನು ನೀಡಿರುವುದರ ಮೂಲಕವಾಗಿ ಕಲೆಯನ್ನು ಸ್ವರ್ಗದ ತಾಣಕ್ಕೆ ಏರಿಸಿದ. ಆದರೆ ಕಲಾವಿದನಾದ ಮೋಹನ್‌ಲಾಲ್ ತನ್ನ ವೈಯಕ್ತಿಕ ಬದುಕಿನಲ್ಲಿ ಲಂಪಟನಾಗಿ ಅತಿಯಾದ ಕಾಮುಕನಾಗಿ ಕಾಣಿಸಿಕೊಳ್ಳುತ್ತಾ, ಬಳಿಗೆ ಬಂದವರಿಂದೆಲ್ಲ ತಿರಸ್ಕೃತನಾಗುತ್ತಾ ಕೊನೆಯಲ್ಲಿ ಅಗೌರವಕ್ಕೆ ಒಳಗಾಗುವಂತೆ ಈ ಪಾತ್ರವನ್ನು ಭೈರಪ್ಪನವರು ಚಿತ್ರಿಸಿದ್ದಾರೆ. ವಿರೋಧಾಭಾಸವನ್ನು ಜೀವನದ ಒಗಟಾಗಿಯೂ ರಹಸ್ಯವಾಗಿಯೂ ಚಿತ್ರಿಸಲು ಹೊರಟ ಕಾದಂಬರಿಕಾರರು ಅದರ ಅನ್ವೇಷಣೆಗೆ ಮೋಹನ್‌ಲಾಲ್‌ನ ಪಾತ್ರವನ್ನು ಬಳಸಿಕೊಂಡಿದ್ದಾರೆ. ಈ ಪಾತ್ರದ ಮೂಲಕ ಓದುಗರಿಗೆ ಹಿಮಾಲಯದ ದರ್ಶನವನ್ನು ಮಾಡಿಸುವ ಕಾದಂಬರಿಕಾರರು ಪ್ರಪಾತದ ದರ್ಶನವನ್ನು ಮಾಡಿಸುತ್ತಾರೆ.

ಒಟ್ಟಿನಲ್ಲಿ ಭೈರಪ್ಪನವರು ಸೃಜಿಸಿದ ಪಾತ್ರ ವೈವಿಧ್ಯತೆ ಮತ್ತು ಅವುಗಳು ಪ್ರತಿನಿಧಿಸುವ ವ್ಯಕ್ತಿ ವಿಶಿಷ್ಟತೆಯಿಂದಾಗಿ ಅವರು ರಚಿಸಿದ ಕಾದಂಬರಿಗಳು ಹೆಚ್ಚು ಮೌಲೀಕತೆಯನ್ನು ಪಡೆದಿರುತ್ತವೆ. ಇವರ ೨೦ ಕಾದಂಬರಿಗಳಲ್ಲಿ ಕೆಲವೊಂದು ಪಾತ್ರ ವಿವೇಚನೆಯನ್ನು ನಡೆಸಿದಾಗ, ಇವರು ಸೃಜಿಸಿರುವ ಒಂದೊಂದು ಪಾತ್ರಗಳು ಒಂದೊಂದು ಜೀವನ ಕ್ಷೇತ್ರದ ಒಂದೊಂದು ಮಾದರಿಗಳಾಗಿ, ಪ್ರತಿನಿಧಿಗಳಾಗಿ ಕಾಣಿಸಿಕೊಳ್ಳುತ್ತಿವೆ. ಅಲ್ಲದೆ ಭೈರಪ್ಪನವರು ತಮ್ಮ ಯಾವ ಕಾದಂಬರಿಗಳಲ್ಲಿಯೂ ಪುರುಷರಿಗಿಂತ, ಸ್ತ್ರೀ ಮೇಲು ಅಥವಾ ಸ್ತ್ರೀಗಿಂತ ಪುರುಷ ಮೇಲು ಎಂಬ ಶುಷ್ಕ ಚರ್ಚೆಯನ್ನು ನಡೆಸದೇ, ಸ್ಥಿತ್ಯಂತರಗೊಳ್ಳುತ್ತಿರುವ ಸಾಮಾಜಿಕ ಸಂದರ್ಭದಲ್ಲಿ ಪಲ್ಲಟಗೊಂಡ ಹಳೆಯ ಬದುಕಿಗೆ ಬದಲಾಗತೊಡಗಿದ ಸಂಸ್ಕೃತಿಗೆ ತೋರಿರುವ ಸೃಜನಾತ್ಮಕ ಪ್ರತಿಕ್ರಿಯೆಗಳಾಗಿ ಪುರುಷ-ಸ್ತ್ರೀ ಪಾತ್ರಗಳನ್ನು ಸೃಜಿಸಿರುತ್ತಾರೆ, ಎಲ್.ವಿ.ಶಾಂತಕುಮಾರಿಯವರು ಅಭಿಪ್ರಾಯಪಡುವಂತೆ "ಜೀವನದ ನೆಯ್ಗೆಯಲ್ಲಿ ಹಾಸು ಹೊಕ್ಕಾಗುವ ಸಂಕೀರ್ಣತೆ, ಸಂದಿಗ್ಧತೆ, ಸೂಕ್ಷತೆ ಮತ್ತು ವಿಷಾದದ ಕಪ್ಪು ಛಾಯೆಗಳು ಈ ಲೇಖಕರ ಕಾದಂಬರಿಯ ಪಾತ್ರಗಳ ಮನೋಭೂಮಿಕೆಯನ್ನು ಆವರಿಸಿಕೊಂಡು, ಕೃತಿಗಳ ರಚನಾಬಂಧ ತಂತ್ರ-ವಿನ್ಯಾಸ, ಭಾಷಾಪ್ರಯೋಗ, ಅಭಿವ್ಯಕ್ತಿಯ ಮಾರ್ಗ ಎಲ್ಲವೂ ಸಂಕೀರ್ಣವೂ ಕ್ಲಿಷ್ಟವೂ ಆಗತೊಡಗುತ್ತದೆ. ಪಾತ್ರಗಳು ಕೃತಿಗಳು ವಿಶ್ಲೇಷಣೆಯಿಂದ ನುಣುಚಿಕೊಂಡು ಬುದ್ಧಿ, ಭಾವಗಳಿಗೆ ಸವಾಲೆನಿಸುತ್ತವೆ. 'ವಂಶವೃಕ್ಷ'ದ ಶ್ರೀನಿವಾಸ ಶ್ರೋತ್ರಿಯರು 'ಗೃಹಭಂಗ'ದ ನಂಜಮ್ಮ ಅರ್ಥವಾಗುವಂತೆ 'ನೆಲೆ'ಯ ಪಾರ್ವತಿ, 'ಮಂದ್ರ'ದ ಮೋಹನ್‌ಲಾಲ್ ಅರ್ಥವಾಗುವುದಿಲ್ಲ. ಪಾತ್ರಗಳು ಹೀಗೆ ಮೈಗೂಡಿಸಿಕೊಳ್ಳುವ ಪುರುಷಾರ್ಥಗಳ ಬೆಸುಗೆಯಿಂದಾಗಿ ಪಾತ್ರಗಳೊಂದಿಗೆ ಕಾದಂಬರಿಯ ರೂಪ ಹಾಗೂ ವಿನ್ಯಾಸಗಳೂ ಹೊಸ ಜಾಡು ಹಿಡಿಯುವ ಪರಿ ಬೆರಗು ಮೂಡಿಸುತ್ತದೆ"[೧]

---

[೧] 'ಯುಗಸಾಕ್ಷಿ'- ಪುಟ ೪೫೭-೪೫೮-ಎಲ್.ವಿ.ಶಾಂತಕುಮಾರಿ ಸಾಹಿತ್ಯ ಭಂಡಾರ ಪ್ರಕಾಶನ ೨೦೦೯.

ಭೈರಪ್ಪನವರ ಕಾದಂಬರಿಗಳಲ್ಲಿ ಮುಖ್ಯ ಪಾತ್ರಗಳ ನಿರೂಪಣೆಯಲ್ಲಿ ವಿಕಸನ ಪ್ರಕ್ರಿಯೆ ಕಾಣುತ್ತದೆಯಲ್ಲದೆ, ಬದಲಾವಣೆಯ ಪ್ರಕ್ರಿಯೆಯನ್ನಲ್ಲ. ಎಂದರೆ 'ಗೃಹಭಂಗ'ವನ್ನು ಹೊರತುಪಡಿಸಿ ಮುಖ್ಯ ಪಾತ್ರಗಳಲ್ಲಿ ಪ್ರತಿಯೊಂದಕ್ಕೂ ತನ್ನದೇ ಆದ ತಾತ್ವಿಕ ನಿಲುವಿರುತ್ತದೆ. ಆ ತಾತ್ವಿಕ ನಿಲುವಿಗೆ ಅನುಗುಣವಾಗಿ ಅವು ಬದುಕನ್ನು ಎದುರಿಸುತ್ತವೆ, ನಿರ್ವಹಿಸುತ್ತವೆ. ಇವರು ಕಾದಂಬರಿಗಳನ್ನು ಬರೆಯಲು ಪ್ರಾರಂಭಿಸಿದ ಕಾಲ, ನವ್ಯ ಕಾದಂಬರಿಕಾರರ ಕೃತಿಗಳಲ್ಲಿ ದುರ್ಬಲ ನಾಯಕನೇ ಮೆರೆಯುತ್ತಿದ್ದ ಕಾಲ. ಡೋಲಾಯಮಾನ ಸ್ವಭಾವ, ಅನಾಥಪ್ರಜ್ಞೆ, ವಿಕ್ಷಿಪ್ತತೆ ಇವು ಹೊಸ ನಾಯಕನ ಗುರುತುಗಳಾಗಿದ್ದವು. ಇವರ ಪಾತ್ರಗಳು ಬದುಕನ್ನು ದಿಟ್ಟತನದಿಂದ ಸ್ವೀಕರಿಸುವ ನಿರ್ಣಯಗಳನ್ನು ಕೈಗೊಂಡು ಕಾರ್ಯೋನ್ಮುಖವಾಗುವ ಸ್ತ್ರೀಪುರುಷರು. ಕಾದಂಬರಿಯಲ್ಲಿ ಅವರ ಸ್ವಭಾವಗಳು ಸ್ಫುಟವಾಗುತ್ತ ಹೋಗುತ್ತಿದ್ದವು. ಸಾಮಾನ್ಯವಾಗಿ ಬೆಳೆಯುತ್ತಿರಲಿಲ್ಲ. ಆದರೆ ಇದಕ್ಕೆ ಅಪವಾದವೆಂಬಂತೆ 'ಆವರಣ'ದ ಮುಖ್ಯ ಪಾತ್ರ ಲಕ್ಷ್ಮೀ ಬೆಳೆಯುತ್ತಾಳೆ, ಬದಲಾಗುತ್ತ ಹೋಗುತ್ತಾಳೆ. ಬದುಕಿನ ಸವಾಲುಗಳು ಅನುಭವಗಳು ಅವಳನ್ನು ಬೆಳೆಸುತ್ತವೆ. ಹೀಗೆ ಭೈರಪ್ಪನವರು ಸೃಷ್ಟಿಸಿದ ಪಾತ್ರಗಳು ತಮ್ಮ ಗುಣ ವಿಶಿಷ್ಟತೆಯಿಂದ ಜನಮನದಲ್ಲಿ ಹಸಿರಾಗಿ ನಿಂತಿವೆ. ಕಾದಂಬರಿಯ ಒಟ್ಟು 'ಶಿಲ್ಪ'ದ ಸೌಂದರ್ಯಕ್ಕೆ–ಮೆರುಗಿಗೆ ದೇಣಿಗೆ ನೀಡಿ ಕಾದಂಬರಿಯ ಜನಪ್ರಿಯತೆಗೆ ಕಾರಣವಾಗುವಂತೆ ಜನ್ಮತಳೆದಿದೆ.

ಪಾತ್ರಗಳು ಕಥನಕ್ರಿಯೆ ಹಾಗೂ ಒಟ್ಟು ಕಾದಂಬರಿಯ 'ಶಿಲ್ಪ'ಕ್ಕೆ ಕೊಡುವ ದೇಣಿಗೆ ಬಹು ಅಮೂಲ್ಯವಾಗಿರುವುದರಿಂದಲೇ ಒಟ್ಟು 'ಶಿಲ್ಪ'ದ ಅಧ್ಯಯನಕ್ಕೆ ಪೂರಕವಾಗಿ ಪಾತ್ರಗಳ ವಿವೇಚನೆಯನ್ನು ಒಳಪಡಿಸುವ ಅನಿವಾರ್ಯತೆ ಕಂಡುಬರುತ್ತದೆ. ಈ ನೆಲೆಯಲ್ಲಿ ಪ್ರಮುಖ ಪಾತ್ರಗಳನ್ನು ಸೂಕ್ಷ್ಮವಾಗಿ ವಿವೇಚಿಸಲಾಗಿದೆ.

*************

# ಅಧ್ಯಾಯ ೬

## ಎಸ್.ಎಲ್.ಭೈರಪ್ಪನವರ ಸಾಧನೆ-ಸಿದ್ಧಿ-ಜನಪ್ರಿಯತೆ

ಎಸ್.ಎಲ್.ಭೈರಪ್ಪನವರು ಸಾಹಿತ್ಯದ ಗಂಭೀರ ಓದುಗರಿಗೂ, ಸಾಮಾನ್ಯ ಓದುಗರಿಗೂ ಏಕ ಕಾಲದಲ್ಲಿ ಪ್ರಿಯವಾಗಬಲ್ಲಂತಹ ಅದ್ಭುತ ಹಾಗೂ ವೈಶಿಷ್ಟ್ಯಪೂರ್ಣ ಕಾದಂಬರಿಗಳನ್ನು ರಚಿಸಿದವರು, ಕಾದಂಬರಿಗಳ ಪಾತ್ರ ಕಥಾವಸ್ತು ಹಾಗೂ ಸನ್ನಿವೇಶಗಳ ಚಿತ್ರಣ ಇವುಗಳಲ್ಲಿ ತಮ್ಮ ಆಳವಾದ ಅಧ್ಯಯನ ಮತ್ತು ಅನುಭವಗಳ ಗಾಢವಾದ ಪ್ರತಿಭೆಯನ್ನು ಪ್ರದರ್ಶಿಸಿದವರು. ಸಾಮಾನ್ಯ ಓದುಗನ ಮನಃಪಟಲದಲ್ಲಿ ಯಾವತ್ತೂ ಉಳಿಯುವಂತೆ ತಮ್ಮದೇ ಆದ ಕಥಾನಕ ಶೈಲಿಯನ್ನು ಭಾಷಾಪ್ರಭುತ್ವವನ್ನು ಅಳವಡಿಸಿಕೊಂಡವರು.

ತಮ್ಮ ಕೃತಿಗಳನ್ನು ಕುರಿತು ವಿಮರ್ಶಕರ ನಿಲುವೇನು ಎಂದು ನಿರೀಕ್ಷಿಸದ ಭೈರಪ್ಪನವರನ್ನು, ವಿಮರ್ಶಕರನೇಕರು ಯಥಾಸ್ಥಿತಿವಾದಿ, ಪ್ರಗತಿ ವಿರೋಧಿ ಎಂಬುದಾಗಿ ತಂತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುವುದಿದೆ. ವಿಮರ್ಶಕರ ನಿಲುವು ಹೀಗಿದ್ದರೂ ಅದು ಭೈರಪ್ಪನವರ ಅಸಂಖ್ಯಾತ ಓದುಗರ ಮೇಲೆ ಯಾವ ಪರಿಣಾಮವೂ ಬೀರಲಿಲ್ಲ. ಬದಲಾಗಿ ವಿಮರ್ಶಕರೂ ಕೂಡ ಇವರನ್ನು ಜನಪ್ರಿಯ ಲೇಖಕರ ಸಾಲಿಗೆ ಸೇರಿಸಿಬಿಡಬೇಕಾಯಿತು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ವಿಶೇಷವಾಗಿ ಕಾದಂಬರಿ ಪ್ರಕಾರಕ್ಕೆ ಸಂಬಂಧಿಸಿದಂತೆ 'ಜನಪ್ರಿಯ' ಮತ್ತು 'ಗಂಭೀರ' (ಸಾಹಿತ್ಯಿಕ) ಎಂಬೆರಡು ವರ್ಗಗಳು ರೂಪುಗೊಂಡು ಈಗಲೂ ಸಮಾನಾಂತರವಾಗಿ ಸಾಗುತ್ತಿವೆ. ನಾಟಕದಲ್ಲಿ 'ವೃತ್ತಿ' 'ಹವ್ಯಾಸಿ', ಸಿನಿಮಾದಲ್ಲಿ ವಾಣಿಜ್ಯ-ಕಲಾತ್ಮಕ ಪ್ರಭೇದದ ಕ್ರಮದಲ್ಲಿ ಈ ವರ್ಗೀಕರಣವನ್ನು ವಿನ್ಯಾಸಗೊಂಡಿರುವುದು. ಈ ರೀತಿಯ ವರ್ಗೀಕರಣ ಕನ್ನಡದಲ್ಲಿ

೧೯೫೦ರ ನಂತರದ ಬೆಳವಣಿಗೆ ಬೇರೆ ಬೇರೆ ಸಾಹಿತ್ಯದ ಮತ್ತು ಸಾಹಿತ್ಯೇತರ ಕಾರಣಗಳಿಂದ ಈ ಪ್ರಭೇದಗಳು ಪರಸ್ಪರ ವಿರುದ್ಧವೆಂಬ ರೀತಿಯಲ್ಲಿ ಬೆಳೆದುಬಂದುವು.

ಈ ಜನಪ್ರಿಯ-ಜನಪರ ಎನ್ನುವ ಪದಗಳು ಇಂದು ಸಾಂದರ್ಭಿಕ ಯಾದ್ರಿಚ್ಛಿಕ ಅರ್ಥಕೊಡುವ ಹಂತಕ್ಕೆ ಬಂದಿವೆ. ಅಂದರೆ ಒಬ್ಬ ಕಾದಂಬರಿಕಾರನ ಕಾದಂಬರಿಗಳು ಜನಪ್ರಿಯವಾಗ ತೊಡಗಿದಾಗ 'ಜನಪ್ರಿಯತೆ'ಯ ಪರಿಕಲ್ಪನೆಯನ್ನೇ ಪ್ರಧಾನವಾಗಿಟ್ಟುಕೊಂಡು ಅವರ ಕೃತಿಗಳ ವಿಮರ್ಶೆಗೆ ಮುಂದಾಗುತ್ತವೆ. ಇದೇ ರೀತಿಯಲ್ಲಿ ಭೈರಪ್ಪನವರು ಮತ್ತು ಅವರ ಕೃತಿಗಳು ವಿಮರ್ಶೆಗೆ ಒಳಗಾದವು.

ಭೈರಪ್ಪನವರನ್ನು ಜನಪ್ರಿಯ ಲೇಖಕರೆಂಬ ಕಾರಣದಿಂದ, ಆರಂಭಿಕ ಹಂತದಲ್ಲಿ ನಮ್ಮ ವಿಮರ್ಶಾವಲಯದಲ್ಲಿ ಗಂಭೀರವಾಗಿ ಪರಿಗಣಿಸಲಾಗದಿದ್ದರೂ ಅವರನ್ನು ಕಡೆಗಣಿಸುವುದು ಸಾಧ್ಯವಾಗಲಿಲ್ಲ. ಅವರು ಓದುಗರಿಗೆ ಬೇರೆ ಬೇರೆ ರೀತಿ ಪ್ರಿಯವಾಗುವಂತೆ ಕೃತಿರಚನೆ ಮಾಡುತ್ತಾರೆ. ಇವರು ಮುಖ್ಯವಾಗಿ ಓದುಗರ ಬುದ್ಧಿಯನ್ನಲ್ಲ, ಭಾವನೆಗಳನ್ನು ಪ್ರಚೋದಿಸುವ ನಿಟ್ಟಿನಲ್ಲಿ ಬರೆಯುತ್ತಾರೆ. ಇವರ ಕೃತಿಗಳ ವೈಚಾರಿಕತೆ ತೆಳುವಾಗಿರುತ್ತದೆ ಅಥವಾ ಇವರ ವೈಚಾರಿಕತೆ ಮತ್ತು ಸೃಜನಶೀಲತೆಯ ನಡುವೆ ಬಿರುಕಿದೆ. ಇತ್ಯಾದಿಯಾಗಿ ಭೈರಪ್ಪನವರ 'ಇತಿಮಿತಿ'ಗಳನ್ನು ಗುರುತಿಸುತ್ತ ಆ ನೆಲೆಯಲ್ಲಿಯೇ ಅವರ ಜನಪ್ರಿಯತೆ 'ಗುಟ್ಟಿನ' ಶೋಧವನ್ನು ವಿಮರ್ಶಕರನೇಕರು ನಡೆಸಿದ್ದಾರೆ.

"ಭೈರಪ್ಪನವರ ಕೃತಿ ಇಷ್ಟವಾಗಿದೆ ಎನ್ನುವುದಕ್ಕಿಂತ ಹಲವು ಕೃತಿ, ಹಲವಾರು ಕಾರಣಕ್ಕೆ ಇಷ್ಟವಾಗುತ್ತ ಹೋಗುತ್ತವೆ. ಹಲವಾರು ಪಾತ್ರಗಳು ತತ್ವನಿಷ್ಠೆಗಿಂತ, ಸತ್ಯನಿಷ್ಠೆಯಿಂದ ಹತ್ತಿರವಾಗುತ್ತದೆ"[೧] ಎನ್ನುತ್ತಾರೆ ರೇಖಾ ಕಾಖಂಡಕಿಯವರು.

---
[೧] ಭೈರಪ್ಪಾಭಿನಂದನ ಪುಟ ೧೦೪. ಸಂ. ಕೊಂಡಜ್ಜಿ ಕೆ.ವೆಂಕಟೇಶ್. ಬೆಂಗಳೂರು ೧೯೯೩.

"ಭೈರಪ್ಪನವರ ಇಂತಹ ಅಗಾಧವಾದ ಜನಪ್ರಿಯತೆಗೆ ಕಾರಣಗಳೇನು? ಎಂಬುದಕ್ಕೆ ಸಿ.ಎನ್.ರಾಮಚಂದ್ರನ್ ಅವರು ಈ ರೀತಿಯಾಗಿ ಅಭಿಪ್ರಾಯ ಪಡುತ್ತಾರೆ. 'ಇವರು ಸಂಪ್ರದಾಯವಾದಿಗಳು. ಇವರದು ರಂಜಿಸಿ ವಂಚಿಸುವ ಕಲೆ' ಎಂದು ಸುಲಭ ತೀರ್ಮಾನಗಳನ್ನು ಕೊಟ್ಟು ಅವರನ್ನು ಸಾರಾಸಗಟಾಗಿ ತಿರಸ್ಕರಿಸಿದರೆ ವಿಮರ್ಶೆ ತನ್ನ ಜವಾಬ್ದಾರಿಯನ್ನು ನಿರ್ವಹಿಸಿದಂತಾಗುವುದಿಲ್ಲ. ನನ್ನ ದೃಷ್ಟಿಯಲ್ಲಿ ಭೈರಪ್ಪನವರ ಕಾದಂಬರಿಗಳು ವಿಮರ್ಶೆಗೆ ಒಂದು ಸವಾಲು, ಅವರ ಕಾದಂಬರಿಗಳ ಹಾಗೂ ಅವುಗಳ ಜನಪ್ರಿಯತೆಯ ಗಂಭೀರ ವಿಶ್ಲೇಷಣೆ ಪ್ರಾಯಶಃ ಸ್ವಾತಂತ್ರ್ಯೋತ್ತರ ಭಾರತೀಯ ಸಮಾಜ-ಸಂಸ್ಕೃತಿಗಳ ಬಗ್ಗೆ ಅನೇಕ ಪ್ರಮುಖ ಒಳನೋಟಗಳನ್ನು ನೀಡುವುದು"[೨]

"ವಾಚಕ ವರ್ಗದಲ್ಲಿ ತುಂಬ ಜನಪ್ರಿಯವಾಗುವ ಒಂದು ಕೃತಿ ವಿದ್ವಜ್ಜನರಿಗೂ ವಿಮರ್ಶಕರಿಗೂ ಮೆಚ್ಚಿಗೆ ಆಗಲಿಕ್ಕೆ ಬೇಕು. ತನ್ನ ವಿಶಿಷ್ಟ ಗುಣ ಮೌಲ್ಯಗಳಿಂದ, ಕಾವ್ಯಲಕ್ಷಣಗಳಿಂದ, ಹೀಗೆ ಉಭಯ ಮಾನ್ಯವಾದ ಕೃತಿಕಾರರು ನಿಜವಾಗಿಯೂ ಧನ್ಯರು. ಆ ಧನ್ಯಕೋಟಿಗೆ ಸೇರಿದವರು ಭೈರಪ್ಪನವರು" ಎಂದು ತಮ್ಮ ಲೇಖನವೊಂದರಲ್ಲಿ ಸಮರ್ಥವಾಗಿ ಹೇಳಿರುವ ಗೌರೀಶ್ ಕಾಯ್ಕಿಣಿಯವರಿಗೆ ಭೈರಪ್ಪನವರದು ಒಂದು ವ್ಯಕ್ತಿ ಅಲ್ಲ. ಒಂದು ದ್ವಂದ್ವ ವ್ಯಕ್ತಿತ್ವವಾಗಿ ಕಾಣಿಸಿದೆ. ಮಾತ್ರವಲ್ಲ ಅವರು ಮಾನವೀ ಜೀವನದ ರಸಚಿಂತನಗಳನ್ನು ಮತ್ತು ಉತ್ಕಟ ಸುಖ-ದುಃಖದ ಶಕ್ತಿ ದೌರ್ಬಲ್ಯಗಳ ಕಟು ಮಧುರ, ರುದ್ರ ರಮ್ಯ ಪ್ರಸಂಗಳನ್ನಷ್ಟೇ ಚಿತ್ರಿಸಿ ಎಸೆಯುವುದಿಲ್ಲ. ಈ ಜೀವನದ ಮೂಲಗಳ ಮೌಲ್ಯಗಳ ಶೋಧನೆಗೂ ಅಷ್ಟೇ ಆಸಕ್ತಿಯಿಂದ ತೊಡಗುತ್ತಾರೆ ಎನ್ನುವ ಗೌರೀಶ್ ಕಾಯ್ಕಿಣಿಯವರು 'ಧರ್ಮಶ್ರೀ', 'ದಾಟು', 'ಗ್ರಹಣ', 'ನಿರಾಕರಣ', 'ಗೃಹಭಂಗ' ಮೊದಲಾದ ಕಾದಂಬರಿಗಳಲ್ಲಿ ಕಾಣಿಸಿಕೊಳ್ಳುವ ಮಾನವ ನೀತಿ-ಧರ್ಮ, ಈ ಹಿನ್ನೆಲೆಯಲ್ಲಿ ರೂಪಿತಗೊಂಡಿರುವ ಧರ್ಮದ ಪ್ರಜ್ಞೆಯನ್ನು ವಿಶ್ಲೇಷಿಸುತ್ತಾ. . . . "

---

[೨] 'ಆಶಯ-ಆಕೃತಿ'. ಪುಟ ೭೮. ಸಿ.ಎನ್.ರಾಮಚಂದ್ರನ್. ಅಭಿನವ ಪ್ರಕಾಶನ. ಬೆಂಗಳೂರು ೧೯೯೫.

ಒಂದೊಂದು ಕಾದಂಬರಿಯಲ್ಲಿಯೂ ಭೈರಪ್ಪನವರು ಹಿಂದೂಧರ್ಮದ ಒಂದೊಂದು ಪ್ರಮೇಯದಲ್ಲಿ ವ್ಯಗ್ರರಾಗಿದ್ದಾರೆ. ಸ್ವಧರ್ಮ, ಕುಲಧರ್ಮ, ಜಾತಿಧರ್ಮ, ಸಮಾಜಧರ್ಮ, ಸಂಸ್ಕೃತಿ ರೂಪವಾದ ರಾಷ್ಟ್ರಧರ್ಮ- ಇವೆಲ್ಲ ಮುಖಗಳೂ ಒಂದೊಂದು ಕೋನದಿಂದ ಒಂದೊಂದು ಕಾದಂಬರಿಯಲ್ಲಿ ಕನ್ನಡಿ ಹಿಡಿದಂತಿದೆ. ಕಲಾವಿದ ಭೈರಪ್ಪನವರು ವ್ಯಕ್ತಿ-ವ್ಯಕ್ತಿಯ ಮಾನವ್ಯದ ವಿಶಿಷ್ಟ ಉದ್ದೇಶವನ್ನು ಈ ಮೂಲಕ ಜೀವನ ಚಾರಿತ್ರ್ಯದ ವಿಕಾಸವನ್ನು ಅದರ ಎಲ್ಲ ಏರುಪೇರುಗಳೊಂದಿಗೆ ಚಿತ್ರಿಸುತ್ತಿರುವಾಗಲೇ, ದಾರ್ಶನಿಕ ಭೈರಪ್ಪನವರು ಈ ವರ್ಣರಂಜಿತ ಚಿತ್ರಕ್ಕೆ ಅಚ್ಚು-ಕಟ್ಟಾದ ಅಷ್ಟೇ ಗಟ್ಟಿಮುಟ್ಟಾದ ಧರ್ಮಜಿಜ್ಞಾಸೆ, ಧರ್ಮ ಮೀಮಾಂಸೆಗಳ ಗಣನೀಯವಾದ ಚೌಕಟ್ಟನ್ನು ಜೋಡಿಸುತ್ತಾರೆ. ಈ ಚೌಕಟ್ಟು ಆ ಚಿತ್ರದಷ್ಟೇ ರೋಚಕವಾಗಿದೆ."[೩] ಎಂದಿರುವ ಅವರ ಮಾತುಗಳು ಎಸ್.ಎಲ್.ಭೈರಪ್ಪನವರ ಕೃತಿಗಳನ್ನು ಅರ್ಥೈಸಲು ಸಹಾಯಕವಾದ ಮಾರ್ಗದರ್ಶಕ ಸೂಚಿಗಳಾಗಿವೆ.

ಭೈರಪ್ಪನವರ ಕಥಾವಸ್ತು ಅದನ್ನು ಹೇಳುವ ಶೈಲಿಯು ಕೌಶಲ್ಯದಿಂದ ಕೂಡಿದೆ. ಒಂದರಲ್ಲಿ ಧರ್ಮಾಂತರದ ಪ್ರಶ್ನೆ ಮತ್ತೊಂದರಲ್ಲಿ ಜಾತಿಭೇದ, ಇವನೆಲ್ಲ ನಿರೂಪಿಸಲು ಯೋಚಿಸಿದಾಗ ಅಲ್ಲಿಯ ಪಾತ್ರಗಳ ಅಂತರ್ಯದಿಂದಲೇ ಅಲ್ಲಿಯ ಬದುಕನ್ನು ನೋಡಿ ಬಣ್ಣಿಸುವುದು ಕಾದಂಬರಿಕಾರನ ಕರ್ತವ್ಯವೂ, ಕೌಶಲ್ಯವೂ ಆಗಿದೆ ಎನ್ನುವ ನಿವೇದಿತಾ ಅಡ್ಡಂಗಡಿಯವರು "ಪ್ರತಿಯೊಬ್ಬ ಕಾದಂಬರಿಕಾರನಿಗೂ ಪ್ರಪಂಚದ ನೂರಾರು ಸಮಸ್ಯೆಗಳು ಕಣ್ಣಮುಂದೆ ಸುಳಿದರೂ ಭೈರಪ್ಪನವರು ಧಾರ್ಮಿಕ ಪ್ರಪಂಚಕ್ಕೆ ಸಂಬಂಧಿಸಿದ ಪ್ರಶ್ನೆಗಳನ್ನು ಆಯ್ದು, ಪ್ರತಿಯೊಂದು ಕಾದಂಬರಿಗಳಲ್ಲಿ ಬರೆಯುತ್ತಾ ನೇರವಾಗಿ ಧರ್ಮಶಾಸ್ತ್ರದ ಬಗೆಗೆ ಹೇಳಿ ಬೋರು ಹೊಡಿಸದೆ, ಆದಷ್ಟು ವಸ್ತು ವಿನ್ಯಾಸದೊಂದಿಗೆ ವ್ಯಕ್ತಿಗಳ ವ್ಯಕ್ತಿತ್ವದ ಹೃದಯ ಸ್ಪರ್ಶಿಯಾದ ಘಟನೆಗಳ ಚಿತ್ರಣವನ್ನು,

---

[೩] 'ಸಹಸ್ಪಂದನ'. ಪುಟ ೨೦೨. ಲೇ. ಗೌರೀಶ್ ಕಾಯ್ಕಿಣಿ. ಸಂ. ಕುಲಕರ್ಣಿ ಮಾಧವ ಮತ್ತು ಗೋವಿಂದರಾಜು. ಬೆಂಗಳೂರು ೧೯೭೮.

ತಮ್ಮದೇ ವಿಶೇಷ ಶೈಲಿಯೊಂದಿಗೆ ಹಿಂದೂಧರ್ಮದ ಕೊವೊಂದು ಸಮಸ್ಯೆಗಳನ್ನು ಪರಿಣಾಮಕಾರಿಯಾಗಿ ನಿರೂಪಿಸುವುದರಲ್ಲಿ ಭೈರಪ್ಪನವರ ಕೌಶಲ್ಯ ಮೆಚ್ಚುವಂಥದ್ದಾಗಿದೆ."[೪] ಎಂಬ ಅಭಿಪ್ರಾಯವನ್ನು ನೀಡುತ್ತಾರೆ.

"ಭೈರಪ್ಪನವರ ಕಾದಂಬರಿಗಳಲ್ಲಿ ಪಾತ್ರಗಳಿಗೆ ಸಿಗುವ ಪ್ರಾಮುಖ್ಯತೆಗಿಂತ ಆ ಮೂಲಕ ಹರಡಿಕೊಳ್ಳುವ ಸ್ವಾಭಾವಿಕ ಸಂದೇಶಗಳ ಧಾರೆ ಎಂತಹ ಓದುಗನಿಗೂ ಸಹ ಬದುಕಿನ ವೈವಿಧ್ಯತೆಗಳನ್ನು ಸೃಷ್ಟಿಸುವ ಅವರ ಚಿಂತನಶೀಲ ಅಂತರ್ಯದ ಅರಿವಾಗದಿರದು. ಕಥೆಯನ್ನು ಓದಿಸಿಕೊಂಡೇ ಹೋಗಬೇಕೆಂಬ ಕುತೂಹಲ ಅಥವಾ ಸುಖಾಂತಗಳ ಹಂದರವನ್ನು ಕಾಲ್ಪನಿಕತೆಯಲ್ಲಿ ಜೋಡಿಸುವಂಥ ಸೂತ್ರಗಳಿಗೆ ಭೈರಪ್ಪನವರ ಬರಹಗಳು ದೂರ ನಿಲ್ಲುವುದೇ ಒಂದು ವೈಶಿಷ್ಟ್ಯವಾಗುತ್ತದೆ. ಹೀಗಾಗಿ ಕೇವಲ ಘಟನೆಗಳಿಂದ ಕಥೆ ಹಾಗೂ ಪಾತ್ರ ಸೃಷ್ಟಿಯಾಗದೆ ವಿಫಲ ಜೋಡಣೆಯಿಲ್ಲದೆ, ಏನನ್ನು ಹೇಳಬೇಕೆಂದಿದ್ದರೂ ಅದನ್ನು ನೇರ ಹಾಗೂ ಸ್ಪಷ್ಟವಾಗಿ ನಮ್ಮನ್ನು ಸ್ಪಂದಿಸುವುದರಲ್ಲಿ ಅವರ ಕಾದಂಬರಿಗಳು ಯಶಸ್ವಿಯಾಗುತ್ತದೆ."[೫] ಎಂಬ ನಿಲುವುಗಳನ್ನು ಜಿ.ಮಣಿಪ್ರಕಾಶ್ ಇವರು ಹೊಂದಿರುತ್ತಾರೆ.

ಕೆ.ಎಸ್.ವತ್ಸಲಾ ವಿಶ್ವನಾಥ್ ಅವರು ಎಸ್.ಎಲ್.ಭೈರಪ್ಪನವರನ್ನು ಕುರಿತಂತೆ ಈ ರೀತಿಯಾಗಿ ಅಭಿಪ್ರಾಯಪಡುತ್ತಾರೆ. "ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಅಭೂತ ಪೂರ್ವ ಕೃತಿಗಳನ್ನು ಕೊಡುಗೆಯಾಗಿ ನೀಡಿರುವ ಖ್ಯಾತ ಸಾಹಿತಿ ಡಾ॥ ಎಸ್.ಎಲ್.ಭೈರಪ್ಪನವರು ಭಾರತೀಯ ಸಾಹಿತ್ಯ ಕ್ಷೇತ್ರ ಕೂಡಾ ಸ್ವೀಕರಿಸಿರುವ ಶ್ರೇಷ್ಠ ಕಾದಂಬರಿಕಾರರು. ಏಕೆಂದರೆ ಅವರ ಬಹುತೇಕ ಕೃತಿಗಳು ಕನ್ನಡದಿಂದ ಭಾರತದ ಇತರ ಭಾಷೆಗಳಿಗೆ ಅತ್ಯಂತ ಸಮರ್ಥವಾಗಿ, ಸಶಕ್ತವಾಗಿ ಅನುವಾದಗೊಂಡು

---

[೪] ಭೈರಪ್ಪಾಭಿನಂದನ ಪುಟ ೨೮ ಸಂ. ಕೊಂಡಜ್ಜಿ ಕೆ.ವೆಂಕಟೇಶ್. ಅಭಿನವ ಪ್ರಕಾಶನ. ಬೆಂಗಳೂರು ೧೯೯೫.
[೫] ಎಸ್.ಎಲ್.ಭೈರಪ್ಪನವರ ಬರಹದೃಷ್ಟಿ – ಪಾತ್ರ ಹಾಗೂ ನೈಜತೆಯ ತತ್ತ್ವ – ಭೈರಪ್ಪಾಭಿನಂದನ ಪುಟ ೨೯. ಸಂ. ಕೊಂಡಜ್ಜಿ ಕೆ.ವೆಂಕಟೇಶ್

ಭಾರತೀಯ ವಿದ್ವಾಂಸರ ಸಾಹಿತ್ಯಾಸಕ್ತರ ಹೃದಯವನ್ನು ಗೆದ್ದುಕೊಂಡಿವೆ. ಅಪಾರ ಜನಮನ್ನಣೆಯನ್ನೂ, ಜನಪ್ರಿಯತೆಯನ್ನೂ ಗಳಿಸಿಕೊಂಡಿವೆ. ಭಾರತೀಯ ಸಂಸ್ಕೃತಿ, ತತ್ತ್ವಜ್ಞಾನ, ಕಲೆ, ಆಧ್ಯಾತ್ಮಿಕ, ರಾಜಕೀಯ, ಐತಿಹಾಸಿಕ ವಿಚಾರಧಾರೆಯನ್ನು ತಲಸ್ಪರ್ಶಿಯಾಗಿ ಅಧ್ಯಯನ ನಡೆಸಿ ಅವುಗಳ ಸತ್ವವನ್ನು ತಮ್ಮದೇ ಆದ ವಿಶಿಷ್ಟ ವಿನ್ಯಾಸ, ವೈವಿಧ್ಯತೆಗಳಲ್ಲಿ ಹಿಡಿದಿಟ್ಟು ಕಲಾಕೃತಿಗಳಿಗೆ ಜೀವಂತ ಸ್ವರೂಪವನ್ನು ಕೊಡುವಲ್ಲಿ ಸಿದ್ಧಹಸ್ತರು ಎಂದರೆ ಉತ್ಪ್ರೇಕ್ಷೆಯೆನಿಸದು."[೬]

ಖಾದ್ರಿ ಶ್ಯಾಮಣ್ಣ ಅವರು "ಭೈರಪ್ಪನವರ ಸಾಹಿತ್ಯವು ಸುಲಭ ಗ್ರಾಹ್ಯವಲ್ಲದ ಸಾಹಿತ್ಯ ಎಂದು ಹೀಗಳೆಯುವವರಿದ್ದಾರೆ. ಆದರೆ ಆಲೋಚಿಸುವಂತೆ ಪ್ರೇರೇಪಿಸದ ಕೆರಳಿಸದ ಸಾಹಿತ್ಯ ಅರ್ಥವಿಲ್ಲದ ಬರಹ ಗಂಭೀರ ಸಾಹಿತ್ಯವನ್ನೂ ಜನಪ್ರಿಯವಾಗುವಂತೆ ಬರೆದು ಸಾಮಾನ್ಯರಿಗೂ ಮನದಟ್ಟು ಮಾಡಿಕೊಟ್ಟಿರುವ ಸಾಧನೆ ಭೈರಪ್ಪನವರದು"[೭] ಎಂದಿರುತ್ತಾರೆ.

ಸ್ವತಃ ಭೈರಪ್ಪನವರೇ "ಜೀವನದ ಅರ್ಥ ಮತ್ತು ಭಾವಗಳನ್ನು ಒಂದು ಬಂಧದಲ್ಲಿ ಸಾಕಾರಗೊಳಿಸಿಕೊಳ್ಳುವುದೇ ನನ್ನ ಬರವಣಿಗೆಯ ಗುರಿ"[೮] ಎಂದಿರುತ್ತಾರೆ.

ಕೊಂಡಜ್ಜಿ ಕೆ.ವೆಂಕಟೇಶ್ ಅವರು ಅಭಿಪ್ರಾಯಪಡುವಂತೆ "ಪ್ರತಿಭಾನ್ವಿತ ವಿದ್ಯಾರ್ಥಿಯಾಗಿ, ಸೌಂದರ್ಯ ಮೀಮಾಂಸೆಯಲ್ಲಿ ಸಂಶೋಧನೆಯನ್ನು ಮಾಡಿ, ತತ್ತ್ವಶಾಸ್ತ್ರದ ಅಧ್ಯಾಪಕರಾಗಿ ಭೈರಪ್ಪನವರು ತಮ್ಮೆಲ್ಲ ಪ್ರತಿಭೆ, ಸಾಹಸಗಳನ್ನು ಕಾದಂಬರಿ ರಚನೆಗೆ ತೊಡಗಿಸಿ ಇಂದು ಕನ್ನಡದ ಶ್ರೇಷ್ಠ ಸೃಜನಶೀಲ ಲೇಖಕರಾಗಿದ್ದಾರೆ. ಕಾದಂಬರಿಯಿಂದ ಕಾದಂಬರಿಗೆ ಬೆಳೆಯುತ್ತಾ ಬದುಕಿನ ವೈವಿಧ್ಯತೆ, ನಿಗೂಢತೆ, ಜಟಿಲತೆ

---

[೬] ಭೈರಪ್ಪಾಭಿನಂದನಾ ಪುಟ ೧೪೭. ಸಂ. ಕೊಂಡಜ್ಜಿ ಕೆ.ವೆಂಕಟೇಶ್.

[೭] ಕನ್ನಡ ಪ್ರಭ ದಿನಪತ್ರಿಕೆ ೧೯.೦೬.೧೯೮೯ ಸೋಮವಾರ ಬೆಂಗಳೂರು.

[೮] ವಿಶೇಷ ಸಂದರ್ಶನದ ಸಂದರ್ಭದ ಮಾತು.

ಹಾಗೂ ಅತ್ಯಂತ ಸಂಕೀರ್ಣ ಸಮಸ್ಯೆಗಳನ್ನು ಎತ್ತಿಕೊಂಡು ಅವುಗಳ ವಿವಿಧ ಮುಖಗಳನ್ನು ಬಿಡಿಸುತ್ತಾ ಇಂದು ಕನ್ನಡ ಕಾದಂಬರಿ ಪ್ರಪಂಚದಲ್ಲಿ ಪ್ರಮುಖ ಕಾದಂಬರಿಕಾರರಾಗಿದ್ದಾರೆ."[೯]

ಭೈರಪ್ಪನವರ ವಸ್ತುವೈವಿಧ್ಯತೆ ಚಿಂತನೆ ವಿಚಾರಗಳ ಸಹಜತೆ ಗಂಭೀರತೆಗಳು ಅಚ್ಚರಿ ಹುಟ್ಟಿಸುತ್ತವೆ. ಪ್ರತಿಯೊಂದು ಕೃತಿಯ ರಚನೆಯ ಹಿನ್ನಲೆಗೆ ದೀರ್ಘಕಾಲದ ಅಧ್ಯಯನ, ಚಿಂತನೆಗಳ ಪೂರ್ವಸಿದ್ಧತೆಯಿರುತ್ತದೆ. ಇವರ ಧರ್ಮಶ್ರೀಯಿಂದ ಮೊದಲ್ಗೊಂಡು ಇತ್ತೀಚಿನ ಆವರಣದವರೆಗಿನ ೨೦ ಕಾದಂಬರಿಗಳು ವಸ್ತು, ಶೈಲಿ, ಸ್ವರೂಪಗಳಲ್ಲಿ ಒಂದೊಂದು ರೀತಿಯಲ್ಲಿ ಭಿನ್ನವಾಗಿವೆ ಆಯ್ದುಕೊಳ್ಳುವ ವಸ್ತುವೇ ಕಾದಂಬರಿಯ ಸ್ವರೂಪವನ್ನು ನಿರ್ಧರಿಸುತ್ತದೆ ಎನ್ನುವುದು ಎಲ್ಲ ಲೇಖಕರ ಅನುಭವದಂತೆಯೇ ಇವರದೂ ಕೂಡಾ. ಭೈರಪ್ಪನವರು ಇಂತಹ ಒಂದು ಅಭಿವ್ಯಕ್ತಿಯನ್ನು ಹೀಗೆ ವಿವರಿಸುತ್ತಾರೆ–"ಅಭಿವ್ಯಕ್ತಿ ಎಂದರೆ ಭಾವನೆಗಳ ಕ್ರೋಢಿಕರಣ ಆಳ ಆಳಕ್ಕೆ ಇಳಿದು ಸೂಕ್ಷ್ಮಾತಿಸೂಕ್ಷ್ಮಗಳನ್ನೆಲ್ಲ ಹುಡುಕಿ ಹೊರತಂದು ಸ್ವರೂಪ ಬರುವಂತೆ ಜೋಡಿಸುವುದು"[೧೦] ಎಂಬುದಾಗಿ.

ಡಾ.ಎಸ್.ವಿ.ಪ್ರಭಾವತಿಯವರು "ಭೈರಪ್ಪನವರ ಕಾದಂಬರಿಗಳಲ್ಲಿ ಕಾಣುವುದು ಬದುಕಿಗೆ ಬದುಕೇ ಬರೆದ ಭಾಷ್ಯ. ಇವರ ಬರವಣಿಗೆಯಲ್ಲಿ ಇದನ್ನು ಬಿಟ್ಟು ಮಿಕ್ಕೆಲ್ಲವನ್ನೂ ಹುಡುಕುವುದೆಂದರೆ ಮರಗಳನ್ನು ಎಣಿಸುತ್ತಾ ಕಾಡಿನ ಒಟ್ಟು ನೋಟವನ್ನು ಕಳೆದುಕೊಳ್ಳುವುದು ಎಂದೆಂಬ ಅಭಿಪ್ರಾಯವನ್ನು – ಪಡುತ್ತಾರೆ."[೧೧]

---

[೯] ಭೈರಪ್ಪಾಭಿನಂದನ ಪುಟ ೭ ಸಂ. ಕೊಂಡಜ್ಜಿ ಕೆ.ವೆಂಕಟೇಶ್

[೧೦] "ಕಥೆ ಮತ್ತು ಕಥಾವಸ್ತು"–ಡಾ.ಎಸ್.ಎಲ್.ಭೈರಪ್ಪ.

[೧೧] 'ಚಿತ್ರಭಿತ್ತಿ' – ಪುಟ ೧೮೫. ಡಾ.ಎಸ್.ವಿ.ಪ್ರಭಾವತಿ.

"ಸಾಹಿತಿಯಾಗಿ ಭೈರಪ್ಪನವರ ಸಾಧನೆಯನ್ನು ಯಾರೂ ಅಲ್ಲಗಳೆಯುವುದಿಲ್ಲ. ಆದರೆ ಅವರ ಪ್ರಭಾವವನ್ನು ಹಲವರು ಪರಿಗಣಿಸುವುದಿಲ್ಲ. ಅವರ ವೈಚಾರಿಕ ಚಿಂತನೆಯ ಆಳ ಅಗಲಗಳನ್ನು ಯಾರೂ ಪ್ರಶ್ನಿಸುವುದಿಲ್ಲ. ಆದರೆ ಅನೇಕರು ತಮ್ಮದೇ ಕಾರಣಗಳಿಂದಾಗಿ ಅದರ ಪರವಾಗಿ ನಿಲ್ಲುವುದಿಲ್ಲ. ಭಾರತೀಯ ಸಮಾಜದ ಬಗ್ಗೆ ಅವರಿಗಿರುವ ತಿಳುವಳಿಕೆಯ ವ್ಯಾಪ್ತಿಯನ್ನು ಯಾರೂ ಶಂಕಿಸುವುದಿಲ್ಲ. ಆದರೆ ಅದರ ಬಹುಮುಖೀ ಸ್ವರೂಪದ ಬಗ್ಗೆ ಅವರಿಗೆ ಅಲಕ್ಷ್ಯ ಎಂದು ಟೀಕಿಸದೇ ಬಿಡುವುದಿಲ್ಲ. ಅವರ ಹಾಗೆ ಮನುಷ್ಯರನ್ನು ಮನುಷ್ಯ ಸ್ವಭಾವವನ್ನು ಅರ್ಥೈಸುವ ಚಿಂತಕರು ಬಹಳಿಲ್ಲ ಎಂದು ಯಾರೂ ಅಚ್ಚರಿ ಪಡದಿರುವುದಿಲ್ಲ. ಆದರೆ ಅವರಾರು ದೇಸೀ ಚಿಂತನೆ ಎಂದು ಮುಕ್ತವಾಗಿ ಗುರುತಿಸುವುದಿಲ್ಲ. ಅವರು ಚಳುವಳಿಗಳಿಂದ ಬಹಳ ದೂರ ಎಂದು ಯಾರೂ ಹೇಳದೇ ಬಿಡುವುದಿಲ್ಲ ಆದರೆ ಅವರು ಸಿದ್ಧಾಂತಗಳಿಗೆ ಹತ್ತಿರ ಎಂದು ಹೇಳಲು ಮರೆಯುವುದಿಲ್ಲ. ಅವರ ಅದ್ಭುತ ಜನಪ್ರಿಯತೆಯನ್ನು ಕಂಡು ಯಾರೂ ವಿಸ್ಮಯಗೊಳದೇ ಕರುಬದೇ ಇಲ್ಲ. ಆದರೆ ಅವರು ಅದ್ಭುತ ಲೇಖಕ ಎಂದು ಕರೆಯಲು ಹಲವರು ಇಷ್ಟಪಡುವುದಿಲ್ಲ. ಭೈರಪ್ಪ ತಮಗೇನು ಬೇಕೋ ಅದನ್ನು ನಿರ್ಭೀತವಾಗಿ ಸ್ಪಷ್ಟವಾಗಿ ಹೇಳುತ್ತಾರೆ ಎಂಬುದನ್ನು ಯಾರೂ ಒಪ್ಪದೇ ಹೋಗುವುದಿಲ್ಲ. ಆದರೆ ಅವರನ್ನು ಕುರಿತ ಕಂಡ ಮತ್ತು ಕಲ್ಪಿತ ವಿರೋಧಾಭಾಸಗಳಿಗೆ ಕೊನೆ ಮೊದಲಿಲ್ಲ" ಎಂಬ ಪೂರ್ಣಿಮಾ ಅವರ ಮಾತುಗಳು ಭೈರಪ್ಪನವರ ಬಗೆಗಿನ ವಿಮರ್ಶೆಯ ದ್ವಂದ್ವವನ್ನು ಬಹುಸೊಗಸಾಗಿ ಹಿಡಿದಿಟ್ಟಿದೆ ಎಂದು ಹೇಳಬಹುದು.[೭೨]

"ರಾಮಾಯಣ, ಮಹಾಭಾರತಗಳು ಇಡೀ ದೇಶವನ್ನು ಆಕ್ರಮಿಸಿದಂತೆ ಹಿಡಿದಿಡುವಂತೆ ಅನಕ್ಷರಸ್ಥ ಅವಿದ್ಯಾವಂತರನ್ನು ತಲುಪುವಂತೆ ಇವರ ಬರವಣಿಗೆಗಳು ಅಕ್ಷರ ಬಲ್ಲವರು ಭಾಷೆ ಬಲ್ಲವರು ವೈಚಾರಿಕತೆ ಇರುವವರು, ಓದುವ ಹವ್ಯಾಸವುಳ್ಳವರು ಸಾಹಿತ್ಯದಲ್ಲಿ ಆಸಕ್ತಿ. ಇರುವವರನ್ನು ಆಕ್ರಮಿಸಿ ಹಿಡಿದಿಡುತ್ತವೆ" ಎಂದು ಒಬ್ಬ

[೭೨] 'ಚಿತ್ರಭಿತ್ತಿ'-ಪುಟ ೯೮. ಡಾ.ಎಸ್.ವಿ.ಪ್ರಭಾವತಿ.

ವಿಮರ್ಶಕರೆಂದರೆ, ಇನ್ನೊಬ್ಬ ವಿಮರ್ಶಕರು ಅವರ ಜನಪ್ರಿಯತೆಯ ಕಾರಣವನ್ನು ಹೀಗೆ ಗುರುತಿಸುತ್ತಾರೆ. 'ಬದುಕಬೇಕು ತೃಪ್ತಿಕರವಾಗಿ ಬದುಕಬೇಕು ಎಂಬ ಜೀವನಾಕಾಂಕ್ಷೆಯ ಅರ್ಥಪೂರ್ಣವಾದ ಸಾಕ್ಷಾತ್ಕಾರ ಮೂಲಭೂತವಾದ ಪ್ರೇಮವಾದ ಹಾಗೂ ಆ ದಾಹದ ತೃಪ್ತಿಯನ್ನು ತಂದುಕೊಡುವ ಸಾಮರ್ಥ್ಯ ಮತ್ತು ಅದರ ಕಾಣ್ಕೆ- ಇವು ಅವರ ಬರಹಗಳ ಗುಣಮಟ್ಟಕ್ಕೂ ಜನಪ್ರಿಯತೆಗೂ ಇರುವ ಮತ್ತೊಂದು ಕಾರಣ ಎಂದಿರುತ್ತಾರೆ.

ಕನ್ನಡದ ಯಾವ ಕಾದಂಬರಿಕಾರರಿಗೂ ಇವರಿಗಿರುವಷ್ಟು ವಾಚಕ ವರ್ಗವಿಲ್ಲ. "ಅಮೇರಿಕಾ ಪ್ರವಾಸ ಮುಗಿಸಿ ಬಂದಿರುವ ಕನ್ನಡದ ಕವಿ-ವಿಮರ್ಶಕ, ಪ್ರಾಧ್ಯಾಪಕರಾದ ಡಾ.ಎಸ್.ಲಕ್ಷ್ಮೀನಾರಾಯಣ ಭಟ್ಟರು ಸಾಂದರ್ಭಿಕವಾಗಿ ಆಡಿದ ಮಾತಿದು; ಅಮೇರಿಕದಲ್ಲಿರುವ ಪ್ರತಿಯೊಬ್ಬ ಕನ್ನಡಿಗರ ಮನೆಯಲ್ಲೂ ಭೈರಪ್ಪನವರ ಕಾದಂಬರಿಗಳಿವೆ. ಕರ್ನಾಟಕಕ್ಕಿಂತ ಅಮೇರಿಕಾದಲ್ಲಿ ಅವರು ಹೆಚ್ಚು ಪಾಪ್ಯೂಲರ್, ದೊಡ್ಡ ಪ್ರಮಾಣದಲ್ಲಿ ಓದುಗರಿದ್ದಾರೆ. ಇದು ವಾಸ್ತವದ ಮಾತು. ಇವರ ಕಾದಂಬರಿಗಳ ಸಂಗ್ರಹವೆಂದರೆ ನಮ್ಮ ಪರಂಪರೆ-ಸಂಸ್ಕೃತಿಗಳ ಸಂಗ್ರಹವೆಂದುಕೊಂಡಿದ್ದಾರೆ"[೧೩]

"ಭೈರಪ್ಪನವರ ಕಾದಂಬರೀ ಪ್ರಪಂಚದ ವೈವಿಧ್ಯ ಹಾಗೂ ವಿಸ್ತಾರಗಳು ಬೆರಗುಗೊಳಿಸುವಂತಹವು. ಈ ಪ್ರಪಂಚ ಹಾಗೂ ಇಲ್ಲಿನ ಪಾತ್ರಗಳು ಅತ್ಯಂತ ಸಂಕೀರ್ಣ ರಚನಾ ವಿನ್ಯಾಸಗಳುಳ್ಳವು. ಮಾನವನ ಪ್ರಜ್ಞಾವಿಕಾಸಪಥದಲ್ಲಿ ಕಂಡುಬರುವ, ಅನ್ನಮಯದಿಂದ ಆನಂದಮಯದವರೆಗಿನ ವಿಭಿನ್ನ ಹಂತಗಳ ಪ್ರಜ್ಞಾಸ್ತರಗಳು, ಈ ಕಾದಂಬರೀ ಪ್ರಪಂಚದ ಪಾತ್ರಗಳಲ್ಲಿ ಮೂರ್ತಗೊಳ್ಳುತ್ತಾ ಸ್ಪಷ್ಟ ರೂಪ ತಳೆದು ಕಲಾತ್ಮಕವಾಗಿ ಅನಾವರಣಗೊಳ್ಳುತ್ತವೆ."[೧೪] ಎಂಬುದಾಗಿ ಎಲ್.ವಿ.ಶಾಂತಕುಮಾರಿಯವರು ಅಭಿಪ್ರಾಯಪಡುತ್ತಾರೆ.

---

[೧೩] ಡಾ.ಗೋಪಾಲರಾವ್. ಎಚ್.ಎಸ್.(ಸಂ)ಕನಕಸಿರಿ, ಡಾ.ಎಸ್.ಎಲ್.ಭೈರಪ್ಪ: ಒಂದು ಪರಿಚಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೯.

[೧೪] 'ಯುಗಸಾಕ್ಷಿ' ಪುಟ ೩೨ ಎಲ್.ವಿ.ಶಾಂತಕುಮಾರಿ. ಪ್ರಕಾಶನ ಸಾಹಿತ್ಯ ಭಂಡಾರ ೨೦೦೯.

ಭೈರಪ್ಪನವರನ್ನು ಅರ್ಥೈಸುವ ಪ್ರಯತ್ನದಲ್ಲಿ ನಮಗೆ ಪ್ರಮುಖವಾಗಿ ಕಾಣಿಸುವುದು ಅವರ ಆತ್ಮನಿಷ್ಠೆ ಅನುಭವನಿಷ್ಠೆ ಮತ್ತು ವ್ಯಾಪಕ ಅಧ್ಯಯನಗಳು. ಮಾನವ ಅನುಭವವನ್ನು ಶೋಧಿಸುವುದು ಮತ್ತು ಚಿತ್ರಿಸುವುದೇ ತಮ್ಮ ಬರವಣಿಗೆಯ ಪ್ರಮುಖ ಲಕ್ಷಣವೆಂಬುದನ್ನು ಅವರೇ ವಿವರಿಸುತ್ತಾರೆ. ಹೀಗೆ ಲೇಖಕರಿಗೆ ಸಾಧ್ಯವಾಗದ ಯಾವುದೋ ಒಂದು ವಿಶಿಷ್ಟಗುಣವನ್ನು ರೂಢಿಸಿಕೊಂಡವರು. ಅಲ್ಲದೆ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಕಾಣಿಸಿಕೊಂಡ ಯಾವುದೇ ಚಳುವಳಿಗಳಿಗೆ ಯಾವುದೇ ರೀತಿಯಲ್ಲಿ ಬದ್ಧರಾಗದೇ, ತಮ್ಮದೇ ಆದ ವಿಚಾರದರ್ಶನ, ಕಾಣ್ಕೆಗಳೊಂದಿಗೆ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರಕ್ಕೆ ಬದ್ಧರಾಗಿ, ನಿರಂತರ ಸೃಜನಶೀಲ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡ ಭೈರಪ್ಪನವರು ಜನಸಾಮಾನ್ಯರ ದೃಷ್ಟಿಯಲ್ಲಿ ಬಹು ಜನಪ್ರಿಯ ಕಾದಂಬರಿಕಾರರಾಗಿ ಗುರುತಿಸಿಕೊಂಡವರು.

************

# ಅಧ್ಯಾಯ ೬

## ಸಮಾಪನ-ಅಧ್ಯಯನದ ಫಲಶೃತಿ.

ಕನ್ನಡ ಸಾಹಿತ್ಯಕ್ಕೆ ಅದರಲ್ಲೂ ಮುಖ್ಯವಾಗಿ ಕಾದಂಬರಿ ಪ್ರಕಾರಕ್ಕೆ ಹೊಸ ಆಯಾಮವನ್ನು ನೀಡಿರುವ ಎಸ್.ಎಲ್.ಭೈರಪ್ಪನವರು, ಮಾಸ್ತಿ, ಶಿವರಾಮ ಕಾರಂತ, ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲ, ಯು.ಆರ್.ಅನಂತಮೂರ್ತಿ, ಪೂರ್ಣಚಂದ್ರ ತೇಜಸ್ವಿ, ಚಂದ್ರಶೇಖರ ಕಂಬಾರರಂತಹ ಹೆಸರಾಂತ ಬರಹಗಾರರ ಸಾಲಿಗೆ ಸೇರಿದವರು. ಅಪ್ಪಟ ಭಾರತೀಯ ಲೇಖಕರಾದ ಇವರು ಭಾರತೀಯ ಮನಸ್ಸು ಇಟ್ಟುಕೊಂಡೇ ಪ್ರಪಂಚದ ಅದ್ಭುತಗಳನ್ನು ಸ್ವೀಕರಿಸಲು ಆರೋಗ್ಯಕರ ಕಿಡಕಿಗಳನ್ನು ತೆರೆದಿಟ್ಟುಕೊಂಡ ಲೇಖಕ. ಹೊಸ ಹೊಸ ಸವಾಲುಗಳನ್ನು ಸ್ವೀಕರಿಸಿ ಹೊಸ ಹೊಸದನ್ನು ಬರೆಯುವ ಅದನ್ನು ಗಟ್ಟಿ ಕಾಳಾಗಿಸುವ ಅಪರೂಪದ ಶಿಸ್ತು ಶಕ್ತಿ ಭೈರಪ್ಪನವರದ್ದು ಎಂಬುದು ನಿರ್ವಿವಾದವಾದ ವಿಚಾರವಾಗಿದೆ. ಇವರ ಬರವಣಿಗೆ ಕೇವಲ ಒಂದು ಗುಂಪಿನವರಿಗೆ ಪ್ರದೇಶಕ್ಕೆ ಅಥವಾ ಭಾಷೆಗೆ ಮಾತ್ರ ಸೀಮಿತವಾಗಿರದೇ ಇಡೀ ದೇಶಕ್ಕೆ ಪ್ರಸ್ತುತವಾದ ಬರವಣಿಗೆಯಾಗಿ ಕಂಡು ಬಂದಿದೆ.

ಕಾದಂಬರಿಕಾರರಾಗಿ ಕನ್ನಡದಲ್ಲಿ ಬಹುದೊಡ್ಡ ಹೆಸರನ್ನು ಪಡೆದಿರುವ ಎಸ್.ಎಲ್.ಭೈರಪ್ಪನವರು 'ಧರ್ಮಶ್ರೀ'ಯಿಂದ 'ಆವರಣದ'ವರೆಗೆ ೨೦ ಕಾದಂಬರಿಗಳನ್ನು ರಚಿಸಿರುತ್ತಾರೆ. ಇವರ ಒಂದೊಂದು ಕಾದಂಬರಿಗಳು ಒಂದೊಂದು ಕಾರಣಕ್ಕಾಗಿ ಜಿಜ್ಞಾಸೆ, ಚರ್ಚೆಗೆ ಒಳಗಾಗಿವೆ. ಕೃತಿಯಿಂದ ಕೃತಿಗೆ ಇವರ ಲೇಖನ ಕಲೆ ಸತ್ವಶಾಲಿಯಾಗಿ ಬೆಳೆಯುತ್ತಾ ಸಾಗಿರುವುದು ಕಾಣಿಸುತ್ತದೆ.

ತತ್ವಶಾಸ್ತ್ರ, ಇತಿಹಾಸ, ಸಮಾಜಶಾಸ್ತ್ರ, ವಿವಿಧ ದೇಶ ಭಾಷೆಗಳ ಸಾಹಿತ್ಯ ಕೃತಿಗಳ ತಲಸ್ಪರ್ಶಿ ಅಧ್ಯಯನ, ಸಂಶೋಧಕ ದೃಷ್ಟಿ, ಪ್ರಖರ ವೈಚಾರಿಕತೆ ಮತ್ತು ವಿಫುಲ ಕ್ಷೇತ್ರಾಧ್ಯಯನಗಳ ಹಿನ್ನೆಲೆಯಲ್ಲಿ ಭೈರಪ್ಪನವರು ಸೃಷ್ಟಿಸಿರುವ ಸಾಹಿತ್ಯ ಯಾವ ಕಾಲಕ್ಕೂ ಜಗತ್ತಿನ ಶ್ರೇಷ್ಠ ದರ್ಜೆಯ ಸಾಹಿತ್ಯಕ್ಕೆ ಒಂದು ನಿದರ್ಶನವಾಗಿ ನಿಲ್ಲುವಂಥದ್ದು.

ಭೈರಪ್ಪನವರು ಹೆಚ್ಚು ಕಡಿಮೆ ಕಾರಂತರ ದಾರಿಯಲ್ಲಿ ನಡೆದವರು. ಅದೇ ಅನ್ವೇಷಣ ಪ್ರವೃತ್ತಿ, ಅದೇ ಸ್ವತಂತ್ರ ನಿಲುವು ವೈಚಾರಿಕತೆ ಎಲ್ಲ ಸಿದ್ಧ ಸಾಹಿತ್ಯ ಸಿದ್ಧಾಂತಗಳನ್ನು ಮೀರಿ ನಿಂತವರು. ಜೀವನಾನುಭವಕ್ಕೆ ಸದಾ ಹಾತೊರೆಯುವ ಮನಸ್ಸು ಪರಿಶ್ರಮಕ್ಕೆ ಸಾಹಸಕ್ಕೆ ಹಿಂಜರಿಯದ ಅದಮ್ಯ ಜೀವನಾಸಕ್ತಿ.

ಸಾಹಿತ್ಯದಲ್ಲಿ ಡಾ.ಶಿವರಾಮ ಕಾರಂತರನ್ನು ಬಿಟ್ಟರೆ ಭೈರಪ್ಪನವರಷ್ಟು ಪ್ರವಾಸಾನುಭವ ಪಡೆದ ಲೇಖಕ ಬಹುಶಃ ಮತ್ತೊಬ್ಬರಿಲ್ಲ. ಆದ್ದರಿಂದ ಅವರು ಕಾದಂಬರಿಗಳಲ್ಲಿ 'ಅನುಭವ'ಕ್ಕೆ ಹೆಚ್ಚಿನ ಮಹತ್ವಕೊಟ್ಟಿದ್ದಾರೆ.

೬೦ರ ದಶಕದಿಂದ ಅವಿರತವಾಗಿ ಬರೆಯುತ್ತಿರುವ ಭೈರಪ್ಪನವರು ಆಯಾ ಕಾಲಘಟ್ಟಗಳಲ್ಲಿ ನಡೆದ ಮತ್ತು ನಡೆಯುತ್ತಲೇ ಬಂದಿರುವ ಸಾಹಿತ್ಯ ಚಳುವಳಿಗಳಿಂದ ದೂರ ಉಳಿದು, ತಮ್ಮದೇ ಆದ ವಿಶಿಷ್ಟ ಶೈಲಿಯ ಮತ್ತು ಕಥಾ ನಿರೂಪಣೆಯ ಅದ್ಭುತ ಕಲಾಕೌಶಲ್ಯದಿಂದ ಅಂತರರಾಷ್ಟ್ರೀಯ ನೆಲೆಗಳಲ್ಲಿಯೂ ಜನಪ್ರಿಯ ಲೇಖಕರೆನಿಸಿಕೊಂಡಿದ್ದಾರೆ. ನಿರಂತರವಾಗಿ ಬರೆಯುತ್ತ ಬಂದಿರುವ ಭೈರಪ್ಪನವರು ತಮ್ಮ ಕಾದಂಬರಿಗಳ ಮೂಲಕ ಎಲ್ಲ ವರ್ಗದ ಓದುಗರನ್ನು ಸೆರೆ ಹಿಡಿದು ನಿಲ್ಲಿಸಬಲ್ಲ ಸತ್ವ ಸಾಮರ್ಥ್ಯಗಳನ್ನು ಇಂದಿಗೂ ಉಳಿಸಿಕೊಂಡು ಬಂದಿರುತ್ತಾರೆ.

ಗಂಭೀರ ತಾತ್ವಿಕ ಚಿಂತನೆಯು ಭೈರಪ್ಪನವರ ಕಾದಂಬರಿಗಳ ಯಶಸ್ವಿಗೆ ಕಾರಣವಾಗಿದೆ. ಇವರ ಕಾದಂಬರಿಗಳ ಪಾತ್ರಗಳಲ್ಲಿ ತೀವ್ರ ಸಂವೇದನೆ ಹಾಗೂ ದಟ್ಟ

ಅನುಭವ, ಸಮರ್ಥವಾದ ಭಾಷೆಯ ಬಳಕೆಗಳನ್ನು ಕಾಣಬಹುದಾಗಿದೆ. ಕಾದಂಬರಿಯ ವಸ್ತುವಿಗೆ ಅಗತ್ಯವಾದ ಸನ್ನಿವೇಶ, ಘಟನೆ, ಪಾತ್ರ ಘೋಷಣೆ ಇವುಗಳಿಗೆ ಸಂಬಂಧಿಸಿದಂತೆ ಸ್ವತಃ ಭೈರಪ್ಪನವರೇ ಹೀಗೆನ್ನುತ್ತಾರೆ. "ಕೇವಲ ಆಕಸ್ಮಿಕ ಘಟನೆಗಳ ಮೇಲೆಯೇ ಸೃಷ್ಟಿಯಾದ ಕಾದಂಬರಿಯಲ್ಲಿ ಭದ್ರರಚನೆ ಇರುವುದಿಲ್ಲ. ಕಲಾಸೃಷ್ಟಿಯಲ್ಲಿ ನಿರತರಾಗಿರುವ ಕಲ್ಪನೆಯು ಪೂರ್ಣ ಸಾಂಗತ್ಯ ಪಡೆಯದಿದ್ದರೆ ಅಥವಾ ಕಲ್ಪನೆಯು ತನ್ನ ಸ್ವಾಭಾವಿಕ ಅಂತ್ಯದಲ್ಲಿ ಮುಕ್ತಾಯವಾಗದಿದ್ದರೆ ಕಲಾವಿದನು ಪ್ರಜ್ಞಾಪೂರ್ವಕವಾಗಿಯೇ ಅಥವಾ ತನಗೆ ತಿಳಿಯದಂತಹ ರೀತಿಯಲ್ಲಿ ಅದಕ್ಕೆ ಒಂದು ಅಂತ್ಯವನ್ನು ಕೊಡಬಹುದು ಪ್ರತಿಯೊಂದು ಕಲಾಕೃತಿಯು ತನ್ನದೇ ಆದ ಸಂಕೀರ್ಣತೆಯನ್ನು ಸೃಷ್ಟಿಸುತ್ತದೆ."[೧]

"ಔಷಧಿಯನ್ನು ನಿರ್ಧರಿಸುವ ಮೊದಲು ವೈದ್ಯನು ರೋಗ-ಲಕ್ಷಣಗಳು ಅದರ ಕಾರಣ ಅದೇ ಜಾತಿಯ ಬೇರೆ ಬೇರೆ ರೋಗಗಳಿಗೂ ಇದಕ್ಕೂ ಇರುವ ಸಂಬಂಧ ಮೊದಲಾದವನ್ನು ತಿಳಿದುಕೊಳ್ಳುವಂತೆ ಕಾದಂಬರಿಕಾರನು ತಾನು ಚಿತ್ರಿಸುವ ಸಮಾಜ ಅಥವಾ ವ್ಯಕ್ತಿಯನ್ನು ಅರಿಯಬೇಕು"[೨] ಎನ್ನುವ ಕಾದಂಬರಿಕಾರರು ತಮ್ಮ ಕಾದಂಬರಿಯಲ್ಲಿನ ಸಮಸ್ಯೆಗಳಿಗೆ ವೈದ್ಯರೋಗಕ್ಕೆ ಚಿಕಿತ್ಸೆ ಮಾಡುವ ಕ್ರಮದಲ್ಲಿಯೇ ತಮ್ಮದೇ ಆದ ಚಿಕಿತ್ಸಾ ಕ್ರಮವನ್ನು ಅನುಸರಿಸಿದ್ದಾರೆ.

ಸಂಕೇತಗಳನ್ನು ಗಾಣದೆತ್ತಿನಂತೆ ದುಡಿಸಿಕೊಂಡು ಕೃತಿಯನ್ನು ಕ್ಲಿಷ್ಟಗೊಳಿಸುವುದು ಇವರಿಗೆ ಸಲ್ಲದ ಮಾತು. ಸರಳೀಕರಣ ಎಂದ ಮಾತ್ರಕ್ಕೆ ಗಾಢವಿರದ ಶೋಧಕ್ಕೆ ಸಿಕ್ಕದ ಉಸಿರಿಲ್ಲದ ಹಂದರವಾಗಿ ಕೃತಿ ಸೊರಗುತ್ತದೆಂಬ ಮಾತು ಭೈರಪ್ಪನವರ ಕೃತಿಗಳಿಗೆ ಅನ್ವಯವಾಗುವುದಿಲ್ಲ. ಆದರೆ ೬೦ರ ದಶಕದ ಕಾದಂಬರಿಗಳಾದ 'ಧರ್ಮಶ್ರೀ', 'ದೂರಸರಿದರು', 'ವಂಶವೃಕ್ಷ', 'ತಬ್ಬಲಿಯು ನೀನಾದೆ ಮಗನೇ' ಮೊದಲಾದ ಕಾದಂಬರಿಗಳು ಮತ್ತು ಎಪ್ಪತ್ತರ ದಶಕದ 'ಗೃಹಭಂಗ', 'ನಿರಾಕರಣ', 'ದಾಟು', 'ಪರ್ವ'

---

[೧] "ಸತ್ಯ ಮತ್ತು ಸೌಂದರ್ಯ" ಪುಟ ೧೭೪. ಎಸ್.ಎಲ್.ಭೈರಪ್ಪ. ಬೆಂಗಳೂರು ೧೯೭೦.
[೨] "ಸತ್ಯ ಮತ್ತು ಸೌಂದರ್ಯ" ಪುಟ ೨೬. ಎಸ್.ಎಲ್.ಭೈರಪ್ಪ. ಬೆಂಗಳೂರು ೧೯೭೦.

ಇತ್ಯಾದಿ ಕಾದಂಬರಿಗಳು ಜನಪ್ರಿಯವಾದ ಹಾಗೆ ಎಂಭತ್ತರ ದಶಕದ 'ನೆಲೆ', 'ಸಾಕ್ಷಿ', 'ಅಂಚು', 'ತಂತು', 'ಸಾರ್ಥ'ಗಳು. ಅವುಗಳಲ್ಲಿನ ಗಾಢ ಚಿಂತನೆ ತಾತ್ವಿಕ ದರ್ಶನಗಳಿಂದಾಗಿ ಸಾಮಾನ್ಯ ಓದುಗನ ಹಿಡಿತಕ್ಕೆ ಸಿಗದೆ ಅರ್ಥ ಗ್ರಹಿಕೆಯ ಹೊರಗೆ ಉಳಿದವು.

"ಸಾಹಿತ್ಯ ಸೃಷ್ಟಿಯ ಪ್ರಚೋದನಾ ಸಾಮಗ್ರಿ ಯಾವುದೇ ಇರಲಿ, ಎಲ್ಲಿಂದಲೇ ಬಂದಿರಲಿ, ಅದು ಸೃಜನಾತ್ಮಕ ನಿಯಮಗಳಿಗನುಸಾರವಾಗಿ ಕಲ್ಪನೆಯಲ್ಲಿ ಬೆಳೆದು ಅನಂತರ ಕಲ್ಪನೆಯೇ ಸೃಷ್ಟಿಕ್ರಿಯೆಯನ್ನು ಕೈಗೆತ್ತಿಕೊಂಡು 'ರಸ-ಧ್ವನಿ-ಔಚಿತ್ಯ ಬಂಧ ರಚನೆ' ಮೊದಲಾದ ಸಾಹಿತ್ಯ ತತ್ವಗಳಿಗೆ ಅನುಸಾರವಾಗಿ ಬೆಳೆದಾಗ ಮಾತ್ರ ಅದು ಸಾಹಿತ್ಯವಾಗುತ್ತದೆ." ಎಂದು ಸ್ವತಃ ಭೈರಪ್ಪನವರೇ ಹೇಳಿರುವ ಮಾತು ಅವರ ಕಲಾಪ್ರಜ್ಞೆಗೆ ಸಾಕ್ಷಿಯಾಗಿದೆ. ಅಲ್ಲದೆ ಅವರು ತಮ್ಮ ಕೃತಿಗಳನ್ನು ಹೇಗೆ ರಚಿಸುತ್ತಾರೆ ಎನ್ನುವುದನ್ನು ಕೂಡ ಅವರ ಈ ಮಾತುಗಳು ಸೂಚಿಸುತ್ತವೆ.

ಇವರು ತಮ್ಮ ಕಾದಂಬರಿಗಳ ಮೂಲಕ ಸಾಮಾಜಿಕ ಸಮಸ್ಯೆಗಳು ಆಧುನಿಕ ಮತ್ತು ಸಂಪ್ರದಾಯ ಮೌಲ್ಯಗಳ ಘರ್ಷಣೆ ಇವುಗಳನ್ನೇ ಓದುಗರ ಮುಂದಿಟ್ಟು ಪರಿಣಾಮಕಾರಿಯಾಗಿ ಮಾಡುವುದೇ ಅಲ್ಲದೆ ತಮ್ಮ ಆಕರ್ಷಕ ಸರಳ ಬರವಣಿಗೆಯಿಂದಾಗಿ ಜನಪ್ರಿಯ ಕಾದಂಬರಿಕಾರರೂ ಆಗಿದ್ದಾರೆ. ತಾತ್ವಿಕ ಚಿಂತನೆ ಇವರ ಕಾದಂಬರಿಗಳಲ್ಲಿ ಕಂಡುಬರುವ ಮುಖ್ಯ ಅಂಶ. ಇವರು ತಮ್ಮ ಮೊದಲ ಕಾದಂಬರಿ 'ಧರ್ಮಶ್ರೀ' ಪ್ರಕಟಿಸಿದ (೧೯೬೧) ನಂತರ ಕಾದಂಬರಿಯಿಂದ ಕಾದಂಬರಿಗೆ ತಂತ್ರ, ವಿಷಯ ಮತ್ತು ದೃಷ್ಟಿಗಳಲ್ಲಿ ವೈವಿಧ್ಯವನ್ನು ಸಂಪಾದಿಸುತ್ತಾ ಇದುವರೆಗೂ ೨೦ ಕಾದಂಬರಿಗಳನ್ನು ರಚಿಸಿದ್ದಾರೆ. "ಜೀವನದ ಅರ್ಥ ಮತ್ತು ಭಾವಗಳನ್ನು ಒಂದು ಬಂಧದಲ್ಲಿ ಸಾಕಾರಗೊಳಿಸುವದೇ ನನ್ನ ಬರವಣಿಗೆಯ ಗುರಿ. ನನ್ನ ಸೃಷ್ಟಿಶೀಲತೆ ಕೆಲಸ ಮಾಡಿರುವುದು ಸಾಹಿತ್ಯದಲ್ಲಿ, ತತ್ತ್ವಶಾಸ್ತ್ರದಲ್ಲಿ ವಿದ್ವಾಂಸನಾಗಬಹುದಿತ್ತು ಆದರೆ

ಸೃಜನಶೀಲನಾಗುತ್ತಿದ್ದೇನೋ ಇಲ್ಲವೋ ನಾನು ಕಾಣೆ"[೩] ಎನ್ನುವ ಇವರ ಮಾತಿನಿಂದ ತತ್ತ್ವಶಾಸ್ತ್ರವನ್ನು ಆಳವಾಗಿ ಅಧ್ಯಯನ ಮಾಡಿರುವ ಇವರ ಮೊದಲ ಒಲವು ಕಾದಂಬರಿಯನ್ನು ರಚಿಸುವುದೇ ಆಗಿದೆ ಎಂದು ತಿಳಿದುಬರುತ್ತದೆ.

ಯಾವುದೇ ಕಾದಂಬರಿಯಲ್ಲಿ ಕಾದಂಬರಿಕಾರನ ವಿಚಾರಗಳು ಹಾಸು ಹೊಕ್ಕಾಗಿ ಬರುತ್ತವೆ. ಆದರೆ ಅದೇ ಪ್ರಧಾನವಾಗಿ ಬಿಟ್ಟರೆ ಅನಂತಮೂರ್ತಿಯವರು ಹೇಳುವಂತೆ "ವಿಚಾರವೊಂದರ ದೃಷ್ಟಿಕೋನವಿಲ್ಲದೆ ಬರವಣಿಗೆ ಸಾಧ್ಯವಿಲ್ಲ. ಆದ್ದರಿಂದ ಎಲ್ಲ ಕಾದಂಬರಿಯ ಹಿನ್ನೆಲೆಯಲ್ಲಿ ಯಾವುದಾದರೊಂದು ತತ್ವವೇ ಆಗಲಿ ಕೃತಿಕಾರನ ಬುದ್ಧಿಪೂರ್ವಕ ಉದ್ದೇಶಗಳನ್ನು ಮೀರಿ ಕಲೆಯ ಉದ್ದೇಶಕ್ಕೆ ಅಡಿಯಾಳಾಗಿ ಕೆಲಸ ಮಾಡಬೇಕು. ಇಲ್ಲದಿದ್ದಲ್ಲಿ ಕಾದಂಬರಿಯು ಒಂದು ಥೀಸಿಸ್ ಆಗಿ ಬಿಡುತ್ತದೆ."[೪] ಈ ಮಾತನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಬಹುಶಃ ಕನ್ನಡ ಕಾದಂಬರಿ ಪ್ರಪಂಚದಲ್ಲಿ ಮೊಟ್ಟಮೊದಲ ಬಾರಿಗೆ ತತ್ವಶಾಸ್ತ್ರಕ್ಕೂ ಮತ್ತು ಕಾದಂಬರಿಯ ರಚನೆಗೂ ಪರಸ್ಪರ ಪೂರಕ ಸಂಬಂಧವನ್ನು ಕಲ್ಪಿಸಿದ ಕಾದಂಬರಿಕಾರರಾದ ಎಸ್.ಎಲ್.ಭೈರಪ್ಪ ಅವರು ತಮ್ಮ ಎಲ್ಲ ಕಾದಂಬರಿಗಳಲ್ಲೂ ಒಂದು ತತ್ವ ಪ್ರತಿಪಾದನೆಯನ್ನು ಸಮರ್ಥವಾಗಿ ಮಾಡಿರುವುದಲ್ಲದೆ ಕೆಲವೊಮ್ಮೆ ಅವರ ಕಾದಂಬರಿಗಳು 'ಥೀಸಿಸ್' ಆಗುವ ಅಪಾಯದಿಂದಲೂ ಮುಕ್ತವಾಗಿಲ್ಲ. ಆದರೆ ಇವರ 'ಗೃಹಭಂಗ' ಕಾದಂಬರಿ ಮಾತ್ರ ಇದಕ್ಕೆ ಅಪವಾದದಂತಿದೆ.

ಎಸ್.ಎಲ್.ಭೈರಪ್ಪನವರ ಪ್ರಕಟಿತ ೨೦ ಕಾದಂಬರಿಗಳನ್ನು ಈ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ. ಅವರ ಕಾದಂಬರಿಗಳು ಕನ್ನಡ ಕಾದಂಬರಿ ಕ್ಷೇತ್ರಕ್ಕೆ ವಿಶಿಷ್ಟ ಕೊಡುಗೆಗಳಾಗಿವೆ, ವಸ್ತು ವೈವಿಧ್ಯತೆ, ವಿಭಿನ್ನ ಬಗೆಯ ಪಾತ್ರಚಿತ್ರಣ ಜೀವನ

---

[೩] ಭೈರಪ್ಪನವರ ಸಂದರ್ಶನದಲ್ಲಿ ಅವರಾಡಿದ ಮಾತು.

[೪] ಪ್ರಜ್ಞೆ ಮತ್ತು ಪರಿಸರ ಪುಟ ೨೧. ಅನಂತಮೂರ್ತಿ ಯು.ಆರ್.

ದರ್ಶನ ಮತ್ತು ಕಲಾ ನೈಪುಣ್ಯತೆಗಳಿಂದ ಅವರ ಕಾದಂಬರಿಗಳು ಮಹತ್ವದ ಕೃತಿಗಳಾಗಿ ಪ್ರಸಿದ್ಧಿ ಪಡೆದಿದೆ. ಪರಂಪರೆ ಮತ್ತು ಆಧುನಿಕತೆಗಳ ನಡುವೆ ಏರ್ಪಡುವ ಸಂಘರ್ಷ, ವಿವಿಧ ಸಂಸ್ಕೃತಿಗಳು ಒಂದೆಡೆ ಬೆರೆತಾಗ ಉಂಟಾಗುವ ಸಂಘರ್ಷ, ಆದರ್ಶ ಮತ್ತು ವಾಸ್ತವಗಳ ನಡುವಿನ ತಿಕ್ಕಾಟ, ಜಾತಿ ಮತ್ತು ಮತಗಳ ನಡುವೆ ತಲೆದೋರುವ ಸಂಘರ್ಷಗಳು ಅವರ ಕಾದಂಬರಿಗಳ ಕೇಂದ್ರ ಪ್ರಜ್ಞೆಗಳಾಗಿವೆ. ಈ ತಾತ್ವಿಕ ದೃಷ್ಟಿಯೊಂದಿಗೆ ನೈಜ ಜೀವನದ ಪ್ರೀತಿ, ಪ್ರೇಮಗಳು, ಕಾಮ, ದಾಂಪತ್ಯ, ವಾತ್ಸಲ್ಯ, ಅಂತರ್‌ಜಾತಿಯ ವಿವಾಹ, ಪುನರ್ಜನ್ಮದಂತಹ ವಸ್ತು ವಿಷಯಗಳು ಭೈರಪ್ಪನವರ ಕಾದಂಬರಿಗಳಲ್ಲಿ ಪ್ರಧಾನವಾಗಿ ಚಿತ್ರಣಗೊಂಡಿವೆ.

ಭೈರಪ್ಪನವರು ಸಾಂಪ್ರದಾಯಿಕ ಜೀವನ ಮೌಲ್ಯಗಳ ಬಗೆಗೆ ಹೆಚ್ಚಿನ ಶ್ರದ್ಧೆಯಿರಿಸಿಕೊಂಡಿದ್ದಾರೆಂಬ ಕಾರಣಕ್ಕೆ ಅವರ ಕಾದಂಬರಿಗಳ ಕುರಿತು ಮೆಚ್ಚುಗೆ ಮತ್ತು ಟೀಕೆಗಳು ಕೂಡಿಯೇ ಬಂದಿವೆ. ಈ ಕುರಿತ ಬಗೆ ಬಗೆಯ ವಿಮರ್ಶೆ ನಮ್ಮ ಕಣ್ಣೆದುರಿಗಿದ್ದರೂ ಅವರ ಬರಹಗಳ ಸ್ವರೂಪ ಅದರ ಸಾವಯವ ಸಮಗ್ರೀಕರಣ ಮುಖ್ಯವಾಗಿ ಕಥನ ಕೌಶಲ್ಯದ ದೃಷ್ಟಿಯಿಂದ ಈ ಸಂಶೋಧನಾ ಅಧ್ಯಯನವನ್ನು ನಡೆಸಲಾಯಿತು.

ಒಟ್ಟು ಅಧ್ಯಯನದ ಫಲಶೃತಿಯನ್ನು ಈ ರೀತಿಯಾಗಿ ಸಂಗ್ರಹಿಸಲಾಗಿದೆ.

೧. ಭೈರಪ್ಪನವರ ಕಾದಂಬರಿಗಳಲ್ಲಿ ವಸ್ತು ತನ್ನ ಆಕಾರವನ್ನು ತಾನೇ ರೂಪಿಸಿಕೊಳ್ಳುತ್ತಾ ಹೋಗುತ್ತದೆ.

೨. ರೂಪದ ಕಲಾತ್ಮಕ ಸಿದ್ಧಿಯನ್ನು ಭೈರಪ್ಪನವರ ಕಾದಂಬರಿಗಳಲ್ಲಿ ಕಾಣಬಹುದು.

೩. ಭೈರಪ್ಪನವರ ಕಾದಂಬರಿಗಳ ವೈಶಿಷ್ಟ್ಯವೆಂದರೆ ಅವರ ಕೃತಿಗಳ ವೈಚಾರಿಕ ಹೊರರಚನೆ ಅತೀ ದುರ್ಬಲವಾಗಿರುತ್ತದೆ. ಅವರ ಭಾವನಾತ್ಮಕ ಒಳರಚನೆ ಅತ್ಯಂತ ಪ್ರಭಾವಶಾಲಿಯಾಗಿರುತ್ತದೆ.

೪. 'ಜಲಪಾತ'ದಲ್ಲಿ ಪ್ರತೀಕಗಳೇ ಕಥಾಹಂದರವನ್ನು ನಿರ್ಮಿಸುವ ಜಾಣ್ಮೆಯನ್ನು ಕಾದಂಬರಿಕಾರರು ತೋರಿದ್ದಾರೆ.

೫. 'ಗೃಹಭಂಗ'ದಲ್ಲಿ ಕೇಂದ್ರ ಪಾತ್ರವೊಂದು 'ಕಥನಶಿಲ್ಪ'ವನ್ನು ಕಟ್ಟುತ್ತಾ ಹೋಗುತ್ತದೆ.

೬. ಕಾದಂಬರಿ ಕೃತಿಯ 'ಕಥನ'ವನ್ನು ಕಟ್ಟುವಲ್ಲಿ, 'ಶಿಲ್ಪ'ವನ್ನು ಕೆತ್ತುವಲ್ಲಿ ಭೈರಪ್ಪನವರು ತೋರಿರುವ ನಾಜೂಕುತನವನ್ನು, ಕುಶಲತೆಯನ್ನು ಗುರುತಿಸಲಾಗಿದೆ.

೭. ಭೈರಪ್ಪನವರ ಕಾದಂಬರಿಗಳಲ್ಲಿ ಪ್ರಕೃತಿ ಸೌಂದರ್ಯವಾಗಬಹುದು ಅಥವಾ ರುದ್ರ ರಮಣೀಯತೆಯಾಗಬಹುದು ಕಥಾನಕದ ಒಂದು ಭಾಗವಾಗಿ, ಕಥಾನಕದೊಳಗಿನ ಪಾತ್ರದ ಅನುಭೂತಿಯಂತೆ ಕಥೆಯ ಒಟ್ಟು 'ಬಂಧ'ದೊಳಗೆ ಸೇರಿಕೊಂಡು ಬಿಡುವ 'ಕಥನಶಿಲ್ಪ'ದ ಕಲೆಗಾರಿಕೆಯನ್ನು ಪರಿಗಣಿಸಲಾಗಿದೆ.

೮. ಭೈರಪ್ಪನವರ ಕಾದಂಬರಿಗಳಲ್ಲಿ ಅನೇಕ ಮುಖ್ಯ ಪಾತ್ರಗಳು ಬಾಲ್ಯದಲ್ಲಿಯೇ ತಾಯಿಯ ಮಮತೆಯಿಂದ ವಂಚಿತರಾದ ಪಾತ್ರಗಳಾಗಿ ಸೃಷ್ಟಿಗೊಂಡಿವೆ.

೯. ಭೈರಪ್ಪನವರ ಕಾದಂಬರಿಗಳಲ್ಲಿ ಸೃಷ್ಟಿಗೊಂಡ ಪಾತ್ರವು ಪಲಾಯನವಾದಿ ಪಾತ್ರಗಳಾಗಿ ಕಂಡುಬರುವುದಿಲ್ಲ. ಮನುಷ್ಯನ ದುಃಸ್ಥಿತಿಗೆ ಸಂಪೂರ್ಣವಾಗಿ

ಸಮಾಜವನ್ನು ಹೋಣೆಮಾಡುವುದಿಲ್ಲ. 'ಗೃಹಭಂಗ'ದ ಚನ್ನಿಗರಾಯನಂತಹ ಹೋಣೆಗೇಡಿಯೂ ಸಮಾಜವನ್ನು ದೂರುವುದಿಲ್ಲ.

೧೦. 'ಪರ್ವ'ದ ನಂತರದ ಕಾದಂಬರಿಗಳಲ್ಲಿ ಸ್ತ್ರೀ ಮತ್ತು ಪುರುಷ ಪಾತ್ರಗಳು ಹೆಚ್ಚು ಹೆಚ್ಚು ಸಂಕೀರ್ಣಗೊಂಡಂತೆ ಚಿತ್ರತಿಗೊಳ್ಳುತ್ತವೆ.

೧೧. ಸ್ತ್ರೀ ಪಾತ್ರಗಳ ಚಿತ್ರಣದಲ್ಲಿ ಹೆಣ್ಣಿನ ಮನಸ್ಸಿನಾಳದ ಅಂತರಂಗದ ಆಲೋಚನೆಗಳನ್ನು ಕಂಡು ಸಾಕ್ಷಾತ್ಕರಿಸಿಕೊಳ್ಳುವಂತಹ ಅದ್ಭುತ ಒಳನೋಟವೊಂದು ಲೇಖಕರ ಕೈವಶವಾಗಿದೆ.

೧೨. ಭೈರಪ್ಪನವರ ಕಾದಂಬರಿಗಳಲ್ಲಿ ಸೃಷ್ಟಿಗೊಂಡ ಪಾತ್ರಗಳು ಶಿಕ್ಷಿತರಿರಲಿ-ಅಶಿಕ್ಷಿತರಿರಲಿ, ಸಂಪ್ರದಾಯಸ್ಥರಿರಲಿ-ಸಂಪ್ರದಾಯಗಳಿಂದ ಸಿಡಿದು ಬಂದವರಿರಲಿ ಎಲ್ಲರೂ ತಮ್ಮದೇ ಆದ ರೀತಿಯಲ್ಲಿ ತಮ್ಮ ತಮ್ಮ ನೆಲೆಗಳನ್ನು ಕಂಡುಕೊಂಡು ಬಿಡುತ್ತಾರೆ. ಆ ನೆಲೆ ನೈತಿಕ ಬದ್ಧತೆಯನ್ನೊಳಗೊಂಡಿರಬಹುದು, ಸಾಮಾಜಿಕವಾಗಿ ಅನೈತಿಕ ಎನಿಸಬಹುದು, ಯಾವುದೊಂದು ಬದ್ಧತೆಯೂ ಇರದಿರಬಹುದು, ಸಾವು ಆತ್ಮಹತ್ಯೆ ಏನಾದರೂ ಆಗಬಹುದು ಅದರ ಪರಿವೇ ಪಾತ್ರಗಳಿಗಿಲ್ಲ. ಎಂಥದೇ ನೆಲದಲ್ಲಿಯೂ ಇವು ದೃಢ ಹೆಜ್ಜೆ ಇಡುವ ಪಾತ್ರಗಳು. ಅತ್ಯಂತ ದುರ್ಬಲಯೆನಿಸುವ ಪಾತ್ರಗಳು ಇವರ ಕಾದಂಬರಿಯ 'ಕಥನಶಿಲ್ಪ'ದಲ್ಲಿ ಗಟ್ಟಿಯಾಗಿ ಬಿಡುತ್ತವೆ.

೧೩. ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಮೊದಲ ಬಾರಿಗೆ ತತ್ವಶಾಸ್ತ್ರಕ್ಕೂ ಮತ್ತು ಕಾದಂಬರಿಯ ರಚನೆಗೂ ಪರಸ್ಪರ ಪೂರಕ ಸಂಬಂಧವನ್ನು ಕಲ್ಪಿಸಿದವರು.

೧೪. ಭೈರಪ್ಪನವರ ಕಾದಂಬರಿಗಳಲ್ಲಿ ವಸ್ತುವಿನ ದೃಷ್ಟಿಯಿಂದ ಜೀವನಾನುಭವದ ಸರಳೀಕರಣದ ಅನಿವಾರ್ಯತೆ ಕಂಡು ಬಂದರೂ, ಕಲಾತ್ಮಕತೆಯ ದೃಷ್ಟಿಯಿಂದ ಉತ್ಕೃಷ್ಟವಾದ ರಚನಾ ಕೌಶಲ್ಯ, ಶಿಲ್ಪ ಚಾತುರ್ಯ ನೋಡಲು ಸಿಗುತ್ತದೆ.

೧೫. ಭೈರಪ್ಪನವರ ಅನೇಕ ಕಾದಂಬರಿಗಳಲ್ಲಿ ಯಾವುದೇ ಒಂದು ಸಣ್ಣ ಪಾತ್ರವು ತಂತಾನೇ ಕಣ್ಮರೆಯಾಗುವುದಿಲ್ಲ. ಕಾದಂಬರಿಯ ಯಾವೊಂದು ಘಟನೆಯು ತಾನೊಂದು ಪ್ರತ್ಯೇಕ ಘಟಕವಾಗಿ ಉಳಿದು ಕಾದಂಬರಿಯ ಹೆಣಿಗೆ ಜಾಳಾಗುವುದಕ್ಕೆ ಅವಕಾಶ ಕೊಡುವುದಿಲ್ಲ ಎಂಬ ಈ ಎರಡು ಪ್ರಮುಖ ಅಂಶಗಳನ್ನು ಅವರ ಒಟ್ಟು ಕಾದಂಬರಿಯ 'ಶಿಲ್ಪ'ದ ನೆಲೆಯಲ್ಲಿ ಗುರುತಿಸಲಾಗಿದೆ. ಇದು ಭೈರಪ್ಪನವರ ಕಾದಂಬರಿಗಳ 'ಕಥನಕ್ರಿಯೆ' ಹಾಗು ಪಾತ್ರ ಸೃಷ್ಟಿಯ 'ಕಥನಶಿಲ್ಪ'ದ ವಿಶೇಷತೆ.

****************

# ಅಧ್ಯಾಯ ೮

## ೮.೧. ಆಕರ ಸಾಮಗ್ರಿ-ಗ್ರಂಥಋಣ

ಅ) ಸಂಶೋಧನಾ ಅಧ್ಯಯನಕ್ಕೆ ಒಳಪಟ್ಟ ಭೈರಪ್ಪನವರ ಕಾದಂಬರಿಗಳು.

ಆ) ಭೈರಪ್ಪನವರ ಇತರ ಸಾಹಿತ್ಯಿಕ ಕೃತಿಗಳು.

ಇ) ಭೈರಪ್ಪನವರ ಆತ್ಮ ವೃತ್ತಾಂತ.

ಈ) ಭೈರಪ್ಪನವರ ಇತರ ಕಾದಂಬರಿಗಳು.

ಉ) ಭೈರಪ್ಪನವರ ಕೃತಿಗಳನ್ನು ಕುರಿತ ವಿಮರ್ಶಾ ಗ್ರಂಥಗಳು.

ಊ) ಭೈರಪ್ಪನವರನ್ನು ಕುರಿತ ಸಂಶೋಧನಾ ಅಧ್ಯಯನ ಗ್ರಂಥ-ಪ್ರಬಂಧಗಳು.

ಋ) ಭೈರಪ್ಪನವರ ಕೃತಿಗಳ ಕುರಿತ ವಿಮರ್ಶಾ ಲೇಖನಗಳು.

## ೮.೨.ಪೂರಕ ಪರಾಮರ್ಶನ ಗ್ರಂಥಋಣ

ಅ) ವಿಮರ್ಶನ ಗ್ರಂಥಗಳ-ಲೇಖನಗಳ ಅವಲೋಕನ.

ಆ) ಪೂರಕ ಕಾದಂಬರಿಗಳ ಅವಲೋಕನ.

ಇ) ಪರಾಮರ್ಶನ ಆಂಗ್ಲ ಗ್ರಂಥಗಳು- ಲೇಖನಗಳು.

ಈ) ಅಧ್ಯಯನ ಪೂರಕ ಸಂದರ್ಶನ.

ಉ) ಸಂದರ್ಶಿಸಿದ ಗ್ರಂಥಾಲಯಗಳು.

ಊ) ನಿಯತಕಾಲಿಕಗಳು.

*************

## ೮.೧ ಆಕರ ಸಾಮಗ್ರಿ -ಗ್ರಂಥಋಣ.

### (ಅ) ಸಂಶೋಧನಾ ಅಧ್ಯಯನಕ್ಕೆ ಒಳಪಟ್ಟ ಭೈರಪ್ಪನವರ ಕಾದಂಬರಿಗಳು.


೧. 'ಧರ್ಮಶ್ರೀ' – ಸಾಹಿತ್ಯ ಭಂಡಾರ, ಬೆಂಗಳೂರು ೧೯೬೧.

೨. 'ದೂರಸರಿದರು' – ಸಾಹಿತ್ಯ ಭಂಡಾರ, ಬೆಂಗಳೂರು ೧೯೬೨.

೩. 'ಮತದಾನ' – ಸಾಹಿತ್ಯ ಭಂಡಾರ, ಬೆಂಗಳೂರು ೧೯೬೫.

೪. 'ವಂಶವೃಕ್ಷ' – ಸಾಹಿತ್ಯ ಭಂಡಾರ, ಬೆಂಗಳೂರು ೧೯೬೭

೫. 'ಜಲಪಾತ' – ಸಾಹಿತ್ಯ ಭಂಡಾರ, ಬೆಂಗಳೂರು ೧೯೬೭

೬. 'ನಾಯಿನೆರಳು'– ಸಾಹಿತ್ಯ ಭಂಡಾರ, ಬೆಂಗಳೂರು ೧೯೬೮.

೭. 'ತಬ್ಬಲಿಯು ನೀನಾದೆ ಮಗನೆ'– ಸಾಹಿತ್ಯ ಭಂಡಾರ, ಬೆಂಗಳೂರು ೧೯೬೮.

೮. 'ಗೃಹಭಂಗ'– ಸಾಹಿತ್ಯ ಭಂಡಾರ, ಬೆಂಗಳೂರು ೧೯೭೦.

೯. 'ನಿರಾಕರಣ'– ಸಾಹಿತ್ಯ ಭಂಡಾರ, ಬೆಂಗಳೂರು ೧೯೭೧.

೧೦. 'ಗ್ರಹಣ'– ಸಾಹಿತ್ಯ ಭಂಡಾರ, ಬೆಂಗಳೂರು ೧೯೭೨.

೧೧. 'ದಾಟು'– ಸಾಹಿತ್ಯ ಭಂಡಾರ, ಬೆಂಗಳೂರು ೧೯೭೩.

೧೨. 'ಅನ್ವೇಷಣೆ'– ಸಾಹಿತ್ಯ ಭಂಡಾರ, ಬೆಂಗಳೂರು ೧೯೭೬

೧೩. 'ಪರ್ವ'– ಸಾಹಿತ್ಯ ಭಂಡಾರ, ಬೆಂಗಳೂರು ೧೯೭೯.

೧೪. 'ನೆಲೆ'– ಸಾಹಿತ್ಯ ಭಂಡಾರ, ಬೆಂಗಳೂರು ೧೯೮೩.

೧೫. 'ಸಾಕ್ಷಿ'– ಸಾಹಿತ್ಯ ಭಂಡಾರ, ಬೆಂಗಳೂರು ೧೯೮೬

೧೬. 'ಅಂಚು'– ಸಾಹಿತ್ಯ ಭಂಡಾರ, ಬೆಂಗಳೂರು ೧೯೯೦.

೧೭. 'ತಂತು'– ಸಾಹಿತ್ಯ ಭಂಡಾರ, ಬೆಂಗಳೂರು ೧೯೯೩.

೧೮. 'ಸಾರ್ಥ'– ಸಾಹಿತ್ಯ ಭಂಡಾರ, ಬೆಂಗಳೂರು ೧೯೯೮.

೧೯. 'ಮಂದ್ರ'– ಸಾಹಿತ್ಯ ಭಂಡಾರ, ಬೆಂಗಳೂರು ೨೦೦೨.

೨೦. 'ಆವರಣ'– ಸಾಹಿತ್ಯ ಭಂಡಾರ, ಬೆಂಗಳೂರು ೨೦೦೭

## (ಆ). ಭೈರಪ್ಪನವರ ಇತರ ಸಾಹಿತ್ಯಿಕ ಕೃತಿಗಳು.


೧. 'ಸತ್ಯ ಮತ್ತು ಸೌಂದರ್ಯ'- ಸಾಹಿತ್ಯ ಭಂಡಾರ ಬೆಂಗಳೂರು ೧೯೭೦.

೨. 'ಸಾಹಿತ್ಯ ಮತ್ತು ಪ್ರತೀಕ'- ಸಾಹಿತ್ಯ ಭಂಡಾರ ಬೆಂಗಳೂರು ೧೯೭೮.

೩. 'ಕಥೆ ಮತ್ತು ಕಥಾ ವಸ್ತು'- ಸಾಹಿತ್ಯ ಭಂಡಾರ ಬೆಂಗಳೂರು ೨೦೦೩.

೪. 'ನಾನೇಕೆ ಬರೆಯುತ್ತೇನೆ?'-ಸಾಹಿತ್ಯ ಭಂಡಾರ ಬೆಂಗಳೂರು ೧೯೮೯.


## (ಇ). ಭೈರಪ್ಪನವರ ಆತ್ಮ ವೃತ್ತಾಂತ.


'ಭಿತ್ತಿ'- ಸಾಹಿತ್ಯ ಭಂಡಾರ ಬೆಂಗಳೂರು ೧೯೯೭


## (ಈ) ಭೈರಪ್ಪನವರ ಇತರ ಕಾದಂಬರಿಗಳು.


೧. 'ಬೆಳಕು ಮೂಡಿತು'-ಸಾಹಿತ್ಯ ಭಂಡಾರ ಬೆಂಗಳೂರು ೧೯೫೯.

೨. 'ಭೀಮಕಾಯ'-ಸಾಹಿತ್ಯ ಭಂಡಾರ ಬೆಂಗಳೂರು ೧೯೫೮.

೩. 'ಗತಜನ್ಮ'(ನೀಳ್ಗತೆ)- ಸಾಹಿತ್ಯ ಭಂಡಾರ ಬೆಂಗಳೂರು ೧೯೫೫.


## (ಉ) ಎಸ್.ಎಲ್.ಭೈರಪ್ಪ ಮತ್ತು ಅವರ ಕೃತಿಗಳನ್ನು ಕುರಿತ ಗ್ರಂಥಗಳು.


೧. ಅಜಕ್ಕಳ ಗಿರೀಶ್ ಭಟ್. :'ಬುದ್ಧಿ ಜೀವಿ ವರ್ಸಸ್ ಬೌದ್ಧಿಕ ಸ್ವಾತಂತ್ರ್ಯ'. ಪ್ರಕಾಶನ ಚಿಂತನ ಬಯಲು. ಬಂಟ್ವಾಳ ೨೦೦೭.

೨. ಕುಲಕರ್ಣಿ ಮಾಧವ (ಸಂ) ಮತ್ತು ಗೋವಿಂದರಾಜ. :'ಸಹಸ್ಪಂದನ' ಸಾಹಿತ್ಯ ಭಂಡಾರ. ಬೆಂಗಳೂರು. ೧೯೭೮.

೩. ಕೊಂಡಜ್ಜಿ ಕೆ.ವೆಂಕಟೇಶ (ಸಂ). :'ಸಾಮಾನ್ಯ ಜ್ಞಾನ ಭೈರಪ್ಪ ಅಭಿನಂದನಾ ಸಂಚಿಕೆ'. ಕೊಂಡಜ್ಜಿ ಪ್ರಕಾಶನ. ಬೆಂಗಳೂರು. ೧೯೯೩.

೪. ಗೌರಿ ಲಂಕೇಶ್ (ಸಂ). :'ಆವರಣ' ಎಂಬ ವಿ-ಕೃತಿ. ಲಂಕೇಶ್ ಪ್ರಕಾಶನ. ಬೆಂಗಳೂರು ೨೦೦೭

೫. ಚಂದ್ರಶೇಖರ್ ಬಿ.ಎಸ್.(ಸಂ). :'ಆವರಣ ಮಾಧ್ಯಮ ಮಂಥನ' ಸಾಹಿತ್ಯ ಭಂಡಾರ. ಬೆಂಗಳೂರು ೨೦೦೯.

೬. ತೋರಗಣ ಗಟ್ಟಿ ಲೀಲಾವತಿ. :'ಭೈರಪ್ಪನವರ ಕಾದಂಬರಿಗಳು'. ಸಿರಿಗನ್ನಡ ಪ್ರಕಾಶನ. ಧಾರವಾಡ ೧೯೭೭

೭. ನರಸಿಂಹಮೂರ್ತಿಎಚ್.ವಿ.(ಸಂ) ಪ್ರೊ. ಪಾರ್ವತಿ ಐತಾಳ. :'ಭೈರಪ್ಪನವರ ಕಾದಂಬರಿಗಳು ಒಂದು ಅಧ್ಯಯನ'. ಪ್ರಕಾಶಕರು. ಭಂಡಾರ್‌ಕಾರ್ಸ್ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜು, ಕುಂದಾಪುರ ೨೦೦೧.

೮. ನಾಗರಾಜ್ ನೀರಗುಂದ. :'ಎಸ್.ಎಲ್.ಭೈರಪ್ಪ ಬದುಕು ಬರಹ'. ಪರಿಮಳ ಮುದ್ರಣಾಲಯ. ಬೆಂಗಳೂರು ೧೯೯೯.

೯. ನಾಡಿಗ್ ಸುಮತೀಂದ್ರ (ಸಂ). :'ಎಸ್.ಎಲ್.ಭೈರಪ್ಪ ಅವರ ಕೃತಿಗಳ

ವಿಮರ್ಶೆ'. ಸುಂದರ ಪ್ರಕಾಶನ. ಬೆಂಗಳೂರು ೨೦೦೨.

೧೦. ಪ್ರಧಾನ್ ಗುರುದತ್ತ (ಸಂ). ದೇಶ ಕುಲಕರ್ಣಿ. :'ಎಸ್.ಎಲ್.ಭೈರಪ್ಪ' ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್ ೨೦೦೯.

೧೧. ಪ್ರಭಾವತಿ ಎಸ್.ಆರ್. :'ಚಿತ್ತಭಿತ್ತಿ' ಸಾಹಿತ್ಯ ಭಂಡಾರ. ಬೆಂಗಳೂರು. ೨೦೦೬.

೧೨. ಮಾನಸ :'ನಮ್ಮ ಹೆಮ್ಮೆಯ ಸಾಹಿತಿ ಡಾ.ಎಸ್.ಎಲ್.ಭೈರಪ್ಪ'. ತನುಮನು ಪ್ರಕಾಶನ. ಮೈಸೂರು ೧೯೯೯.

೧೩. ವಿಜಯಾ (ಸಂ). :'ಪರ್ವ'– ಒಂದು ಸಮೀಕ್ಷೆ ಸಾಹಿತ್ಯ ಭಂಡಾರ. ೧೯೮೩.

೧೪. ವಿಜಯಶ್ರೀ (ಸಂ). :'ಮಂದ್ರ ಮಂಥನ' ಸಾಹಿತ್ಯ ಭಂಡಾರ. ಬೆಂಗಳೂರು. ೨೦೦೫.

೧೫. ವೆಂಕಟರಾಮಯ್ಯ ಎಂ.ಎಸ್. :'ಮಂದ್ರಾವಲೋಕನ' ಸಾಹಿತ್ಯ ಭಂಡಾರ. ಬೆಂಗಳೂರು. ೨೦೦೩.

೧೬. ಶಾಂತಕುಮಾರಿ ಎಲ್.ವಿ. :'ಯುಗಸಾಕ್ಷಿ' ಸಾಹಿತ್ಯ ಭಂಡಾರ. ಬೆಂಗಳೂರು ೨೦೦೯.

೧೭. ಶ್ರೀನಿವಾಸ ಹಾವನೂರ (ಸಂ). :'ಡಾ.ಎಸ್.ಎಲ್.ಭೈರಪ್ಪ ಅವರ ಕಾದಂ-ಕಥನಗಳು' ಪ್ರಸಾಧನ ಪ್ರಕಾಶನ. ಮಂಗಳೂರು ೧೯೯೯.

೧೮. ಶೇಷಗಿರಿರಾವ್ ಎಲ್.ಎಸ್. :'ಆವರಣದ ಅವಲೋಕನ' ಸುಂದರ ಪ್ರಕಾಶನ. ಬೆಂಗಳೂರು ೨೦೦೭.

೧೯. ಹಿರೇ ಒಡೆಯರ್ ಎ.ಸಿ. :'ಹಿಂದೂ ಧರ್ಮ ಮತ್ತು ಎಸ್.ಎಲ್.ಭೈರಪ್ಪ'. ಅಭಿರುಚಿ ಪ್ರಕಾಶನ. ಮೈಸೂರು ೨೦೦೭.

## (ಊ) ಭೈರಪ್ಪನವರ ಕುರಿತ ಸಂಶೋಧನಾ ಅಧ್ಯಯನ ಗ್ರಂಥಗಳು–ಪ್ರಬಂಧಗಳು.

೧. ದಿಂಡೂರ ಆರ್.ಎಸ್. :'ಭೈರಪ್ಪನವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು'. ಕರ್ನಾಟಕ ವಿಶ್ವವಿದ್ಯಾನಿಲಯ. ಪ್ರಮಿಳ ಪ್ರಕಾಶನ. ಬಿಜಾಪುರ. ೨೦೦೬

೨. ತೋರಣಗಟ್ಟಿ ಲೀಲಾವತಿ :'ಭೈರಪ್ಪನವರ ಕಾದಂಬರಿಗಳ ಸ್ವರೂಪ'. ಕರ್ನಾಟಕ ವಿಶ್ವವಿದ್ಯಾನಿಲಯ. ವಿದ್ಯಾನಿಧಿ ಪ್ರಕಾಶನ. ಗದಗ. ೧೯೯೨.

೩. ನೀರಗುಂದ ನಾಗರಾಜ. :"ಭೈರಪ್ಪನವರ 'ಪರ್ವ' ಕಾದಂಬರಿ ಒಂದು ವಿಮರ್ಶಾತ್ಮಕ ಪರಿಶೀಲನೆ". ಬೆಂಗಳೂರು ವಿಶ್ವವಿದ್ಯಾನಿಲಯ.

೪. ಮಣಿ ಮಾಲಿನಿ. :"ದ್ರೌಪದಿ ಸಮೀಕ್ಷೆ- 'ಪರ್ವ' ಕಾದಂಬರಿಯ ದ್ರೌಪದಿಯನ್ನು ಒಳಗೊಂಡಂತೆ". ಮುಂಬಯಿ ವಿಶ್ವವಿದ್ಯಾನಿಲಯ.

೫. ಮಾಲತಿ ಕೆ. :'ಪರ್ವ' ಒಂದು ಸಮೀಕ್ಷೆಯ ಕುರಿತಂತೆ. ಬೆಂಗಳೂರು ವಿಶ್ವವಿದ್ಯಾನಿಲಯ.

೬. ವತ್ಸಲಾದೇವಿ ಸಿ.ವಿ.. :'ಭೈರಪ್ಪನವರ ಕಾದಂಬರಿಗಳು'-ಒಂದು ಅಧ್ಯಯನ. ಬೆಂಗಳೂರು ವಿಶ್ವವಿದ್ಯಾನಿಲಯ.

## ಋ) ಭೈರಪ್ಪನವರ ಕೃತಿಗಳ ಕುರಿತ ವಿಮರ್ಶಾ ಲೇಖನಗಳು.

೧. ಗೋವಿಂದರಾವ್ ಜಿ.ಕೆ.-"ಸ್ವಯಂ ನಿರ್ಮಿತ 'ಆವರಣ'ದೊಳಗೆ ಜೀವಾವಧಿ ಬಂಧಿ ಭೈರಪ್ಪ". 'ಆವರಣ' ಎಂಬ ವಿ-ಕೃತಿ. (ಸಂ) ಗೌರಿ ಲಂಕೇಶ್. ಲಂಕೇಶ್ ಪ್ರಕಾಶನ. ಬೆಂಗಳೂರು ೨೦೦೭

೨. ತೋರಣಗಟ್ಟಿ ಲೀಲಾವತಿ-"ಭೈರಪ್ಪನವರ ಬರವಣಿಗೆ – ಒಂದು ಹಕ್ಕಿನೋಟ". 'ಭೈರಪ್ಪನವರ ಕಾದಂಬರಿಗಳು'. ಸಿರಿಗನ್ನಡ ಪ್ರಕಾಶನ. ಧಾರವಾಡ ೧೯೭೭.

೩. ತೋರಣಗಟ್ಟಿ ಲೀಲಾವತಿ-"ಭೈರಪ್ಪನವರ ಕಾದಂಬರಿಗಳಲ್ಲಿ ವೈಚಾರಿಕತೆ".- 'ಭೈರಪ್ಪನವರ ಕಾದಂಬರಿಗಳು'. ಸಿರಿಗನ್ನಡ ಪ್ರಕಾಶನ. ಧಾರವಾಡ ೧೯೭೭.

೪. ತೋರಣಗಟ್ಟಿ ಲೀಲಾವತಿ–"ಭೈರಪ್ಪನವರ ಕಾದಂಬರಿಗಳಲ್ಲಿ ತಾಯಿ".– 'ಭೈರಪ್ಪನವರ ಕಾದಂಬರಿಗಳು'. ಸಿರಿಗನ್ನಡ ಪ್ರಕಾಶನ. ಧಾರವಾಡ ೧೯೭೭.

೫. ಭೈರಪ್ಪ ಎಸ್.ಎಲ್.–'ಅಧ್ಯಕ್ಷ ಭಾಷಣ', (ಪ್ರಸಂ.) ಎಂ.ಮೋಹನ ಆಳ್ವ 'ಕನ್ನಡ ಮನಸ್ಸು': 'ಬೌದ್ಧಿಕ ಸ್ವಾತಂತ್ರ್ಯ'. ಆಳ್ವಾಸ್ ಪ್ರಕಾಶನ. ಮೂಡಬಿದ್ರೆ, ೨೦೦೬.

೬. ಮಣಿಪ್ರಕಾಶ್ ಜಿ.– "ಎಸ್.ಎಲ್.ಭೈರಪ್ಪನವರ ಬರಹ ದೃಷ್ಟಿ– ಪಾತ್ರ ಹಾಗೂ ನೈಜತೆಯ ತತ್ತ್ವ". 'ಭೈರಪ್ಪಾಭಿನಂದನ'. (ಸಂ.) ಕೊಂಡಜ್ಜಿ ಕೆ ವೆಂಕಟೇಶ್. ಕೊಂಡಜ್ಜಿ ಪ್ರಕಾಶನ. ಬೆಂಗಳೂರು ೧೯೯೩.

೭. ಮಲ್ಲೇಪುರಂ ಜಿ.ವೆಂಕಟೇಶ್–"ಅಭಿವ್ಯಕ್ತಿ ಸ್ವಾತಂತ್ರ್ಯದ ಪರಿಕಲ್ಪನೆ, ಅಪಕಲ್ಪನೆ". (ಪ್ರಸಂ.) ಎಂ.ಮೋಹನ ಆಳ್ವ ಕನ್ನಡ ಮನಸ್ಸು: ಬೌದ್ಧಿಕ ಸ್ವಾತಂತ್ರ್ಯ, ಆಳ್ವಾಸ್ ಪ್ರಕಾಶನ. ಮೂಡಬಿದ್ರೆ ೨೦೦೬.

೮. ರಘುನಾಥ ರಾವ್ ಡಿ.–"ಬದ್ಧ ದೃಷ್ಟಿಕೋನ:ಭೈರಪ್ಪನವರ ಕಾದಂಬರಿಗಳು, ಒಂದು ಟಿಪ್ಪಣಿ". 'ಸಹಸ್ಪಂದನ'. (ಸಂ) ಮಾಧವ ಕುಲಕರ್ಣಿ ಮತ್ತು ಗೋವಿಂದರಾಜ. ಸಾಹಿತ್ಯ ಭಂಡಾರ. ಬೆಂಗಳೂರು ೧೯೭೮.

೯. ರಾಮಚಂದ್ರನ್ ಸಿ.ಎನ್.–"ಭೈರಪ್ಪನವರ 'ಅಂಚು',ಸ್ತ್ರೀ ಪುರುಷ ಸಂಬಂಧ ಇತ್ಯಾದಿ". 'ಭೈರಪ್ಪಾಭಿನಂದನ'. (ಸಂ) ಕೊಂಡಜ್ಜಿ ಕೆ. ವೆಂಕಟೇಶ್. ಕೊಂಡಜ್ಜಿ ಪ್ರಕಾಶನ. ಬೆಂಗಳೂರು ೧೯೯೩.

೧೦. ರಾಮಚಂದ್ರನ್ ಸಿ.ಎನ್.–"ಭೈರಪ್ಪನವರ ಕಾದಂಬರಿಗಳು ಮತ್ತು ಜನಪ್ರಿಯತೆ". 'ಆಶಯ–ಆಕೃತಿ'. ಅಭಿನವ ಪ್ರಕಾಶನ. ಬೆಂಗಳೂರು ೧೯೯೫.

೧೧. ಲಕ್ಷ್ಮೀ ದೇವಿ ಎಂ.ಆರ್.-"ಸತ್ಯಸಂಗತಿಗಳ ದಿಟ್ಟ ನಿರೂಪಣೆಯ ಕಾದಂಬರಿ". 'ಆವರಣ'ದ ಅವಲೋಕನ. (ಸಂ) ಪ್ರೊ.ಎಲ್.ಎಸ್.ಶೇಷಗಿರಿ ರಾವ್ ಸುಂದರ ಪ್ರಕಾಶನ. ಬೆಂಗಳೂರು ೨೦೦೭

೧೨. ಲಲಿತ ಯು.ಆರ್. -"ಭೈರಪ್ಪನವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳು". 'ಸಹಸ್ಪಂದನ'. (ಸಂ) ಮಾಧವ ಕುಲಕರ್ಣಿ ಮತ್ತು ಗೋವಿಂದರಾಜ. ಸಾಹಿತ್ಯ ಭಂಡಾರ. ಬೆಂಗಳೂರು ೧೯೭೮.

೧೩. ವ್ಯಾಸರಾಯ ಬಲ್ಲಾಳ-"ಡಾ॥ ಭೈರಪ್ಪನವರ ಕಾದಂಬರಿ 'ಆವರಣ'-ಕೆಲವು ಅನಿಸಿಕೆಗಳು". 'ಆವರಣ'ದ ಅವಲೋಕನ. (ಸಂ) ಪ್ರೊ.ಎಲ್.ಎಸ್.ಶೇಷಗಿರಿ ರಾವ್ ಸುಂದರ ಪ್ರಕಾಶನ. ಬೆಂಗಳೂರು ೨೦೦೭

೧೪. ವಿದ್ಯಾಶಂಕರ್ ಎಸ್.-"ದಾಟು: ಒಂದು ಸಮೀಕ್ಷೆ". 'ಸಹಸ್ಪಂದನ'. (ಸಂ) ಮಾಧವ ಕುಲಕರ್ಣಿ ಮತ್ತು ಗೋವಿಂದರಾಜ. ಸಾಹಿತ್ಯ ಭಂಡಾರ. ಬೆಂಗಳೂರು ೧೯೭೮.

೧೫. ಶಿವರಾಮು ಕಾಡನಕುಪ್ಪೆ-"ನಾಯಿ ನೆರಳು: ಒಂದು ವಿವೇಚನೆ". 'ಸಹಸ್ಪಂದನ'. (ಸಂ) ಮಾಧವ ಕುಲಕರ್ಣಿ ಮತ್ತು ಗೋವಿಂದರಾಜ. ಸಾಹಿತ್ಯ ಭಂಡಾರ. ಬೆಂಗಳೂರು ೧೯೭೮.

****************

# ೮.೨.ಪೂರಕ ಪರಾಮರ್ಶನ ಗ್ರಂಥಋಣ

## (ಅ) ವಿಮರ್ಶನ ಗ್ರಂಥಗಳ-ಲೇಖನಗಳ ಅವಲೋಕನ.

೧. ಅಮೂರ್ ಜಿ.ಎಸ್. :'ಕನ್ನಡ ಕಾದಂಬರಿಯ ಬೆಳವಣಿಗೆ'. ಪ್ರಸಾರಾಂಗ. ಬೆಂಗಳೂರು ವಿಶ್ವವಿದ್ಯಾನಿಲಯ ೧೯೮೩.

೨. ಅಮೂರ್ ಜಿ.ಎಸ್. :'ಸಮಕಾಲೀನ ಕಥೆ ಕಾದಂಬರಿ ಹೊಸ ಪ್ರಯೋಗಗಳು'. ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು ೧೯೮೬.

೩. ಅಮೂರ್ ಜಿ. ಎಸ್. :'ಆವರಣದ ಮೊದಲ ಓದು'. ಸಂಯುಕ್ತ ಕರ್ನಾಟಕ. ಫೆಬ್ರವರಿ-೧೧-೨೦೦೭.

೪. ಅಮೂರ್ ಜಿ. ಎಸ್. :'ಕನ್ನಡ ಕಥನ ಸಾಹಿತ್ಯ: ಕಾದಂಬರಿ'. ಸ್ವಪ್ನ ಬುಕ್ ಹೌಸ್. ಬೆಂಗಳೂರು ೨೦೦೬.

೫. ಅರವಿಂದ ಮಾಲಗತ್ತಿ. :'ಕಾದಂಬರಿಗಳ ವಿಮರ್ಶೆ'. ಪ್ರಸಾರಾಂಗ. ಮೈಸೂರು ವಿಶ್ವವಿದ್ಯಾನಿಲಯ. ೨೦೦೦.

೬. ಅಶೋಕ್ ಟಿ. ಪಿ. :'ಕಾರಂತರ ಕಾದಂಬರಿಗಳಲ್ಲಿ ಗಂಡು-ಹೆಣ್ಣು'. ಅಕ್ಷರ ಪ್ರಕಾಶನ. ಸಾಗರ ೧೯೮೨.

೭. ಅಶೋಕ್ ಟಿ. ಪಿ. :'ಕುವೆಂಪು ಕಾದಂಬರಿ ಎರಡು ಅಧ್ಯಯನಗಳು'. ಅಕ್ಷರ ಪ್ರಕಾಶನ. ಹೆಗ್ಗೋಡು. ಸಾಗರ ೨೦೦೪.

೮ ಆದ್ಯರಂಗಾಚಾರ್ಯ. :'ಕನ್ನಡ ಕಾದಂಬರಿ ಸಮೀಕ್ಷೆ'. ಪ್ರಜಾವಾಣಿ ಸಂಪುಟ;೧೮ ಸಂಚಿಕೆ:೧೧, ೧೯೨೭.ಪುಟ ೧-೯.

೯. ಆರ್ಕೆ. :'ಸಾಹಿತ್ಯ, ಆಶಯ ಮತ್ತು ವಿನ್ಯಾಸ'. ಸಂಕ್ರಮಣ ಪ್ರಕಾಶನ. ಧಾರವಾಡ ೧೯೮೮

೧೦. ಇರಾವತಿ ಕರ್ವೆ(ಮೂ). (ಅ)ಶಿವಪ್ರಕಾಶ್ ಎಚ್. ಎಸ್. :'ಯುಗಾಂತ'. ಓರಿಯಾಟ್ ಲಾಂಗಮನ್ ಲಿಮಿಟೆಡ್. ಬೆಂಗಳೂರು ೧೯೯೩

೧೧. ಕಲಬುರ್ಗಿ ಎಂ. ಎಂ. :'ಮಹಾಮಾರ್ಗ'. ಅಭಿನಂದನ ಗ್ರಂಥ. (ಸಂ) ಸದಾನಂದ ಕನವಳ್ಳಿ, ವೀರಣ್ಣ ರಾಜೂರ. ೧೯೯೮.

೧೨. ಕಲಬುರ್ಗಿ ಎಂ. ಎಂ. :'ಸಂಶೋಧನಾ ಶಾಸ್ತ್ರ'. ಸಪ್ನ ಬುಕ್ ಹೌಸ್. ಬೆಂಗಳೂರು ೨೦೦೦.

೧೩. ಕುರ್ತಕೋಟಿ ಕೀರ್ತಿನಾಥ. :'ಯುಗಧರ್ಮ ಹಾಗೂ ಸಾಹಿತ್ಯ ದರ್ಶನ'. ಮನೋಹರ ಗ್ರಂಥಮಾಲಾ. ಧಾರವಾಡ ೧೯೭೨.

೧೪. ಕುರ್ತಕೋಟಿ ಕೀರ್ತಿನಾಥ. :'ವಿಮರ್ಶೆಯ ವಿನಯ-ಕಾದಂಬರಿ'. ಮನೋಹರ ಗ್ರಂಥಮಾಲಾ. ಧಾರವಾಡ ೧೯೮೨.

೧೫. ಕುರ್ತಕೋಟಿ ಕೀರ್ತಿನಾಥ. :'ವಿಮರ್ಶೆಯ ವಿನಯ ಕಾದಂಬರಿ'. ಮನೋಹರ ಗ್ರಂಥಮಾಲಾ, ಧಾರವಾಡ. ೧೯೮೨.

೧೬. ಕುರ್ತಕೋಟಿ ಕೀರ್ತಿನಾಥ. :'ವಿಮರ್ಶೆಯ ವಿನಯ ಕಾದಂಬರಿ'. ಮನೋಹರ ಗ್ರಂಥಮಾಲಾ. ಧಾರವಾಡ ೧೯೯೬.

೧೭. ಕುಲಕರ್ಣಿ ಮಾದವ.(ಸಂ) ಗೋವಿಂದ ರಾಜು. :'ಸಹಸ್ಪಂದನ' ಸಾಹಿತ್ಯ ಭಂಡಾರ. ಬೆಂಗಳೂರು. ೧೯೭೮.

೧೮. ಕೃಷ್ಣಕುಮಾರ್. ಸಿ. ಪಿ. :'ಸಾಹಿತ್ಯ ಪ್ರವೇಶ'. ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ. ಬೆಂಗಳೂರು ೧೯೭೫.

೧೯. ಕೇಶವಶರ್ಮ ಕೆ. :'ರಚನೆ–ನಿರಚನೆ'. ಅಭಿನವ ಪ್ರಕಾಶನ. ಬೆಂಗಳೂರು ೨೦೦೦.

೨೦. ಗಿರಡ್ಡಿ ಗೋವಿಂದ ರಾಜ. :'ಕಾದಂಬರಿ:ವಸ್ತು ಮತ್ತು ತಂತ್ರ'–ಸ್ನೇಹ ಪ್ರಕಾಶನ. ಬೆಂಗಳೂರು ೧೯೮೭.

೨೧. ಗುಂಡಪ್ಪ ಡಿ. ವಿ. :'ಕನ್ನಡ ಕಾದಂಬರಿ ಪ್ರವರ್ತಕರು: ಎಂ.ಎಸ್.ಪುಟ್ಟಣ್ಣನವರು'. ಕನ್ನಡ ನುಡಿ, ಜೂನ್ ೧೯೭೩.

೨೨. ಚದುರಂಗ. :'ಎಸ್.ಎಲ್.ಭೈರಪ್ಪ ಕ್ರಿಯಶೀಲ ಲೇಖಕ'. 'ಭೈರಪ್ಪಾಭಿನಂದನ'.(ಸಂ) ಕೊಂಡಜ್ಜಿ ಕೆ.

ವೆಂಕಟೇಶ. ಕೊಂಡಜ್ಜಿ ಪ್ರಕಾಶನ
ಬೆಂಗಳೂರು. ೧೯೯೩.

೨೩. ಚಿದಾನಂದ ಮೂರ್ತಿ ಎಂ. :'ಸಂಶೋಧನೆ' ಡಿ.ವಿ.ಕೆ. ಮೂರ್ತಿ ಪ್ರಕಾಶಕರು. ಮೈಸೂರು. ೪.

೨೪. ಚೆನ್ನಯ್ಯ ಎಚ್. ಎಂ :'ಜಿಜ್ಞಾಸೆ'. ಸುರುಚಿ ಪ್ರಕಾಶನ. ಮೈಸೂರು ೧೯೭೪.

೨೫. ಜೋಗಿ. :'ಆವರಣ ದಾಟಿದ ಜಗಳ'. ಕನ್ನಡಪ್ರಭಾ ಪತ್ರಿಕೆ ಜೂನ್ ೩, ೨೦೦೭.

೨೬. ತಾರನಾಥ ಎನ್. ಎಸ್. :'ಶತಮಾನದ ಸಂಶೋಧನೆ'. ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು ೨೦೦೧.

೨೭. ತೋರಣಗಟ್ಟೆ ಲೀಲಾವತಿ. :'ಭೈರಪ್ಪನವರ ಕಾದಂಬರಿಗಳು' ಸಿರಿಗನ್ನಡ ಪ್ರಕಾಶನ. ಧಾರವಾಡ ೧೯೭೭.

೨೮. ನವರತ್ನ ರಾಜರಾಂ. :"ಸಾಹಿತ್ಯದ ಅದ್ಭುತಗಳು" 'ಆವರಣ' ಮತ್ತು 'ಡಾ. ವಿಂಚಿ ಕೋಡ್'– ಸಂಯುಕ್ತ ಕರ್ನಾಟಕ ಪತ್ರಿಕೆ ಮಾರ್ಚ್ ೯, ೨೦೦೭

೨೯. ನಾಗಭೂಷಣ ಸ್ವಾಮಿ ಓ.ಎಲ್. :'ವಿಮರ್ಶೆಯ ಪರಿಭಾಷೆ'. ಪರಿಸರ ಸಾಹಿತ್ಯ ಪ್ರಕಾಶನ. ಶಿವಮೊಗ್ಗ. ೧೯೮೩.

೩೦. ನಾಗರಾಜ ಡಿ. ಎಲ್. :'ಸಂಸ್ಕೃತಿ ಕಥನ'. ಕನ್ನಡ ಪುಸ್ತಕ ಪ್ರಾಧಿಕಾರ. ಬೆಂಗಳೂರು ೨೦೦೨.

೩೧. ನಾಗರಾಜ ಡಿ. ಎಲ್. :'ಸಾಹಿತ್ಯ ಕಥನ'. ಅಕ್ಷರ ಪ್ರಕಾಶನ. ಹೆಗ್ಗೋಡು. ೧೯೯೬.

೩೨. ನಾಯಕ ಜಿ. ಎಸ್. :'ವಿನಯ ವಿಮರ್ಶೆ'. ಕನ್ನಡ ಮತ್ತು ಸಂಸ್ಕೃತಿ ಇಲಾಖೆ. ಬೆಂಗಳೂರು ೧೯೯೧.

೩೩. ಪ್ರಧಾನ ಗುರುದತ್ತ(ಸಂ) ದೇಶ ಕುಲಕರ್ಣಿ. :'ಎಸ್.ಎಲ್.ಭೈರಪ್ಪ'. ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್-೨೦೦೯.

೩೪. ಬೆಳಗಲಿ ದು. ನಿಂ :'ಕನ್ನಡದಲ್ಲಿ ಕಾದಂಬರಿ ಸಾಹಿತ್ಯ'. ಕರ್ನಾಟಕ ವಿಶ್ವವಿದ್ಯಾಲಯ. ಧಾರವಾಡ ೧೯೬೫.

೩೫. ಮುಗಳಿ ರಂ. ಶ್ರೀ. :'ಕನ್ನಡ ಕಾದಂಬರಿಗಳು (೧೯೨೦-೪೫)'. ಪ್ರಬುದ್ಧ ಕರ್ನಾಟಕ ಸಂಪುಟ:೨೬, ಸಂಚಿಕೆ:೨, ೧೯೪೧, ಪುಟ ೨೯-೫೨.

೩೬. ರಾಮಚಂದ್ರ ಸಿ. ಎನ್. :'ಬಯಲು-ರೂಪ'. ಪ್ರಕಾಶಕರು ಸ್ವಪ್ನ ಬುಕ್ ಹೌಸ್. ಬೆಂಗಳೂರು ೨೦೦೬.

೩೭. ರಾಮಚಂದ್ರ ಸಿ. ಎನ್. :'ಶಿಲ್ಪ ವಿನ್ಯಾಸ'-ಸಂತ ಫಿಲೋಮಿನ ಕಾಲೇಜು, ಕನ್ನಡ ಸಂಘ. ಪುತ್ತೂರು ೧೯೮೬.

೩೮. ರಾಮಚಂದ್ರ ಸಿ. ಎನ್. :'ಆಶಯ-ಆಕೃತಿ'. ಅಭಿನವ ಪ್ರಕಾಶನ. ಬೆಂಗಳೂರು ೧೯೯೫.

೩೯. ರಾಮಚಂದ್ರ ಸಿ. ಎನ್. ;'ಸಾಹಿತ್ಯ ವಿಮರ್ಶೆ'. ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು. ೧೯೮೯.

೪೦. ರಾಮಚಂದ್ರ ಸಿ. ಎನ್. :'ಸ್ವರೂಪ'. ಕನ್ನಡ ಅಧ್ಯಯನ ವಿಭಾಗ. ಮುಂಬೈ ವಿಶ್ವವಿದ್ಯಾನಿಲಯ ಮುಂಬೈ. ೧೯೮೮.

೪೧. ಲಕ್ಷ್ಮಣ ತೆಲಂಗಾವಿ.(ಸಂ). :'ಸಂಶೋಧನ'. ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು ೧೯೯೧.

೪೨. ವಸಂತ ಕುಮಾರ್ ತಾಳ್ತಜೆ. :'ಸಂಶೋಧನಾ ರಂಗ'. ಮುಂಬೈ ವಿಶ್ವವಿದ್ಯಾನಿಲಯ. ಮುಂಬೈ. ೨೦೦೧.

೪೩. ವಿವೇಕ ರೈ. ಬಿ.ಎ (ಸಂ). :'ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು'. ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ ಮಂಗಳ ಗಂಗೋತ್ರಿ ಕೋಣಾಜೆ. ೧೯೮೬.

೪೪. ವೆಂಕಟಲಕ್ಷ್ಮೀ ವಿ.ಎನ್. :'ಐತಿಹಾಸಿಕ ಸತ್ಯ ಮತ್ತು ಸಾಹಿತ್ಯ'. ಎಸ್.ಎಲ್.ಭೈರಪ್ಪನವರೊಡನೆ ವಿಶೇಷ ಸಂದರ್ಶನ. ವಿಜಯ ಕರ್ನಾಟಕ ಪತ್ರಿಕೆ ಜನವರಿ ೨೪, ೨೦೦೬.

೪೫. ಶಂಕರ ಪಾಟೀಲ(ಸಂ). :'ಕಾದಂಬರಿ ದರ್ಶನ'. ಕೃಷ್ಣಮೂರ್ತಿ ಪುರಾಣಿಕ ಸತ್ಕಾರ ಸಮಿತಿ, ಹುಬ್ಬಳ್ಳಿ ೧೯೬೪.

೪೬. ಶಾಂತಕುಮಾರಿ. ಬಿ.ಎಸ್. :'ಯುಗಸಾಕ್ಷಿ'. ಸಾಹಿತ್ಯ ಭಂಡಾರ. ಬೆಂಗಳೂರು. ೨೦೦೯.

೪೭. ಶಾಂತಿನಾಥ ದೇಸಾಯಿ. :'ಕನ್ನಡ ಕಾದಂಬರಿ ನಡೆದು ಬಂದ ದಾರಿ'. ಪ್ರಸಾರಾಂಗ. ಕರ್ನಾಟಕ ವಿಶ್ವವಿದ್ಯಾನಿಲಯ. ಧಾರವಾಡ.

೪೮. ಶಿವರುದ್ರಪ್ಪ ಜಿ. ಎಸ್. :'ಪರಿಶೀಲನ'. ಉಷಾ ಸಾಹಿತ್ಯ ಮಾಲೆ. ಮೈಸೂರು. ೧೯೭೨.

೪೯. ಶಿವರುದ್ರಪ್ಪ ಜಿ. ಎಸ್. :''ಗತಿಬಿಂಬ'. ಸುರುಚಿ ಪ್ರಕಾಶನ. ಮೈಸೂರು ೧೯೭೪.

೫೦. ಶಿವರುದ್ರಪ್ಪ ಜಿ. ಎಸ್. :'ವಿಮರ್ಶೆಯ ದಾರಿ'. ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾನಿಲಯ. ಬೆಂಗಳೂರು ೧೯೭೮.

೫೧. ಶಿರೂರ ಬಿ.ವಿ. :'ಸಂಶೋಧನಾ ಸ್ವರೂಪ'. ಅನ್ನಪೂರ್ಣ ಪ್ರಕಾಶನ. ಹುಬ್ಬಳ್ಳಿ ೨೦೦೦.

೫೨. ಶಿವರಾಮ ಪಡಿಕ್ಕಲ್. :'ನಾಡು-ನುಡಿಯ ರೂಪಕ'. ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ ಮಂಗಳ ಗಂಗೋತ್ರಿ ಕೋಣಾಜೆ. ೨೦೦೧.

೫೩. ಶಿವಸ್ವಾಮಿ ಹೊಸ್ಕೆರೆ. :'ಸಂಶೋಧನ ಶಾಸ್ತ್ರ'. ತ.ವೆಂ. ಸ್ಮಾರಕ ಗ್ರಂಥಮಾಲೆ. ಮೈಸೂರು. ೧೯೭೯.

೫೪. ಶ್ರೀಕೃಷ್ಣ ಆಲನಹಳ್ಳಿ(ಸಂ). :'ಅವಲೋಕನ'. ಗೀತಾ ಬುಕ್ ಹೌಸ್. ಮೈಸೂರು. ೧೯೬೯.

೫೫. ಶೇಷಗಿರಿರಾವ್ ಎಲ್.ಎಸ್. :'ಹೊಸಗನ್ನಡ ಸಾಹಿತ್ಯ ಕಾದಂಬರಿ ಮತ್ತು ಸಾಮಾನ್ಯ ಮನುಷ್ಯ'. ಶಾರದಾ ಪ್ರಕಾಶನ. ಬೆಂಗಳೂರು ೧೯೯೦.

೫೬. ಸಂಗಮೇಶ ಸವದತ್ತಿ ಮಠ. :'ಸಾಹಿತ್ಯ ಸಂಶೋಧನಾ ಮಾರ್ಗ'. ರೂಪರಶ್ಮಿ ಪ್ರಕಾಶನ, ಕಲಬುರ್ಗಿ. ೧೯೯೮.

೫೭. ಸಿದ್ಧಲಿಂಗಯ್ಯ ಜಿ.ಎಸ್ ಮತ್ತು ಕೃಷ್ಣ ಎಂ.ಎಚ್. (ಸಂ) :' ಸಾಲುದೀಪಗಳು'. ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು. ೨೦೦೧.

೫೮. ಸುಮತೀಂದ್ರ ನಾಡಿಗ :'ಕಾದಂಬರಿಕಾರ–ಕವಿಯ 'ಆವರಣ'– ವಿಜಯ ಕರ್ನಾಟಕ ಫೆಬ್ರವರಿ ೧೮, ೨೦೦೬.

೫೯. ಹರಿದಾಸ ಭಟ್ ಕು.ಶಿ (ಸಂ). :'ಕಾರಂತ ಪ್ರಪಂಚ'. ಗೀತಾ ಬುಕ್ ಹೌಸ್. ಮೈಸೂರು ೧೯೬೯.

೬೦. ಹಾವನೂರ ಶ್ರೀನಿವಾಸ್. :'ಕನ್ನಡ ಪ್ರಥಮ ಸಾಮಾಜಿಕ ಕಾದಂಬರಿಯ ಹಿನ್ನಲೆ'. ಪ್ರಬುದ್ಧ ಕರ್ನಾಟಕ (ಸಂ):೫೫, ಸಂಚಿಕೆ; ೩, ೧೯೬೦.

೬೧. ಹಾವನೂರ ಶ್ರೀನಿವಾಸ್. :'ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು'. ಕಸ್ತೂರಿ ಮೇ ೧೯೨೨, ಪುಟ ೧೨೧–೧೩೦.

## ಆ) ಪೂರಕ ಕಾದಂಬರಿಗಳ ಅವಲೋಕನ.


೧. ಅ.ನ.ಕೃಷ್ಣರಾಯರು. :'ಶನಿ ಸಂತಾನ'-ಸಮಾಜ ಪುಸ್ತಕಾಲಯ, ಧಾರವಾಡ ೧೯೭೯.
'ಸಂಜೆಗತ್ತಲು'-ಸಮಾಜ ಪುಸ್ತಕಾಲಯ, ಧಾರವಾಡ ೧೯೭೯.

೨. ಅನುಪಮ ನಿರಂಜನ. :'ಹಿಮದ ಹೂವು'- ಡಿ.ವಿ.ಕೆ ಮೂರ್ತಿ, ಮೈಸೂರು ೧೯೮೨.
'ಮಾಧವಿ'- ಡಿ.ವಿ.ಕೆ ಮೂರ್ತಿ, ಮೈಸೂರು ೧೯೮೬.

೩. ಇಂದಿರಾ ಎಂ.ಕೆ.. :'ಗೆಜ್ಜೆಪೂಜೆ'-ಗೀತಾ ಪಬ್ಲಿಕೇಶನ್, ಮೈಸೂರು ೧೯೬೬

೪. ಕುವೆಂಪು :'ಕಾನೂರು ಹೆಗ್ಗಡತಿ'- ಉದಯ ರವಿ ಪ್ರಕಾಶನ, ಮೈಸೂರು ೧೯೬೦.
'ಮಲೆಗಳಲ್ಲಿ ಮದುಮಗಳು'- ಉದಯ ರವಿ ಪ್ರಕಾಶನ, ಮೈಸೂರು ೧೯೬೩.

೫. ಕೆಂಪು ನಾರಾಯಣ :'ಮುದ್ರಾ ಮಂಜೂಷ' ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ ಬೆಂಗಳೂರು. ೧೯೮೫.

೬. ಗಳಗನಾಥ :'ತಿಲೋತ್ತಮೆ'. ಗಳಗನಾಥ ಸುರಸ ಗ್ರಂಥಮಾಲೆ. ಧಾರವಾಡ ೧೯೧೭.

೭. ಚದುರಂಗ. :'ವೈಶಾಖ'- ಕಾವ್ಯಾಲಯ ಪ್ರಕಾಶನ, ಮೈಸೂರು ೧೯೮೩.

೮. ತ್ರಿವೇಣಿ. :'ಹೂವು-ಹಣ್ಣು'-ಡಿ.ವಿ.ಕೆ ಮೂರ್ತಿ, ಮೈಸೂರು ೧೯೭೫.

೯. ಪುಟ್ಟಣ್ಣ ಎಂ.ಎಸ್. :'ಮಾಡಿದ್ದುಣ್ಣೋ ಮಹಾರಾಯ'. ಕಾವ್ಯಾಲಯ ಪ್ರಕಾಶನ. ಮೈಸೂರು. ೧೯೬೭

೧೦. ಯಶವಂತ ಚಿತ್ತಾಲ. :'ಮೂರು ದಾರಿಗಳು'-ಮನೋಹರ ಗ್ರಂಥಮಾಲೆ, ಧಾರವಾಡ ೧೯೬೪.

೧೧.ವಾಸುದೇವಾಚಾರ್ಯ ಕೆರೂರ :'ಇಂದಿರಾ'. ಉಷಾ ಸಾಹಿತ್ಯ ಮಾಲೆ ಮೈಸೂರು. ೧೯೭೮.

೧೨.ವೆಂಕಟರಾವ್ ಗುಲವಾಡಿ :'ಭಾಗೀರಥಿ'-ಧರ್ಮಪ್ರಕಾಶ ಮುದ್ರಾಕ್ಷರ. ಮಂಗಳೂರು ೧೯೦೦.
'ಇಂದಿರಾ ಬಾಯಿ' ಕನ್ನಡ ಪ್ರಪಂಚ ಪ್ರಕಾಶನ. ಮಂಗಳೂರು ೧೯೬೨.

೧೩. ವೆಂಕಟಾಚಾರ್ಯ ಬಿ. :'ದುರ್ಗೇಶ ನಂದಿನಿ'. ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪೆನಿ. ಬೆಂಗಳೂರು. ೧೯೩೦.

೧೪. ಶಂಕರ ಮೊಕಾಶಿ ಪುಣೆಕರ್. :'ಅವದೇಶ್ವರಿ'-ಗೀತಾ ಬುಕ್ ಹೌಸ್ ಮೈಸೂರು ೧೯೮೯.

೧೫. ಶಾಂತಿನಾಥ ದೇಸಾಯಿ. :'ಮುಕ್ತಿ'-ಮನೋಹರ ಗ್ರಂಥಮಾಲಾ ಧಾರವಾಡ ೧೯೬೧.

೧೬. ಶಿವರಾಮ ಕಾರಂತ. :'ಮೈಮನಗಳ ಸುಳಿಯಲ್ಲಿ'-ರಾಜಲಕ್ಷ್ಮಿ ಪ್ರಕಾಶನ, ಬೆಂಗಳೂರು ೧೯೮೮

***************

ಇ) ಪರಾಮರ್ಶನ ಆಂಗ್ಲ ಗ್ರಂಥಗಳು– ಲೇಖನಗಳು.


1. Lever Katherine :'The Novel and the Reader Appelton Century'. Crofts Inc., New York. 1960.

2. Lucien Goldmann :'Structure Human Reality and Methodological Concept in Structuralist Controversy'.

3. Norris Christopher other :'Deconsturction;Theory and Practice'-Methuen London. 1982.

4. Prabhakara M.S. :'Reinventing Hindutva'. Published in 'Frontline' Magzine dated Sept. 8, 2007.

5. Scholes, Robert :'Structural Fabulation' University Notre Dame. 1975.

6. 'Self-Conscious Structure'- A Study of the British Theatre, 1660-1780; Delhi; Ajanta - Publications 1987.

7. Terence Hawkes :'Stucturalism and Semiotics'. Methuen and Cohtd. 1977.

## ಈ) ಅಧ್ಯಯನ ಪೂರಕ ಸಂದರ್ಶನ.

೧. ದಿನಾಂಕ ೧೯-೧೨-೨೦೦೫ ಸಂಜೆ ೪ ರಿಂದ ೫: ಎಸ್.ಎಲ್.ಭೈರಪ್ಪನವರೊಂದಿಗೆ ನಡೆಸಿದ ಸಂದರ್ಶನ.

೨. ದಿನಾಂಕ ೨೪-೧೦-೨೦೦೮ ರಂದು ಬೆಳಿಗ್ಗೆ ೯ ರಿಂದ ೧೦: ಎಸ್. ಎಲ್. ಭೈರಪ್ಪನವ-ರೊಂದಿಗೆ ನಡೆಸಿದ ಸಂದರ್ಶನ.

೩. ದಿನಾಂಕ ೧೨-೧೦-೨೦೦೫ ರಂದು ಸಂಜೆ ೬ ರಿಂದ ೬.೩೦: ಪ್ರೊ. ಸಿ. ಎನ್. ರಾಮಚಂದ್ರನ್ ಅವರೊಂದಿಗೆ ನಡೆಸಿದ ಸಂದರ್ಶನ.

## ಉ) ಸಂದರ್ಶಿಸಿದ ಗ್ರಂಥಾಲಯಗಳು.

೧. ಕನ್ನಡ ವಿಶ್ವವಿದ್ಯಾನಿಲಯ ಗ್ರಂಥಾಲಯ, ಹಂಪಿ.

೨. ಕರ್ನಾಟಕ ವಿಶ್ವವಿದ್ಯಾನಿಲಯ ಗ್ರಂಥಾಲಯ, ಧಾರವಾಡ.

೩. ಜಿಲ್ಲಾ ಸಾರ್ವಜನಿಕ ಗ್ರಂಥಾಲಯ, ಉಡುಪಿ.

೪. ಬೆಂಗಳೂರು ವಿಶ್ವವಿದ್ಯಾನಿಲಯ ಗ್ರಂಥಾಲಯ, ಬೆಂಗಳೂರು.

೫. ಮಂಗಳೂರು ವಿಶ್ವವಿದ್ಯಾನಿಲಯ ಗ್ರಂಥಾಲಯ, ಮಂಗಳ ಗಂಗೋತ್ರಿ, ಕೋಣಾಜೆ.

೬. ಮೈಸೂರು ವಿಶ್ವವಿದ್ಯಾನಿಲಯ ಗ್ರಂಥಾಲಯ ಮಾನಸಗಂಗೋತ್ರಿ, ಮೈಸೂರು.

## ಊ) ನಿಯತಕಾಲಿಕಗಳು.

೧. 'ಕನ್ನಡ ಅಧ್ಯಯನ'. ಸಂಪುಟ ೧೪, ಸಂಚಿಕೆ ೧, ಜನವರಿ ಯಿಂದ ಜೂನ್ ೨೦೦೮. ಸಂ. ಅಮರೇಶ ನುಗಡೋಣಿ. ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ.

೨. 'ಕಸ್ತೂರಿ' ಮೇ ೧೯೨೨. ಪುಟ ೧೨೧–೧೩೦.

೩. 'ಪ್ರಜಾವಾಣಿ' ಸಂಪುಟ; ೧೮, ಸಂಚಿಕೆ:೧೧, ೧೯೨೬. ಪುಟ ೧–೯.

೪. 'ಪ್ರಬುದ್ಧ ಕರ್ನಾಟಕ' (ಸಂ):೫೫, ಸಂಚಿಕೆ;೩, ೧೯೭೦.

೫. 'ಸಂಕ್ರಮಣ'. ಸಂ. ಚಂದ್ರಶೇಖರ ಪಾಟೀಲ. ಸಂಚಿಕೆ ೨೩೫, ಫೆಬ್ರವರಿ ಯಿಂದ ಮಾರ್ಚ್ ೧೯೯೨.

೬. 'ಸಂಕ್ರಮಣ'. ಸಂ. ಚಂದ್ರಶೇಖರ ಪಾಟೀಲ. ಸಂಚಿಕೆ ೩೪೪, ನವೆಂಬರ್ ನಿಂದ ಡಿಸೆಂಬರ್ ೨೦೦೫.

೭. 'ಸಂಕ್ರಮಣ'. ಸಂ. ಚಂದ್ರಶೇಖರ ಪಾಟೀಲ. ಸಂಚಿಕೆ ೩೬೮, ಮೇ ಯಿಂದ ಜೂನ್ ೨೦೦೬.

************

